# ಕಸ್ತೂರಿ



ಸಪ್ಟೆಂಬರ್, ೧೯೬೨ ಬೆಲೆ: ೭೫ ನ.ಪೈ.

ಇಂದಿನ ವಿಶ್ವಕ್ಕೊಂದು ಬೆಳಕಿಂಡಿ




ನೀವೂ
ಕೊಳ್ಳಲೇಬೇಕು

ಓದಲೇಬೇಕಾದ ವಾರಪತ್ರಿಕೆ: ಕರ್ಮವೀರ

○ ಪ್ರತಿ ಕುಟುಂಬದ
ಯಜಮಾನ ಗೃಹಿಣಿ
ಮಕ್ಕಳು ಪ್ರತಿ ಬುಧವಾರವನ್ನು
ಕುತೂಹಲದಿಂದ ನಿರೀಕ್ಷಿಸುತ್ತಿರುವರು.

○ ಯಜಮಾನ ಕತೆ, ಕಾದಂಬರಿಗಳೊಂದಿಗೆ
ಕುತೂಹಲ ತಣಿಸುವ ಶೈಕ್ಷಣಿಕ, ಐತಿಹಾಸಿಕ,
ರಾಜಕೀಯ ಲೇಖನಗಳಿಗಾಗಿ ಕಾಯುತ್ತಿರುತ್ತಾರೆ.

○ ಗೃಹಿಣಿಗೆ ತನ್ನ ಸಮಸ್ಯೆಗಳ ಬಗೆಗೆ ಇತರರ
ಅನುಭವ ಅರಿಯಬೇಕಾಗಿರುತ್ತದೆ.

○ ಮಗುವಿಗೆ ತಿಳಿವಳಿಕೆ ನೀಡುವ ಲೇಖನ ಹಿರಿಯಣ್ಣನ
ಮಾರ್ಗದರ್ಶನ ಬೇಕಿರುತ್ತದೆ.

○ ಅವರೆಲ್ಲರಿಗೂ ಬೇಕಾದ ವಿಷಯಗಳನ್ನು ಒದಗಿಸುವ ಆಕರ್ಷಕ
ಹೊಸ ರೂಪ ತಳೆದ ಗ್ಲೇಜ ಕಾಗದದಲ್ಲಿ ಮುದ್ರಿತವಾದ
ಮುಖಪತ್ರದೊಂದಿಗೆ ಕರ್ಮವೀರ ಅಂದು ಅವರ ಕೈಸೇರುವುದು.

○ ಧಾರಾವಾಹಿ ಕಾದಂಬರಿ (ಅಖಿಲನ್ನರ
ದೀಪಧಾರಿಣಿ) ಮದನ ಕಾಮನ ಕತೆಗಳು,
ಫ್ಯಾಂಟಮನ ಸಾಹಸದ ಕತೆಗಳು ಚಿತ್ರ
ರಂಗದ ಸುದ್ದಿ ಕುಟುಂಬದ ಹಿರಿ
ಕಿರಿಯರೆಲ್ಲರಿಗೂ ಬೇಕಾದವು.

○ ಲಾಂಗೂಲಾಚಾರ್ಯರ ಓದುಗರೊಡನೆ ಹರಟೆ
ರಾಜ್ಯದ ರಾಜಕಾರಣ, ವ್ಯಕ್ತಿ ಸಂಗತಿ
ದಿಲ್ಲಿಯ ಆಗು ಹೋಗುಗಳು, ಅಂತಾ
ರಾಷ್ಟ್ರೀಯ ರಂಗ ಹಿರಿಯರಿಗೆ ಬೇಕು.

೨೪ ಪುಟಗಳ ಬಿಡಿ ಸಂಚಿಕೆಯ ಬೆಲೆ : ೨೦ ನ. ಪೈ.

ವಾರ್ಷಿಕ ಚಂದಾ :(ದೀಪಾವಳಿ ಸಂಚಿಕೆ ಸೇರಿ) ೧೨ ರೂ.

KARMAVEER, A POPULAR WEEKLY
HUBLI — BANGALORE

# ಕಸ್ತೂರಿ


ಕನ್ನಡ ಡೈಜೆಸ್ಟ್

ಪ್ರತಿ ತಿಂಗಳ ೧ ನೇ ದಿನಾಂಕ ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಬೂಟ್ ಪಾಲಿಶ್

ಚಂದಾ ದರ :

ವಾರ್ಷಿಕ (ಅಂಚೆಸೇರಿ). ರೂ.೬·೦೦
ಅರ್ಧ ವರ್ಷ — ರೂ. ೩·೫೦
ಬಿಡಿಸಂಚಿಕೆ — ರೂ. ೦·೨೫

Kasturi, September 1962


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ


| | | | |
|---|---|---|---|
| ಸಜ್ಜನರ ಸಂಗ | ... | ಶಿವರಾಮ ಗಂಗೋಳಿ | ೧ |
| ಶ್ರೀಮತಿ ರೂಜ್‌ವೆಲ್ಟ್ | ... | ಪಾಂ. | ೩ |
| ಅಮೃತ ಬಿಂದುಗಳು | ... | ಕೆ. ರಮೇಶ ಪೈ | ೭ |
| ನೀವೇ ಹೇಳಿದ್ದು (ವ್ಯಂಗ್ಯ ಚಿತ್ರಗಳು) | ... | ಆರ್. ಕೆ. ಲಕ್ಷ್ಮಣ | ೮ |
| ಮಹಿಳಾ ಪಂಚಾಯತಿ | ... | | ೯ |
| ಗಲಪಗೋಸ್ : ವಿಚಿತ್ರ ಪ್ರಾಣಿಗಳ ಸಜೀವ ಅವಶೇಷ | | | ೧೧ |
| ಮೊಗಲ ವಂಶದ ಸಮಾಪ್ತಿ | ... | " ಕಾದಂಬಿನಿ " | ೧೮ |
| ಇದುವೆ ಜೀವ, ಇದು ಜೀವನ | ... | | ೨೪ |
| ತಂಗಿಗೊಂದು ಪತ್ರ | ... | ಸತ್ಯಕಾಮ ವಿದ್ಯಾಲಂಕಾರ | ೨೬ |
| ೫ ರೂಪಾಯಿ ಕೊಟ್ಟರೆ ವಜ್ರ | ... | ರಾಧಾಕೃಷ್ಣರಾವ್ | ೩೦ |
| ಕಣಜದ ಹುಳ : ಹಾರಾಡುವ ವಿಷಕುಂಭ | | ಗಂಗಾಧರ | ೩೩ |
| ಸಸ್ಯ ಸಾಮ್ರಾಜ್ಯ : ಕ್ಯೂ | ... | ವಿವಿಧ ಮೂಲಗಳಿಂದ | ೩೬ |
| ಏನು ಸಂಬಂಧ? (ಕಥೆ) | ... | ವಿಶ್ವನಾಥ ಸತ್ಯನಾರಾಯಣ | ೪೨ |
| ನಿಮ್ಮ ಶಬ್ದ ಭಾಂಡಾರ ಬೆಳೆಯಲಿ | ... | | ೪೯ |
| ಪ್ರಯೋಗ ನಲಿಕೆಯಲ್ಲಿ ಶಿಶು | ... | ಮುರಲೀಧರ | ೫೨ |
| ಯಹೂದ್ಯ ಸೈನ್ಯಾಧಿಕಾರಿಯ ದುರಂತ... | | ಎಂ. ಎನ್. ಮಹಿಷಿ | ೫೭ |
| ನಗೆಮಲ್ಲಿಗೆ | ... | | ೬೭ |
| ಅಮೇರಿಕದಲ್ಲಿ ಬಟ್ಟೆ ಒಗೆದೆ | ... | " ಅಮೃತ " | ೬೯ |
| ಆಫ್ರಿಕದ ದಿಗಂಬರರು | ... | ಎ. ವಿಷ್ಣುಮೂರ್ತಿ ಹೆಬ್ಬಾರ | ೭೩ |
| ಮುಪ್ಪನ್ನು ಮೋಸಗೊಳಿಸಿರಿ | ... | " ಮನೋರಮಾ " | ೭೬ |
| ಅಂಜೀರಿ ಸೀರೆ (ಕಥೆ) | ... | ಸ್ನೇಹಲತಾ ದಸನೂರಕರ | ೮೨ |
| ಪ್ರಾಚೀನ ಕಾಲದಲ್ಲಿ ಅನ್ನಸತ್ಯಾಗ್ರಹ ... | | " ತ್ರಿಪಥಗಾ " | ೯೦ |
| ನಾನು, ನನ್ನ ಮೂಗು ಮತ್ತು ನೀವು ... | | ಟಿ. ಎಸ್. ಗಲಗಲಿ | ೯೪ |
| ದೃಷ್ಟಿದೋಷದ ಬಗ್ಗೆ ನಿಮಗೇನು ಗೊತ್ತಿದೆ? | | WHO | ೯೯ |
| ಉ ಥಾಂಟ್ : ವಿಶ್ವಸಂಸ್ಥೆಯ ಬರ್ಮೀ ಕಾರ್ಯದರ್ಶಿ | | | ೧೦೭ |

ಪುಸ್ತಕ ಸಂಗ್ರಹ

| | | | |
|---|---|---|---|
| ಚಾಫೇಕರ ಬಂಧುಗಳ ಬಲಿದಾನ | ... | ಶ್ರೀನಿವಾಸ ಹಾವನೂರ | ೧೧೧ |

# ಕಸ್ತೂರಿ



ಸಂಚಿಕೆ ೧ ಸಪ್ಟೆಂಬರ್, ೧೯೬೨ ವರ್ಷ ೭

ಒಂದು ನೀತಿ ಕಥೆ

# ಸಜ್ಜನರ ಸಂಗ

ಶಿವರಾಮ ಗಂಗೋಳಿ

ಒಂದು ದಿನ ದೇವರ್ಷಿಯಾದ ನಾರದನು ಶ್ರೀಕೃಷ್ಣನಿಗೆ ಕೇಳಿದನು: "ಸಜ್ಜನರ ಸಂಗದಿಂದ ಯಾವ ಫಲವುಂಟಾಗುವುದು ?"

ಶ್ರೀಕೃಷ್ಣನು ಉತ್ತರಿಸಿದನು: "ಇಲ್ಲಿಂದ ಪೂರ್ವದಿಕ್ಕಿಗೆ ಒಂದು ತಿಪ್ಪೆಯ ರಾಶಿ ಸಿಗುವವರೆಗೆ ಸಾಗು. ಅಲ್ಲಿ ಒಂದು ಸಗಣಿಯ ಹುಳವಿದೆ. ಅದರ ಬಳಿ ಹೋಗಿ ಈ ಪ್ರಶ್ನೆಯನ್ನು ಕೇಳು."

ಶ್ರೀಕೃಷ್ಣನ ಮಾತಿನ ಮೇರೆಗೆ ನಾರದನು ಆ ಸಗಣಿಯ ಹುಳುವಿನಹತ್ತಿರ ಹೋಗಿ ಕೇಳಿದನು: "ಸಜ್ಜನರ ಸಂಗದ ಫಲವಾವುದು ?"

ನಾರದನು ಈ ಪ್ರಶ್ನೆಯನ್ನು ಕೇಳಿದೊಡನೆ ಆ ಸಗಣಿಯ ಹುಳವು ಸತ್ತುಹೋಯಿತು. ಇದರಿಂದ ನಾರದನಿಗೆ ನಿರಾಶೆಯಾಯಿತು. ಅವನು ಪುನಃ ಶ್ರೀಕೃಷ್ಣನಿದ್ದಲ್ಲಿಗೆ ಬಂದು ನಡೆದ ಸಂಗತಿಯನ್ನು ನಿರೂಪಿಸಿದನು.

ಆಗ ಶ್ರೀಕೃಷ್ಣನು ಹೇಳಿದನು: "ಇಲ್ಲಿಂದ ಉತ್ತರ ದಿಕ್ಕಿನತ್ತ ಸಾಗು. ಅಲ್ಲಿ ಒಂದು ಪುರಾತನ ದೇವಾಲಯವಿದೆ. ಅದರ ಆವಾರದಲ್ಲಿ ಗೂಡನ್ನು ಕಟ್ಟಿಕೊಂಡು ಒಂದು ಪಾರಿವಾಳವು ವಾಸಿಸುತ್ತಿದೆ. ಅದರ ಹತ್ತಿರ ಈ ಪ್ರಶ್ನೆಯನ್ನು ಕೇಳು."

ನಾರದನು ಆ ಪ್ರಕಾರವಾಗಿ ಆ ದೇವಾಲಯಕ್ಕೆ ಹೋದನು ಅಲ್ಲಿ ಒಂದು ಪಾರಿವಾಳವು

ಕುಳಿತಿತ್ತು. ನಾರದನು, "ಸಜ್ಜನರ ಸಂಗದಿಂದ ಏನು ಲಭಿಸುತ್ತದೆ?" ಎಂದು ಕೇಳಿದನು. ಈ ರೀತಿ ಆಡಿದೊಡನೆ ಪಾರಿವಾಳವು ಫಡಫಡ ರೆಕ್ಕೆ ಬಡಿಯುತ್ತ ಮೇಲಕ್ಕೆ ಒಂದು ಬಾರಿ ಹಾರಿತು. ಮರುಕ್ಷಣವೇ ನಾರದನ ಪಾದದ ಬಳಿ ಸತ್ತು ಬಿದ್ದಿತು. ಈ ಘಟನೆಯಿಂದ ಅವನು ವಿಸ್ಮಿತನಾದನು. ತಾನು ವ್ಯರ್ಥವಾಗಿ ಎರಡು ಜೀವಿಗಳ ಮರಣಕ್ಕೆ ಕಾರಣನಾದೆನೆಂದು ನೊಂದುಕೊಂಡು ನಾರದನು ಶ್ರೀಕೃಷ್ಣನಲ್ಲಿಗೆ ಹಿಂತಿರುಗಿದನು. "ನಿನ್ನ ಪ್ರಶ್ನೆಗೆ ಸಮಾಧಾನ ದೊರಕಿತೆ?" ಎಂದು ಶ್ರೀಕೃಷ್ಣನು ಕೇಳಿದನು.

"ಪರಮಾತ್ಮಾ, ನೀನು ಹೇಳಿದಂತೆ ಹೋಗಿ ಸಮಸ್ಯೆಯನ್ನು ಹೇಳಿದೊಡನೆ ಅವು ಸತ್ತುಬಿಳುತ್ತಿವೆ. ನನ್ನ ಸಮಸ್ಯೆಗೆ ಪರಿಹಾರವಂತೂ ದೊರೆಯಲೇ ಇಲ್ಲ."

"ಹಾಗಾದರೆ ನಾರದಾ, ದಕ್ಷಿಣದ ದಾರಿಯಲ್ಲಿ ಒಂದು ಅರಮನೆಯು ದೊರೆಯುತ್ತದೆ. ಅಲ್ಲಿಯ ರಾಜನಿಗೆ ಇದೇ ಈಗ ಜನಿಸಿದ ಒಬ್ಬ ಪುತ್ರನಿದ್ದಾನೆ. ಅಲ್ಲಿಗೆ ಹೋಗಿ ಆ ಶಿಶುವಿಗೆ ನಿನ್ನ ಪ್ರಶ್ನೆಯನ್ನು ಕೇಳು," ಎಂದು ಶ್ರೀಕೃಷ್ಣನು ಹೇಳಿದನು.

ಆಗ ನಾರದನು "ಬೇಡ, ಬೇಡ. ದೇವಾ, ಮೊದಲಿನ ಘಟನೆಗಳಂತೆ ಈ ಬಾರಿಯೂ ಆ ಅರ್ಭಕನ ನಿಧನವಾದರೆ ನಾನು ಇಕ್ಕಟ್ಟಿನಲ್ಲಿ ಸಿಲುಕುವೆನು. ರಾಜದೂತರು ನನ್ನನ್ನು ಸುಮ್ಮನೆ ಬಿಟ್ಟುಬಿಡುವರೇ?" ಎಂದ

"ಇಲ್ಲ. ಇಲ್ಲ. ಹಾಗೇನೂ ಭಯಪಡುವ ಕಾರಣವಿಲ್ಲ. ನೀನು ನಿಶ್ಚಿಂತನಾಗಿ ಅಲ್ಲಿಗೆ ಹೋಗು."

ನಾರದನು ಅಲ್ಲಿಗೆ ಹೋಗಲೊಪ್ಪಲಿಲ್ಲ. ಆದರೆ ಶ್ರೀಕೃಷ್ಣನು ಬಲಾತ್ಕಾರದಿಂದ ನಾರದನನ್ನು ಅಲ್ಲಿಗೆ ಕಳಿಸಿದನು.

ನಾರದನು ಆ ಅರಮನೆಯತ್ತ ಸಾಗಿ ರಾಜಕುವರನ ತೊಟ್ಟಿಲ ಪಕ್ಕದಲ್ಲಿ ನಿಂತು, "ಸಜ್ಜನರ ಸಂಗದಿಂದ ಯಾವ ಫಲವುಂಟಾಗುವುದು?" ಎಂದು ಕೇಳಿದನು.

ಆ ಅರ್ಭಕನು ಒಮ್ಮಿಂದೊಮ್ಮೆ ತೊಟ್ಟಿಲಿನಿಂದ ಕೆಳಗೆ ಹಾರಿದನು. ಆದರೆ ನಾರದನು ಎಣಿಸಿದಂತೆ ಮೃತನಾಗಲಿಲ್ಲ. ಅವನು ಸುರ ರೂಪವನ್ನು ಧರಿಸಿ ನಾರದನೆದುರು ನಿಂತನು. ನಾರದನಿಗೆ ದಿಗ್ಭ್ರಮೆಯಾಯಿತು. ರಾಜಕುಮಾರನು ಹೇಳಿದನು: "ಮಹರ್ಷಿಗಳೇ, ನಾನು ಮೊದಲು ಸಗಣಿಯ ಹುಳುವಾಗಿದ್ದೆ. ಆಗ ನೀವು ನನ್ನ ಹತ್ತಿರ ಬಂದಿದ್ದಿರಿ. ನಾನು ನಿಮ್ಮಂಥ ಸಜ್ಜನರ ಸಂಗದಿಂದ ಆ ರೂಪವನ್ನು ತ್ಯಜಿಸಿ ಪಾರಿವಾಳವಾದೆ. ಪುನಃ ನಿಮ್ಮ ಸಂಗದಿಂದ ರಾಜಕುಮಾರನಾಗಿ ಜನ್ಮವೆತ್ತಿದೆ. ಆ ಬಳಿಕ ನೀವು ಇನ್ನೊಮ್ಮೆ ನಿಮ್ಮ ಸುಸಂಗತಿಯ ಭಾಗ್ಯವನ್ನು ನನಗೆ ಕರುಣಿಸಿದಿರಿ ಹೀಗಾಗಿ ನಾನು ಈಗ ದೈವತ್ವವನ್ನು ಪಡೆದೆ. ಇದೇ ಸಜ್ಜನರ ಸಂಗದ ಫಲ." *



ಎಲ್ಲಿದ್ದರೂ ದಾತನಾಗಿರು, ಯಾಚಕನಾಗಿರಬೇಡ; ಅಂದರೆ ನಿನ್ನ ಕೆಲಸ ಕೇವಲ ನಿನಗಾಗಿಯೆ ಇರದೆ ಸಕಲರಿಗಾಗಿರಲಿ. —ಸ್ವಾಮೀ ರಾಮತೀರ್ಥ

* * *

ದುಡಿಮೆ ಪ್ರತ್ಯಕ್ಷವಾಗಿದೆ, ಭಾಗ್ಯ ಅನುಮಾನವಾಗಿದೆ. ಅನುಮಾನಕ್ಕಿಂತ ಪ್ರತ್ಯಕ್ಷ ಯಾವಾಗಲೂ ಹೆಚ್ಚಿನದು. —ವಸಿಷ್ಠ

ಅವರು ಮಹಾಪುರುಷನ
ಮಹಾಪತ್ನಿಯಾಗಿದ್ದಾರೆ

# ಶ್ರೀಮತಿ ರೂಜ್‌ವೆಲ್ಟ್

ಪಾಂ.

ಮಹಾಪುರುಷರ ಪತ್ನಿಯರು ತಮ್ಮ ಗಂಡಂದಿರ ಮರಣದ ಅನಂತರವೂ ಪ್ರಭಾವಶಾಲಿಗಳಾಗಿರುವುದು ಅಪರೂಪ. ಕೆಲವರು ಗಂಡಂದಿರು ಸಾಯುವ ಮೊದಲೇ ಇಹಲೋಕವನ್ನು ತ್ಯಜಿಸಿ ಜೀವಂತ ವಿಸ್ಮೃತಿಯಿಂದ ತಪ್ಪಿಸಿಕೊಳ್ಳುತ್ತಾರೆ. ಕೆಲವರು ಬೆಳಕಿಲ್ಲದ ದೀವಿಗೆಗಳಾಗಿ ಬಾಳುತ್ತಾರೆ.

ಶ್ರೀಮತಿ ರೂಜವೆಲ್ಟ್ ಹಾಗಲ್ಲ. ಅವರ ಬಗ್ಗೆ ಗೌರವ ದಿನದಿನಕ್ಕೂ ಹೆಚ್ಚುತ್ತಿದೆ. ಹದಿನೇಳು ವರ್ಷಗಳ ಹಿಂದೆ ಅವರ ಗಂಡ ಅಧ್ಯಕ್ಷ ಫ್ರಾಂಕ್ಲಿನ್ ಡಿಲಾನೋ ರೂಜ್‌ವೆಲ್ಟರು ತೀರಿದ ನಂತರ ಅವರು ನಿಜ ಪತಿವ್ರತೆಯಂತೆ ಗಂಡನ ಜೀವಿತ ಧ್ಯೇಯದ ಸಿದ್ಧಿಗಾಗಿ ನಿರಂತರ ದುಡಿದು ಜಗತ್ತಿನ ಅತ್ಯಂತ ಜನಪ್ರಿಯ ಸ್ತ್ರೀಯೆನಿಸಿದ್ದಾರೆ.

೧೯೪೯ ರಲ್ಲಿ—ಪತಿವಿಯೋಗವಾಗಿ ನಾಲ್ಕು ವರ್ಷಗಳ ನಂತರ—ಅಮೇರಿಕದ ಸ್ತ್ರೀ ಮಾಸಿಕವೊಂದು ಕೇಳಿದ ಪ್ರಶ್ನೆಗುತ್ತರವಾಗಿ ಓದುಗರು ಜಗತ್ತಿನ ಅತ್ಯಾದರಣೀಯ ವ್ಯಕ್ತಿ (ಪುರುಷ ಅಥವಾ ಸ್ತ್ರೀ) ಯೆಂದರೆ ಇಲೀನರ್ ರೂಜ್‌ವೆಲ್ಟ್ ಎಂದು ಪ್ರಚಂಡ ಬಹುಮತದಿಂದ ನಿರ್ಣಯಿಸಿದರು. ಅದರ ಹಿಂದಿನ ವರ್ಷ ಇಲೀನರ್ ಇಂಗ್ಲಂಡನ್ನು ಸಂದರ್ಶಿಸಿದಾಗ ಲಂಡನ್ನಿನ "ನ್ಯೂಸ್ ಕ್ರಾನಿಕಲ್" ಪತ್ರಿಕೆ "ಅವರು ಅರಸರೊಡನೆ ನಡೆದವರು, ಆದರೂ ಬಡವರ ಸಂಪರ್ಕ ಕಳೆದುಕೊಳ್ಳದವರು" ಎಂದು ಪ್ರಶಂಸಿಸಿತ್ತು. ಅವರನ್ನು ಕಾಣಲು ಲಂಡನ್ನಿನಲ್ಲಿ ನೆರೆದಿದ್ದ ಜನಸಮೂಹ ಅವರು ಪಕ್ಕದಲ್ಲಿ ಸಾಗುವಾಗ ತಮ್ಮ ಟೊಪ್ಪಿಗೆಗಳನ್ನು ತೆಗೆದು ಗೌರವವನ್ನು ಪ್ರದರ್ಶಿಸಿದ್ದರು.

ಅವರ ಗೌರವ ಅಕಾರಣವಾಗಿಲ್ಲ. ಶ್ರೀಮತಿ ರೂಜವೆಲ್ಟರು ತಮ್ಮ ನಾಡಿನ ರಾಜಕಾರಣದಲ್ಲಿ ಉದಾರ ಮತದ ಪ್ರಬಲ ಪ್ರತಿಪಾದಕರಾಗಿದ್ದಾರೆ; ವಿದೇಶ ನೀತಿಯಲ್ಲಿ ಮಾನವ ಹಿತದ ಪರವಾಗಿ ಹೋರಾಡಿದವರಾಗಿದ್ದಾರೆ; ಅಂತಾರಾಷ್ಟ್ರೀಯ ರಂಗದಲ್ಲಿ ರಾಷ್ಟ್ರ ರಾಷ್ಟ್ರಗಳ ಸ್ನೇಹವನ್ನು ಬೆಸೆಯುವುದಕ್ಕೆ ಪರಿಶ್ರಮಿಸಿದವರಾಗಿದ್ದಾರೆ

ಸ್ವದೇಶದಲ್ಲಿರಲಿ ವಿದೇಶಗಳಲ್ಲಿರಲಿ, ಬಡತನ

ದೈನ್ಯಗಳು ಶ್ರೀಮತಿ ರೂಜ್‌ವೆಲ್ಟರನ್ನು ಕರಗಿಸುತ್ತವೆ. ದಬ್ಬಾಳಿಕೆ ಅವರನ್ನು ಕೆರಳಿಸುತ್ತದೆ. ಅಮೇರಿಕದಲ್ಲಿ ಜನರಿಗೆ ಒಳ್ಳೇ ಮನೆ, ವೈದ್ಯಕೀಯ ಸೌಕರ್ಯ, ಮತ್ತು ಹೆಚ್ಚು ಜೀವನ ಸೌಲಭ್ಯಗಳಿಗಾಗಿ ಅವರು ಎಡೆಬಿಡದೆ ಚಳವಳಿ ಮಾಡಿದ್ದಾರೆ. ಇದು ಬರಿ ಬಯಲಾಡಂಬರವಲ್ಲ ಸ್ವತಃ ಅವರು ಪರಹಿತ ಕಾರ್ಯಗಳಿಗಾಗಿ ಈವರೆಗೆ ಹತ್ತಿಪ್ಪತ್ತು ಲಕ್ಷ ರೂಪಾಯಿ ದಾನ ಮಾಡಿದ್ದುಂಟು. ಪ್ರತಿಯೊಬ್ಬ ಮಾನವನೂ ಸಮಾನನಾಗಿ ಹುಟ್ಟಿದ್ದಾನೆ, ಅವನಿಗೆ ಸ್ವಾತಂತ್ರ್ಯದ ಹಕ್ಕೂ ಇದೆ ಎಂಬ ನಂಬಿಕೆ ಅವರನ್ನು ಇಡೀ ಜಗತ್ತಿಗೆ ಅನ್ವಯಿಸುವ ಮಾನವ ಹಕ್ಕುಗಳ ತಾಮ್ರಪಟವೊಂದಕ್ಕಾಗಿ ಆಂದೋಲನ ಹೂಡಲು ಪ್ರೇರಿಸಿತು. ಮೂರು ವರ್ಷಗಳ ವರೆಗೆ ನಾನಾ ದೇಶಗಳ ಪ್ರಬಲ ವ್ಯಕ್ತಿಗಳನ್ನು ಮನವೊಲಿಸಿದ ನಂತರ ೧೯೪೮ ರಲ್ಲಿ ಸಂಯುಕ್ತ ರಾಷ್ಟ್ರ ಸಂಘವು ಮಾನವ ಹಕ್ಕುಗಳ ಘೋಷಣೆಯೊಂದನ್ನು ಅಂಗೀಕರಿಸಿತು. ಅಂದು ಅವರು ಸಂ. ರಾ. ಸಂಘದ ಸಭಾ ಭವನವನ್ನು ಧೀರ ಗಂಭೀರ ಗತಿಯಿಂದ ಪ್ರವೇಶಿಸಿದಾಗ ಸಮಸ್ತ ದೇಶಗಳ ಪ್ರತಿನಿಧಿಗಳು ಎದ್ದು ನಿಂತು ತಲೆನರೆತ ಈ ಮಾನವತಾಮೂರ್ತಿಗೆ ಗೌರವವನ್ನು ವ್ಯಕ್ತಪಡಿಸಿದರು.

ಅನಾ ಇಲೀನರ್ ರೂಜ್‌ವೆಲ್ಟ್ ೧೮೮೪ ಅಕ್ಟೋಬರ್ ೧೧ ರಂದು ನ್ಯೂಯಾರ್ಕಿನಲ್ಲಿ ಶ್ರೀಮಂತ ಕುಲದಲ್ಲಿ ಹುಟ್ಟಿದರು. ಅವರ ಚಿಕ್ಕಪ್ಪ ಥಿಯೋಡೋರ್ ರೂಜ್‌ವೆಲ್ಟರು ಅನಂತರ ಅಮೇರಿಕದ ಅಧ್ಯಕ್ಷತೆಗೇರಿದರು. ಆದರೆ ಚಿಕ್ಕಂದಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡ ಅನಾ ಇಲೀನರ್‌ಗೆ ಸುಖವಾದ ಬಾಲ್ಯವನ್ನು ಅನುಭವಿಸುವ ಭಾಗ್ಯ ಇರಲಿಲ್ಲ. ಅವರನ್ನು ಸಾಕಿದ ಅಜ್ಜಿ ಬಲು ಕಠೋರ ಶಿಸ್ತಿನ ಪ್ರತಿಪಾದಕರಾಗಿದ್ದರು.

ಫ್ರಾಂಕ್ಲಿನ್ ರೂಜ್‌ವೆಲ್ಟರು ದೂರದ ಸಂಬಂಧಿಕರಾದುದರಿಂದ ಇಲೀನರ್‌ಗೆ ಅಪರಿಚಿತರಾದವರಲ್ಲ. ಒಂದು ದಿನ ಒಂದು ನೃತ್ಯ ಕೂಟದಲ್ಲಿ ಈ ಲಜ್ಜಾವತಿ ತರುಣಿಯ ಮೇಲೆ ಮನಸಾಗಿ ಫ್ರಾಂಕ್ಲಿನ್ ಅವಳನ್ನು ಮದುವೆಯಾಗಲು ಕೇಳಿಕೊಂಡರು. ೧೯೦೫ ರಲ್ಲಿ ವಿವಾಹ ಸಮಾರಂಭ ನೆರವೇರಿತು. ಅಜ್ಜಿಯ ನಿಷ್ಠುರ ಶಿಸ್ತಿನಿಂದ ಪಾರಾಗುವ ಸಂಧಿ ಒದಗಿಸಿದ್ದಕ್ಕಾಗಿಯೆ ಅವರು ಗಂಡನ ಮೇಲೆ ತುಂಬ ಕೃತಜ್ಞರಾಗಿದ್ದರು. ಈ ಕೃತಜ್ಞತೆ ನಲುವತ್ತು ವರ್ಷದ ದೀರ್ಘ ದಾಂಪತ್ಯದಲ್ಲಿ ಎಂದೂ ಕಡಿಮೆಯಾಗಲಿಲ್ಲ.

ಅವಳ ತವರು ಮನೆಯವರು ರಿಪಬ್ಲಿಕನ್ ಪಕ್ಷದವರು; ಆದರೆ ಡೆಮಾಕ್ರೆಟಿಕ್ ಒಲವಿನ ತನ್ನ ಗಂಡನ ಧ್ಯೇಯ ಧೋರಣೆಗಳನ್ನು ತನ್ನವಾಗಿ ಮಾಡಿಕೊಳ್ಳಲು ಇಲೀನರ್‌ಗೇನೂ ಕಷ್ಟವಾಗಲಿಲ್ಲ. ಅವಳ ಪತಿಪ್ರೇಮ ಅಮಿತವಾಗಿತ್ತು. ೧೬ ವರ್ಷದ ಅನ್ಯೋನ್ಯದ ದಾಂಪತ್ಯವನ್ನು ಅನುಭವಿಸಿದಮೇಲೆ ಅನಿರೀಕ್ಷಿತ ವಿಪತ್ತೊಂದು ಬಂದೆರಗಿತು. ಪ್ರಥಮ ಮಹಾಯುದ್ಧ ಕಾಲದಲ್ಲಿ, ತಾರುಣ್ಯದಲ್ಲೇ ನೌಕಾಮಂತ್ರಿಯಾಗಿ ಉಜ್ವಲ ಭವಿಷತ್ತಿನ ಲಕ್ಷಣವನ್ನು ತೋರಿದ ಫ್ರಾಂಕ್ಲಿನ್ ರೂಜ್‌ವೆಲ್ಟ್ ಪೋಲಿಯೋ ರೋಗಕ್ಕೆ ತುತ್ತಾದರು. ಆ ಕಾಲದಲ್ಲಿ ಹೆಚ್ಚು ಕಡಿಮೆ ಮಾರಕವೇ ಆಗಿದ್ದ ಈ ರೋಗದಿಂದ ಫ್ರಾಂಕ್ಲಿನ್ ಪಾರಾಗಿ ಮತ್ತೆ ಮನುಷ್ಯನಾಗಿದ್ದರೆ ಅದಕ್ಕೆ ಹೆಂಡತಿಯ ಅಚಂಚಲ ನಿಷ್ಠೆ ಶುಶ್ರೂಷೆಗಳೇ ಕಾರಣ

ಆದರೆ ರೋಗ ಫ್ರಾಂಕ್ಲಿನ್ನರ ಕಾಲುಗಳನ್ನು ಪೂರ್ಣ ನಿಷ್ಕ್ರಿಯಗೊಳಿಸಿತ್ತು. ಭಾವಿ ಜೀವನವನ್ನೆಲ್ಲ ಅವರು ಸಚಕ್ರ ಕುರ್ಚಿಯ ಮೇಲೆ ನೀಗಿಸಬೇಕಾಗಿತ್ತು. ರೂಜ್‌ವೆಲ್ಟರಂಥ ಚೈತನಶೀಲ ವ್ಯಕ್ತಿಗೆ ಇದು ಅಸಹನೀಯವೇ ಎನಿಸಬಹುದಿತ್ತು. ಆದರೆ ಇಲೀನರ್‌ಗೆ ತನ್ನ ಗಂಡನ ಉಜ್ಜ್ವಲ ಭವಿಷ್ಯತ್ತಿನಲ್ಲಿ ಅಕ್ಷುಣ್ಣವಾದ ವಿಶ್ವಾಸವಿತ್ತು. ಅವರು ಫ್ರಾಂಕಿನ್ನರನ್ನು ಹುರಿದುಂಬಿಸಿ ಪುನಃ ರಾಜಕಾರಣದಲ್ಲಿ ತೊಡಗಿಸಿದರು.

ಅಂದಿನಿಂದ ಇಲೀನರ್ ತಮ್ಮ ಕಾಲಿಲ್ಲದ ಗಂಡನಿಗೆ ಕಾಲುಗಳಾದರು, ಕಣ್ಣುಗಳಾದರು, ಹೆಚ್ಚಿನ ಎರಡು ಭುಜಗಳಾದರು. ಕೆಲವೇ ವರ್ಷಗಳಲ್ಲಿ ಫ್ರಾಂಕ್ಲಿನ್ ರೂಜವೆಲ್ಟರು ರಾಜಕಾರಣದ ತೆರೆಗಳ ತುತ್ತತುದಿಯನ್ನು ಮುಟ್ಟಿದರು. ೧೯೩೨ ರಲ್ಲಿ ಮುಗ್ಗಟ್ಟಿನಿಂದ ನುಗ್ಗಾಗಿದ್ದ ಅಮೇರಿಕವನ್ನು ಮತ್ತೆ ಉತ್ಕರ್ಷದ ಮೆಟ್ಟಲೇರಿಸುವ ಭರವಸೆ ಕೊಟ್ಟು ಅಧ್ಯಕ್ಷ ಪದಕ್ಕೇರಿಸಲ್ಪಟ್ಟರು.

೧೯೩೩ ರಲ್ಲಿ ಶ್ವೇತಭವನದಲ್ಲಿ ಯಜಮಾನಿಯಾಗಿ ಪ್ರವೇಶಿಸಿದ ಇಲೀನರ್ ೧೨ ವರ್ಷ ಕಾಲ ಹಿಂದಾವ ಅಧ್ಯಕ್ಷ ಪತ್ನಿಯೂ ತೋರಿಸದಿದ್ದ ಚಟುವಟಿಕೆ ಯೋಗ್ಯತೆಗಳನ್ನು ಪ್ರದರ್ಶಿಸಿದರು. ಗಂಡನ ಬದಲಾಗಿ ಅವರು ದೇಶವೆಲ್ಲ ಸುತ್ತಿದರು. (೧೯೪೦ ರೊಳಗಾಗಿ ಅವರು ೨,೮೦,೦೦೦ ಮೈಲು ಸಂಚರಿಸಿದ್ದರು) ಹೆಂಡತಿ ತಂದ ವರದಿಗಳ ಆಧಾರದಿಂದ ರೂಜ್‌ವೆಲ್ಟರು ತಮ್ಮ ಯೋಜನೆಗಳನ್ನೂ ಧೋರಣೆಗಳನ್ನೂ ರೂಪಿಸುತ್ತಿದ್ದರು. ಅಮೇರಿಕವನ್ನು ಆರ್ಥಿಕ ಕೆಸರಿನಿಂದ ಮೇಲೆತ್ತಿದ "ನ್ಯೂ ಡೀಲ್" ಕ್ರಮಗಳು ಇಲೀನರ್ ವರದಿಗಳ ಫಲವೇ. ಹೊಲಿಗೇರಿಗಳು ಸ್ವಚ್ಛವಾದವು, ನದೀ ಯೋಜನೆಗಳು ನಿರ್ಮಿತವಾದವು, ತರುಣರಿಗಾಗಿ ಬೇರೆ ಆಡಳಿತ ಕ್ರಮಗಳು ಜಾರಿಗೆ ಬಂದವು.

ಅವರ ಸ್ವಂತ ಬಹುಮುಖ ವ್ಯಕ್ತಿತ್ವ ಆಗಲೇ ಪ್ರದರ್ಶನಕ್ಕೆ ಬಂತು. ಈ ಅವಿರತ ಸಂಚಾರ, ಗೃಹಿಣೀ ಕರ್ತವ್ಯ (ಅವರಿಗೆ ಐದು ಮಕ್ಕಳಿದ್ದವು) ಗಳ ನಡುವೆ ಅವರು ಪತ್ರಿಕಾ ಪರಿಷತ್ತುಗಳನ್ನು ಕರೆಯುತ್ತಿದ್ದರು, ಪತ್ರಿಕೆಗಳಿಗೆ "ನನ್ನ ದಿನಚರಿ" ಎಂಬ ಲೇಖಮಾಲೆಯನ್ನು ಬರೆಯುತ್ತಿದ್ದರು, ಭಾಷಣ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದರು, ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಎರಡನೇ ಮಹಾಯುದ್ಧಾರಂಭವಾದ ಮೇಲೆ ರಣರಂಗಗಳಿಗೆ ಭೆಟ್ಟಿಕೊಟ್ಟು ಬಂದು ಸಾದಾ ಸೈನಿಕರ ಮನೋಭಾವಗಳನ್ನು ಅಧ್ಯಕ್ಷರಿಗೆ ವಿವರಿಸುತ್ತಿದ್ದರು. ಅಮೇರಿಕದ ಅತಿ ಪ್ರಬಲ ಪತ್ರಿಕೆಗಳೂ ಬಲಿಷ್ಠವಾದ ರಿಪಬ್ಲಿಕನ್ ಪಕ್ಷವೂ ನ್ಯಾಯಾಲಯಗಳೂ ವಿರುದ್ಧವಾಗಿದ್ದರೂ ಫ್ರಾಂಕ್ಲಿನ್ ರೂಜ್‌ವೆಲ್ಟರು ತಮಗೆ ಬೇಕಾದ ಕಾಯದೆಗಳನ್ನು ಪಾಸುಮಾಡಿಸಿಕೊಂಡು, ಅತ್ಯಂತ ಜನಪ್ರಿಯ ಅಧ್ಯಕ್ಷರಾಗಿ ಉಳಿದು, ನಾಲ್ಕು ಸಲ ಅಧ್ಯಕ್ಷ ಪದಕ್ಕೆ ಆರಿಸಿ ಬಂದದ್ದು ಆಶ್ಚರ್ಯವಲ್ಲ.

ನಾಲ್ಕನೇ ಬಾರಿ ಅಧ್ಯಕ್ಷ ಪಟ್ಟವೇರಿದ ರೂಜ್‌ವೆಲ್ಟ್ ಕೆಲವೇ ದಿನಗಳಲ್ಲಿ ಅಕಸ್ಮಾತ್ತಾಗಿ ತೀರಿಕೊಂಡರು. ಆದರೆ ಶ್ರೀಮತಿ ರೂಜವೆಲ್ಟ್ ಒಬ್ಬ ಪ್ರಮುಖ ಲೇಖಕ ಹೇಳಿದಂತೆ, "ಮಹಾಹೃದಯವತಿ" ಮಾತ್ರವಲ್ಲ, ಧೀರ ಹೃದಯವತಿಯೂ ಆಗಿದ್ದರೆಂದು ಆ ಸಂದರ್ಭದಲ್ಲಿ ವ್ಯಕ್ತವಾಯಿತು. ಹೊಸ ಅಧ್ಯಕ್ಷ ಹ್ಯಾರಿ ಟ್ರೂಮನ್ನರು, ಶ್ವೇತಭವನದಿಂದ ಹೊರಬೀಳುತ್ತಿದ್ದ ಇಲೀನರ್‌ಗೆ "ನನ್ನಿಂದೇನಾದರೂ ಆಗಬೇಕಿದ್ದರೆ ಹೇಳಿ" ಎಂದಾಗ ಇವರು, "ನನ್ನಿಂದೇನಾಗಬೇಕು ನೀವೇ ಹೇಳಿ" ಎಂದುತ್ತರವಿತ್ತರಂತೆ!

ಶ್ರೀಮತಿ ರೂಜ್‌ವೆಲ್ಟರಿಗಾಗ ೬೧. ಆದರೆ ಅವರು ವಿಶ್ರಮಿಸಲಿಲ್ಲ. ಬದಲಿಗೆ ಇನ್ನೂ ಚುರುಕಾದರು. ೧೯೪೫ ಕೊನೆಗೆ ಅಧ್ಯಕ್ಷ ಟ್ರೂಮನ್ನರು ಅವರನ್ನು ಸಂಯುಕ್ತ ರಾಷ್ಟ್ರಸಂಘದಲ್ಲಿ ಅಮೇರಿಕದ ಪ್ರತಿನಿಧಿಯಾಗಿ ನೇಮಿಸಿದರು. ಕೆಲವೇ ದಿನಗಳಲ್ಲಿ ಶ್ರೀಮತಿ ರೂಜ್‌ವೆಲ್ಟ್ ಪ್ರಜಾತಂತ್ರ ಪಕ್ಷದ ಅತಿ ಪ್ರಬಲ ಪ್ರತಿಪಾದಕರಾದರು. ವಿಶ್ವಸಂಸ್ಥೆಯಲ್ಲಿ ರಶಿಯನ್ನರಿಗೆ ಇದು ಸಹಿಸದೆ ಅವರನ್ನು "ಬಂಡವಳಶಾಹಿಯ ಡಂಭದ ಸೇವಕಿ" ಎಂದು ನಿಂದಿಸುವಷ್ಟಾಯಿತು

ಆದರೆ ಹತ್ತಾರು ವರ್ಷಗಳಲ್ಲಿ ರಶಿಯನ್ನರೇ ತಮ್ಮ ಅಭಿಪ್ರಾಯ ಬದಲಾಯಿಸಬೇಕಾಯಿತು. ೧೯೫೮ರಲ್ಲಿ ಅಮೇರಿಕಕ್ಕೆ ಭೆಟ್ಟಿಕೊಟ್ಟ ಮಿಕೋಯನ್ನರು ಶ್ರೀಮತಿ ರೂಜ್‌ವೆಲ್ಟರ ಮನೆಗೆ ಭೆಟ್ಟಿಕೊಟ್ಟು ಬಂದು ಅವರ ಬಗ್ಗೆ ಪ್ರಶಂಸೋದ್ಗಾರಗಳನ್ನು ತೆಗೆದರು. ಮರುವರ್ಷ ಕ್ರುಶ್ಚೇ-

ವರು ಅಮೇರಿಕಕ್ಕೆ ಬಂದವರು ಐದು ಗಂಟೆ ಕಾಲವನ್ನು ಇಲೀನರ್ ಮನೆಯಲ್ಲಿ ಕಳೆದರು.

ಶ್ರೀಮತಿ ರೂಜ್‌ವೆಲ್ಟ್ ಯಾವಾಗಲೂ ನ್ಯಾಯಪಕ್ಷಪಾತಿಯೇ ಆಗಿದ್ದಾರೆ. ಪಾಲಿಸ್ತಾನ ಪ್ರಶ್ನೆಯಲ್ಲಿ ಅಮೇರಿಕನ್ ಸರಕಾರ ತನ್ನ ಮೂಲ ಭರವಸೆಗಳನ್ನು ಮರೆತು ಬಾಲ ಮಡಚತೊಡಗಿದಾಗ ಇಲೀನರ್ ನಿರ್ಭಯವಾಗಿ ಅದರ ವಿರುದ್ಧ ದನಿಯೆತ್ತಿದ್ದರಿಂದ ಸರಕಾರ ತನ್ನನ್ನು ತಿದ್ದಿಕೊಂಡಿತು. ಸ್ವತಃ ಧರ್ಮಾಭಿಮಾನಿಯಾಗಿದ್ದರೂ ಉದಾರಮತವಾದಿನಿಯಾದ ಅವರು ಧಾರ್ಮಿಕ ಪಂಥಗಳು ನಡೆಸುವ ಶಾಲೆಗಳಿಗೆ ಸರಕಾರ ಸಹಾಯಧನವೀಯುವುದನ್ನು ಬಲವಾಗಿ ವಿರೋಧಿಸಿ ಕೆಥೋಲಿಕ್‌ರ ಅಪ್ರೀತಿಗೆ ಪಾತ್ರರಾದರು. ಹಿಟ್ಲರನ ವರ್ಣಭೇದ ನೀತಿಯನ್ನು ಅವರೆಷ್ಟು ತಿರಸ್ಕರಿಸುತ್ತಿದ್ದರೋ ಅಷ್ಟೇ ನಿರ್ದಾಕ್ಷಿಣ್ಯವಾಗಿ ಅಮೇರಿಕದಲ್ಲಿ ನಿಗ್ರೋಗಳ ವಿರುದ್ಧ ನಡೆಯುವ ಪಕ್ಷಪಾತವನ್ನೂ ಖಂಡಿಸುತ್ತಾರೆ. ಮೊನ್ನೆಮೊನ್ನೆ ಅಮೇರಿಕದ ನಿಗ್ರೋ ಸತ್ಯಾಗ್ರಹಿ ಮಾರ್ಟಿನ್ ಲೂಥರ್ ಕಿಂಗರಿಗೆ ಶಿಕ್ಷೆ ವಿಧಿಸಲ್ಪಟ್ಟಾಗ ಅದನ್ನು ರದ್ದು ಪಡಿಸಬೇಕೆಂದು ಬಿನ್ನಹ ಹೊರಡಿಸಿದವರಲ್ಲಿ ಅವರೊಬ್ಬರು.

ವಿಶ್ವಶಾಂತಿಗಾಗಿ ಅವರು ಬಹಳ ಪರಿಶ್ರಮಿಸಿದ್ದಾರೆ. ರಾಷ್ಟ್ರರಾಷ್ಟ್ರಗಳಲ್ಲಿ ತಿಳಿವಳಿಕೆ ಹೆಚ್ಚಿಸಲು ಅವರು ರಶಿಯಾ ಮೊದಲಾಗಿ ಜಗತ್ತಿನ ಅನೇಕ ದೇಶಗಳಿಗೆ ಭೆಟ್ಟಿಕೊಟ್ಟಿದ್ದಾರೆ. ೧೯೫೨ರಲ್ಲಿ ಅವರು ಭಾರತಕ್ಕೂ ಬಂದರು ಅವರು ಅಮೇರಿಕದ "ಭಾರತ ಸಹಾಯ ಗುಂಪಿ"ನ ಪ್ರಮುಖ ಕಾರ್ಯಕರ್ತ್ರಿಯಾಗಿದ್ದಾರೆ

ಆರ್ತರಿಗೆ ನೆರವಾಗಲು ಅವರ ಹೃದಯ ಯಾವಾಗಲೂ ಹಂಬಲಿಸುತ್ತದೆ. ಕ್ಯೂಬಾದಲ್ಲಿ ಕಾಸ್ಟ್ರೋ ವಿರುದ್ಧ ಬಂಡೆದ್ದು ಸೋತು ಸೆರೆ ಸಿಕ್ಕ ೧೨೦೦ ಜನರನ್ನು ಬಿಡುಗಡೆ ಮಾಡಿ ಅಮೇರಿಕಕ್ಕೆ ಕಳಿಸಬೇಕಾದರೆ ಅಮೇರಿಕ ೫೦೦ ಟ್ರಾಕ್ಟರುಗಳನ್ನು ಕೊಡಬೇಕೆಂದು ಕಾಸ್ಟ್ರೋ ಸಾರಿದಾಗ ಈ ಸೆರೆಯಾಳುಗಳ ಬಿಡುಗಡೆಗಾಗಿ ಟ್ರಾಕ್ಟರ್ ಕೊಳ್ಳಲು ಇಲೀನರ್ ಧನ ಸಂಗ್ರಹಕ್ಕಣಿಯಾದರು.

ಇಂದಿಗೂ ಶ್ರೀಮತಿ ರೂಜ್‌ವೆಲ್ಟ್ ಅಮೇರಿಕದ ರಾಜಕಾರಣದಲ್ಲಿ ಪ್ರಬಲ ಶಕ್ತಿಯಾಗಿದ್ದಾರೆ. ಮೊನ್ನಿನ ಚುನಾವಣೆಯಲ್ಲಿ ಅಡ್ಲಾಯಿ ಸ್ಟೀವನ್‌ಸನ್ನರನ್ನೇ ಅಧ್ಯಕ್ಷ ಚುನಾವಣೆಗೆ ನಿಲ್ಲಿಸಬೇಕೆಂದು ಅವರು ಯತ್ನಿಸಿದ್ದು ಸ್ಟೀವನ್‌ಸನ್ನರ ಅನಿಚ್ಛೆಯಿಂದಲೇ ತಪ್ಪಿತಷ್ಟೇ.

ಶ್ರೀಮಂತ ಕುಲದಲ್ಲಿ ಹುಟ್ಟಿ ಶ್ರೀಮಂತ ಕುಲವನ್ನೇ ಸೇರಿದ್ದರೂ ಇವರು ನಿರಾಡಂಬರವಾಗಿ—ವೇಷದಲ್ಲಿಯೂ ವರ್ತನೆಯಲ್ಲಿಯೂ—ಜೀವಿಸುತ್ತಾರೆ. ತಮ್ಮ ಮನೆಗೆಲಸ ತಾವೇ ಮಾಡಿಕೊಳ್ಳುತ್ತಾರೆ. ಸಾದಾ ಬಸ್, ರೇಲ್ವೆಗಳಲ್ಲೇ ಓಡಾಡುತ್ತಾರೆ. ಶೃಂಗಾರ ಸಾಧನಗಳನ್ನು ಅವರು ಮುಟ್ಟಿದವರಲ್ಲ. ಯಾವ ಚಟವೂ ಅವರಿಗಿಲ್ಲ.

ಅವರ ಕಾರ್ಯಶಕ್ತಿ ಅಪಾರವಾದದ್ದು. ಅವರಿಂದಿಗೂ ಲೇಖಗಳನ್ನು ಬರೆಯುತ್ತಾರೆ, ಭಾಷಣ ಮಾಡುತ್ತಾರೆ, ದೇಶಸಂಚಾರ ಕೈಕೊಳ್ಳುತ್ತಾರೆ. ತಮ್ಮ ಅರವತ್ತನೇ ಹುಟ್ಟುಹಬ್ಬದಂದು ಅವರು "ಅರುವತ್ತಾಗಿ ಹೋಯಿತಲ್ಲಾ, ಇನ್ನೂ ಹದಿನೈದೇ ವರ್ಷ ಜನ ಸೇವೆಗೆ ಉಳಿಯಿತಲ್ಲಾ" ಎಂದಿದ್ದರಂತೆ. ಹದಿನೈದು ಹೋಗಿ ಹದಿನೆಂಟು ವರ್ಷಗಳಾದವು. ಇನ್ನೂ ಶ್ರೀಮತಿ ರೂಜ್‌ವೆಲ್ಟ್ ರಂಗದಲ್ಲಿದ್ದಾರೆ ರಂಗದ ಕೇಂದ್ರದಲ್ಲೇ ಇದ್ದಾರೆ.

*

ದೇವರು ತೊಂಬತ್ತೊಂಬತ್ತು ಮಂದಿ ಸಜ್ಜನರನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ, ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುವ ಒಬ್ಬನೇ ಒಬ್ಬ ವ್ಯಕ್ತಿಯನ್ನು ಪ್ರೀತಿಸುತ್ತಾನೆ.

—ಯೇಸು

# ಅಮೃತ ಬಿಂದುಗಳು

ಒಂದು ಪುಸ್ತಕವು ಓದಲು ಅರ್ಹವಾಗಿದ್ದಲ್ಲಿ ಅದು ಕೊಳ್ಳಲು ಕೂಡಾ ಅರ್ಹವಾಗಿದೆ. —ರಸ್ಕಿನ್

* * *

ಒಂದು ತಪ್ಪನ್ನು ಅಲ್ಲಗಳೆದಾಗ ಎರಡು ತಪ್ಪು ಮಾಡಿದಂತಾಗುತ್ತದೆ.

—ಥೋಮಸ್ ಫುಲ್ಲರ್

* * *

'ತಾನೊಂದು ಬಗೆದರೆ ದೈವವೊಂದಾಲೋಚಿಸಿತು' ಎನ್ನುವುದು ಜೀವನದಲ್ಲಿ ಸೋಲನ್ನೊಪ್ಪಿಕೊಂಡವರಿಗೆ ಸಮಾಧಾನವೀಯುವ ಚತುರ ನಾಣ್ಣುಡಿ.

* * *

ರೋಗವು ಮನುಷ್ಯನನ್ನು ಕೊಲ್ಲಬಹುದು. ಆದರೆ ಅದಕ್ಕಿಂತ ತೀವ್ರವಾಗಿ ಹೆದರಿಕೆ ಅವನನ್ನು ಕೊಲ್ಲುತ್ತದೆ. — ಜೊರ್ಜ್ ಹರ್ಬರ್ಟ್

* * *

ದುಡಿದುಣ್ಣುವ ಜೀವಿಗೆ ನಿದ್ರೆ ಅಮೃತದಷ್ಟು ಸಿಹಿ. —ಬನ್‌ಯಾನ್

* * *

ಮುಖಸ್ತುತಿ ಕೊಳ್ಳುವವನನ್ನೂ ಕೊಡುವವನನ್ನೂ ವಂಚಿಸುತ್ತದೆ. —ಬರ್ಕ್

* * *

ಅವಿವೇಕತನ ತಾರುಣ್ಯದಲ್ಲಿ ಪಾಪ, ಪ್ರಾಯದಲ್ಲಿ ಹುಚ್ಚು.

—ಸಾಮುವೇಲ್ ಡೇನಿಯಲ್

* * *

ಹೇಡಿ ತಾನು ಸುರಕ್ಷಿತನಿದ್ದಾಗ ಮಾತ್ರ ಹೆದರಿಸುತ್ತಾನೆ. —ಗೋಥೇ

* * *

ದೇಶದಲ್ಲಿನ ಎಲ್ಲಾ ರೀತಿಯ ಯಶಸ್ಸು ಮಹಾ ವೃಕ್ಷದಂತೆ ಹಬ್ಬಿದ್ದನ್ನು, ಇನ್ನೂ ಹಬ್ಬುವುದನ್ನು ನೋಡುವಾಗ 'ಇದೆಲ್ಲಾ ಬಹುಮಟ್ಟಿಗೆ ಅರೆಯುಣ್ಣುವ ಮಕ್ಕಳೊಂದಿಗನಾದ ಹಳ್ಳಿಯ ಮಾಸ್ತರನು ಹರಡಿದ ಬೀಜದ ಫಲ' ಎಂಬುವುದೊಂದು ಸೊಲ್ಲು ನನ್ನ ಅಂತರಂಗದಲ್ಲಿ ಸದಾ ಜಿನುಗುತ್ತಿದೆ. —ಪಂಜೆ ಮಂಗೇಶರಾವ್

* * *

ವರ್ತಮಾನದ ಸುಖವನ್ನು ಹೆಚ್ಚು ಮಾಡಲು ಗತಕಾಲದ ದುಃಖವನ್ನು ನೆನೆಯುತ್ತಿರಬೇಕು.

—ಪುಲ್ಲೋಕ್

* * *

ನ್ಯಾಯವು ಕಾಲೋಚಿತವಲ್ಲದಿದ್ದಾಗ ಅದು ಅನ್ಯಾಯವಾಗುತ್ತದೆ.

—ಲೇಂಡರ್

ಸಂಗ್ರಹ : ಕೆ. ರಮೇಶ ಪೈ



ಇದೇ ಬಂದದ್ದು ಸಾರ್— ಚೀನೀಯರು ನಮ್ಮ ಮೇಲೆ ಹೊರಿಸಿದ ಎರಡು ಕಿಲೋಗ್ರಾಂ ಹೊಸ ಆಪಾದನೆಗಳು!

ದೇಶಾದ್ಯಂತದಿಂದ ಈ ಸಭೆಗೆ ಆಗಮಿಸಿದ ತಮಗೆಲ್ಲ ಸುಸ್ವಾಗತ. ಸಭೆ ಮುಂದಿನ ನವಂಬರಕ್ಕೆ ಮುಂದೂಡಲ್ಪಟ್ಟಿದೆ!






ನೋಡಿ! ಮತ್ತೆ ಪೊಟ್ಟಿ ಮಾರಿನ ಪ್ರಕರಣ ಈತ ನನಗೆ ಕಳ್ಳಭಟ್ಟಿ ಸೆರೆ ಅಂತ ಕೊಟ್ಟಿದ್ದಾನೆ ಇವನ್ನ. ಆದರೆ ಇದು ಶುದ್ಧ ನೀರೇ!

ಎಲ್ಲಿಯೋ ಏನೋ ತಪ್ಪಾಗಿದೆ. ಮತ್ತೂ ಮತ್ತೂ ಒಳ್ಳೆ ಹವೆ ಅಂತ ನಾವು ಹವಾಮಾನ ಭವಿಷ್ಯ ಹೇಳಿದರೂ ಇನ್ನೂ ಮಳೆಯೆ ಇಲ್ಲವಲ್ಲ!




'ಟೈಮ್ಸ್ ಆಫ್ ಇಂಡಿಯ' ಕೃಪೆ

# ಮಹಿಳಾ ಪಂಚಾಯತಿ

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂದು ಮನು ಹೇಳಿದ್ದಾನೆ. ಗುಜರಾತಿನ ಪಿಪರ್ಲಾ ಹಳ್ಳಿಯಲ್ಲಿ ಜನ ಇನ್ನೂ ಒಂದು ಹೆಜ್ಜೆ ಮುಂದಿಟ್ಟಿದ್ದಾರೆ. ಅವರು ತಮ್ಮ ಹಳ್ಳಿಯ ಆಗುಹೋಗುಗಳ ಭಾರವನ್ನು ಸ್ತ್ರೀಯರ ಕೈಗೊಪ್ಪಿಸಿದ್ದಾರೆ. ಅಧಿಕಾರ ಸೂತ್ರ ಹೆಂಗಸರ ಕೈಗೆ ಬಂದಿರುವ ಈ ಹಳ್ಳಿಯನ್ನು ಪ್ರಮೀಳಾ ರಾಜ್ಯವೆಂದು ಕರೆಯಬಹುದು.

ಪಿಪರ್ಲಾ ೫೬೮ ಜನವಸತಿಯ ಒಂದು ಸಣ್ಣ ಹಳ್ಳಿ. ಶತ್ರುಂಜಯ ಗುಡ್ಡಗಳಿಂದ ಸುತ್ತುವರಿಯಲ್ಪಟ್ಟು ಭಾವನಗರದಿಂದ ಪಾಲಿಟಾನಾಕ್ಕೆ ಹೋಗುವ ರಸ್ತೆಯ ಮಗ್ಗುಲಲ್ಲಿರುವ ಈ ಹಳ್ಳಿಯ ೩೩೦೮ ಎಕರೆ ಕ್ಷೇತ್ರದಲ್ಲಿ ೮೧೨ ಎಕರೆ ಸಾಗುವಳಿ ಭೂಮಿಯಾಗಿದ್ದು ೩೭೮ ಎಕರೆ ಹುಲ್ಲುಗಾವಲಾಗಿದೆ. ಹಳ್ಳಿಯಲ್ಲಿ ೪೫೦ ದನಕರುಗಳಿವೆ. ಇವರ ಮುಖ್ಯ ಉದ್ಯೋಗ ಒಕ್ಕಲುತನ. ಅನಂತರ ಪಶುಸಂಗೋಪನೆ. ಕೆಲ ಸ್ತ್ರೀಯರು ವಂಶ ಪರಂಪರಂಪರಾಗತವಾಗಿ ಬಂದ ಕಸೂತಿ ಕೆಲಸವನ್ನೂ ಬಿಡುವಿನಲ್ಲಿ ಮಾಡುತ್ತಾರೆ.

ವಿಚಿತ್ರವೆಂದರೆ ಈಗ ಸದ್ಯಕ್ಕೆ ಈ ಹಳ್ಳಿಯ ಪಂಚಾಯತಿ ಸದಸ್ಯರೆಲ್ಲ ಸ್ತ್ರೀಯರೇ ಆಗಿದ್ದಾರೆ. ೧೯೬೨ ರ ಪಂಚಾಯತಿ ಚುನಾವಣೆಯಲ್ಲಿ ಊರ ಜನರೆಲ್ಲ ಸೇರಿ ಎಲ್ಲ ಸ್ಥಳಗಳಿಗೂ ಸರ್ವಾನುಮತದಿಂದ ಸ್ತ್ರೀಯರನ್ನೇ ಆರಿಸಿ ಹಳ್ಳಿಯ ಅಧಿಕಾರ ಸೂತ್ರಗಳನ್ನು ಅವರ ಕೈಗೊಪ್ಪಿಸಿದ್ದಾರೆ. ಈ ಹಳ್ಳಿಯಲ್ಲಿ ಈಗ ಹತ್ತು ವರ್ಷಗಳ ಹಿಂದೆ ಗ್ರಾಮಪಂಚಾಯತಿ ಸ್ಥಾಪಿತವಾದಂದಿನಿಂದ ಇದುವರೆಗೆ ನಡೆದಿರುವ ನಾಲ್ಕು ಚುನಾವಣೆಗಳಲ್ಲಿ ಒಂದರಲ್ಲಾದರೂ ಸ್ಪರ್ಧೆ ನಡೆದುದಿಲ್ಲ. ಪ್ರತಿ ಸಲವೂ ಆಯ್ಕೆ ಸರ್ವಾನುಮತದ್ದೇ ಆಗಿದೆ. ಚುನಾವಣೆ ಸಮೀಪಿಸಿದಾಗ ಊರ ಜನ ಬಹಿರಂಗ ಸಭೆಸೇರಿ ಉಮೇದುವಾರರ ಯಾದಿಯನ್ನು ಸಿದ್ಧಗೊಳಿಸುತ್ತಾರೆ. ಹಿಂದೆ ಆಯ್ಕೆ ಹೊಂದಿದ ಮೇಲೆ ಸರಿಯಾಗಿ ಕರ್ತವ್ಯ ನೆರವೇರಿಸಲು ತಪ್ಪಿದವರ ಸ್ಥಾನದಲ್ಲಿ ಹೊಸಬರನ್ನು ಆಯ್ಕೆ ಮಾಡುತ್ತಾರೆ. ಯಾದಿ ಸಿದ್ಧವಾಯಿತು ಎಂದರೆ ಚುನಾವಣೆ ಮುಗಿದಂತೆಯೆ. ಊರ ಸಭೆ ನಿಲ್ಲಿಸಿದ ಉಮೇದುವಾರರೊಡನೆ ಯಾರೂ ಸ್ಪರ್ಧೆಗೆ ನಿಲ್ಲುವುದಿಲ್ಲ.

ಪಿಪರ್ಲಾಡಲ್ಲಿ ಅಗಲವಾದ ಖಡಿ ರಸ್ತೆಗಳಿವೆ. ಶಾಲೆಯಿದೆ. ದನಕರುಗಳನ್ನು ಸಾಕುವವರ ಸಹಕಾರೀ ಸಂಘವೊಂದಿದೆ. ಪ್ರಗತಿ ಪಥದಲ್ಲಿ ಭರದಿಂದ ಸಾಗಲು ಇಷ್ಟೇ ಸಾಲದು ಎಂದು ಯೋಚಿಸಿದ ಜನ ೧೯೬೨ ರ ಪಂಚಾಯತಿ ಚುನಾವಣೆ ಸಮೀಪಿಸಿದಾಗ ಹೊಸ ಹಾದಿಯೊಂದನ್ನು ಹುಡುಕತೊಡಗಿದರು. ಸೋನಾಗಡದ ಮಹಿಳಾ ಶಿಬಿರದ ಚಟುವಟಿಕೆಗಳಲ್ಲಿ ಭಾಗವಹಿಸಿ ಬಂದಿದ್ದ ಪಿಪರ್ಲಾದ ಕೆಲ ಮಹಿಳೆಯರು ಈ ಚರ್ಚೆಯಲ್ಲಿ ಭಾಗವಹಿಸಿದರು. ಈ ಸಮಯದಲ್ಲಿ ಹೆಂಗಸರ ಕೈಗೆ ಆಡಳಿತ ಸೂತ್ರಗಳನ್ನೊಪ್ಪಿಸಿದರೆ ಹೇಗೆ ? ಎಂಬ ವಿಚಾರ ಈ ಜನರ ತಲೆಯಲ್ಲಿ ಮೂಡಿದ್ದು. ತೊಟ್ಟಿಲು ತೂಗುವ ಕೈ, ದನಕರುಗಳನ್ನು ಸಾಕುವ ಕೈ ಇನ್ನು ಮೂರು ನಾಲ್ಕು ವರ್ಷಗಳ ವರೆಗೆ ಊರಿನ ಯೋಗಕ್ಷೇಮವನ್ನು ನೋಡಿಕೊಳ್ಳಲಾರದೆ? ಜನ ಯೋಚಿಸಿದರು, ವಿಚಾರ ಮಾಡಿದರು, ಚರ್ಚಿಸಿದರು, ನಿರ್ಧಾರಕ್ಕೆ ಬಂದರು. ಪಂಚಾಯತಿಗಾಗಿ ಅವರು ಸರ್ವಾನುಮತದಿಂದ ಆರಿಸಿದ ಏಳು ಜನ ಸ್ತ್ರೀಯರಲ್ಲಿ ಒಬ್ಬಾಕೆ ಹರಿಜನಳು, ನಾಲ್ವರು ಕೋಳಿ ಮತ್ತು ದನಗಾಹಿ ಜಾತಿಯವರು ಮತ್ತು ಇಬ್ಬರು ಬ್ರಾಹ್ಮಣ ಸ್ತ್ರೀಯರು ಇದ್ದಾರೆ.

ಪಿಪರ್ಲಾದ ಮಾಜಿ ಸರಪಂಚರೊಬ್ಬರು ಹೇಳುವಂತೆ ಪಂಚಾಯತಿಯ ಚಟುವಟಿಕೆಗಳಲ್ಲಿ ಹೆಚ್ಚಿನವು ಮೂಲತಃ ಸ್ತ್ರೀಯರ ಕೆಲಸಗಳೇ ಆಗಿವೆ. ಮನೆಯೊಳಗಿನ ಮತ್ತು ರಸ್ತೆಯ ಸ್ವಚ್ಛತೆ, ಹಳ್ಳಿಯ ಭಾವಿ ಮತ್ತು ಕುಡಿಯುವ ನೀರಿನ ಸ್ವಚ್ಛತೆ, ಮಕ್ಕಳ ಯೋಗಕ್ಷೇಮ, ಹೆರಿಗೆ ಕಾರ್ಯ, ಪ್ರಾಥಮಿಕ ವಿದ್ಯಾಭ್ಯಾಸ ಮುಂತಾದವುಗಳೆಲ್ಲ ಗಂಡಸರಿಗಿಂತಲೂ ಹೆಚ್ಚಾಗಿ ಹೆಂಗಸ

ರಿಗೇ ಸಂಬಂಧಪಟ್ಟವಾಗಿವೆ. ಅಂದ ಮೇಲೆ ಪಂಚಾಯತಿಯ ಕಾರ್ಯ ಭಾರವನ್ನು ಅವರಿಗೊಪ್ಪಿಸಿದರೆ ಊರಿನ ಕಲ್ಯಾಣವಾಗದೆ ಹೋದೀತೇ?

ವಿಚಾರ ಕೃತಿಗಿಳಿಯಿತು. ಪಿಪರ್ಲಾದ ಸ್ತ್ರೀ ಪಂಚಾಯತಿಯು ಈ ಕೆಲ ವಾರಗಳಲ್ಲಿ ಮಾಡಿದ ಕಾರ್ಯವು ಭವಿತವ್ಯದ ದ್ಯೋತಕವಾಗಿದ್ದರೆ ಪಿಪರ್ಲಾ ಇನ್ನು ೩-೪ ವರ್ಷಗಳಲ್ಲಿ ತುಂಬ ಪ್ರಗತಿ ಹೊಂದಲಿದೆಯೆಂದು ಖಂಡಿತವಾಗಿ ಹೇಳಬಹುದು. ೧೨ ಗರ್ ಆಕಳುಗಳ ಒಡತಿಯಾದ ೫೮ ವರ್ಷದ ಪ್ರೌಢೆ ಉಜಮ ಬೇನಳ ಹಿರಿತನದಲ್ಲಿ ಈ ಪಂಚಾಯತಿಯು ಊರಿಗೆ ಕುಡಿಯಲು ಶುದ್ಧ ನೀರು, ಶಾಲಾ ಮಕ್ಕಳಿಗೆ ಹಾಲು ಪೂರೈಸುವ ಕೇಂದ್ರ, ಬಾಣಂತಿ ಮತ್ತು ಮಗುವಿನ ಕಲ್ಯಾಣ ಕೇಂದ್ರ, ಅಂಬರ ಚರಕಾ ಮತ್ತು ಹೊಲಿಗೆ ವರ್ಗ, ಶಾಲೆಯ ಆವಾರದಲ್ಲಿ ತೋಟ ನಿರ್ಮಿಸಲು ಒಂದು ಕೈಪಂಪು, ಹೊಗೆಯಾಡದ ಒಲೆಗಳು, ಶಿಶುವಿಹಾರ, ಗೊಬ್ಬರದ ಹೊಂಡಗಳು ಮುಂತಾದವುಗಳನ್ನು ಒದಗಿಸಲು ನಿರ್ಧರಿಸಿದೆ.

ಈ ನಿರ್ಧಾರ ಅಮಲಿನಲ್ಲಿ ಬರತೊಡಗಿದೆ. ಈಗಾಗಲೇ ಗೊಬ್ಬರದ ಗುಂಡಿಗಳು ಸಿದ್ಧವಾಗಿ ಊರಿನ ಹೊಲಸೆಲ್ಲ ಅಲ್ಲೇ ಬಿದ್ದು ಗೊಬ್ಬರವಾಗುತ್ತಿದೆ. ವಿಶ್ವಸಂಸ್ಥೆಯ ನೆರವಿನಿಂದ ಮಕ್ಕಳಿಗೆ ಪ್ರತಿನಿತ್ಯ ಅರ್ಧ ಸೇರು ಹಾಲು ಪೂರೈಸಲಾಗುತ್ತಿದೆ ಪ್ರಸೂತಿ ಕಲ್ಯಾಣ ಕೇಂದ್ರ ತೆರೆಯುವ ಏರ್ಪಾಡು ನಡೆದಿದೆ. ಹಳ್ಳಿಯ ಭಾವಿಯ ಸುತ್ತ ಕಟ್ಟೆ ಕಟ್ಟಿ ಹೊಲಸು ನೀರು ಬೇರೆಡೆ ಸಂಗ್ರಹವಾಗುವಂತೆ ವ್ಯವಸ್ಥೆಯಾಗಿದೆ. ಉಳಿದ ಕಾರ್ಯಗಳೂ ಅಷ್ಟಷ್ಟಾಗಿ ಮುಂದುವರಿಯುತ್ತಲಿವೆ.

ಪಂಚಾಯತಿಯ ಸದಸ್ಯೆಯರು ಉತ್ಸಾಹದಿಂದ, ಆತ್ಮವಿಶ್ವಾಸದಿಂದ ಆದರೆ ಅಷ್ಟೇ ವಿನೀತ ಭಾವದಿಂದ ತಮ್ಮ ಕಾರ್ಯದಲ್ಲಿ ತನುಮನಗಳಿಂದ ದುಡಿಯುತ್ತಿದ್ದಾರೆ. ತಮ್ಮ ಸಂಸಾರದ ಹೊಣೆಗಳನ್ನು ನಿರ್ವಹಿಸುವುದರ ಜೊತೆಗೆ ಬಿಡುವುಮಾಡಿಕೊಂಡು ಗ್ರಾಮಹಿತದ ಕಾರ್ಯಗಳಿಗಾಗಿ ಶ್ರಮಿಸುತ್ತಿದ್ದಾರೆ. ಹರಿಜನ ಸದಸ್ಯೆ ಸೋನಾ ಬೇನಳೊಂದಿಗೆ ಪಂಚಾಯತಿ ಸಭೆಗೆ ಬರುವ ಅವಳ ನಾಲ್ಕು ವರ್ಷದ ಮಗಳು ಬ್ರಾಹ್ಮಣರು, ಕೋಳಿಗಳು, ಮಾಲಧಾರೀ (ದನಗಾಹಿಗಳು) ಮತ್ತು ಹರಿಜನರು ಒಟ್ಟಾಗಿ ಸ್ನೇಹ-ಸಮಾನತೆಯ ಭಾವದಿಂದ ಕಾರ್ಯ ಮಾಡುವುದನ್ನು ನೋಡುತ್ತಾಳೆ.

ಸ್ತ್ರೀಯರಿಗುಚಿತವಾದ ರೀತಿಯಲ್ಲಿ ಅಂದರೆ ಸರಪಂಚಳು ತುಲಸೀ ಗಿಡಕ್ಕೆ ನೀರೆರೆದೊಡನೆ ಪಂಚಾಯತಿಯ ಕಾರ್ಯಕಲಾಪಗಳಿಗೆ ಆರಂಭವಾಗುತ್ತದೆ. ಸದಸ್ಯೆಯರೆಲ್ಲ ತುಲಸಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ಕಾರ್ಯಾರಂಭಗೈಯುತ್ತಾರೆ.

ಆರಂಭದ ಉತ್ಸಾಹ ಕಡೆಯ ತನಕ ಇರುವುದು ಕಡಿಮೆಯಾದರೂ ಪಿಪರ್ಲಾದ ಇದುವರೆಗಿನ ಇತಿಹಾಸವನ್ನು ನೋಡಿದರೆ ಈ ಸ್ತ್ರೀ ಪಂಚಾಯತಿಯ ಕಾರ್ಯ ಶ್ಲಾಘನೀಯವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲವೆನ್ನಬಹುದು.

ಪಿಪರ್ಲಾದ ನೆರೆಹೊರೆಯವರು ಈ ನೂತನ ವಿಧಾನವನ್ನು ಬಲು ಆಸ್ಥೆಯಿಂದ ನಿರೀಕ್ಷಿಸುತ್ತಿದ್ದಾರೆ. ಪಿಪರ್ಲಾದ ಒಬ್ಬಿಬ್ಬರು ದನಗಾಹಿ ಯುವಕರು ನೆರೆಯೂರವರು ತಮ್ಮನ್ನು "ಎಂಥ ಗಂಡಸರಪ್ಪಾ ನೀವು, ಹೆಂಗಸರಿಂದ ಆಳಿಸಿಕೊಳ್ಳುತ್ತಿದ್ದೀರಿ!" ಎಂದು ಕುಚೇಷ್ಟೆಗೈಯುತ್ತಿದ್ದಾರೆಂದು ದೂರಿಕೊಂಡದ್ದೂ ಉಂಟು. ಅದಕ್ಕೆ ಪಿಪರ್ಲಾದ ಹಿರಿಯರೊಬ್ಬರು ಅವರಿಗೆ ಒಂದು ತಥ್ಯವನ್ನು ಹೇಳಿ ಸಮಾಧಾನ ಪಡಿಸಿದರು: "ಇನ್ನೊಮ್ಮೆ ಅವರು ನಿಮಗೆ ಭೆಟ್ಟಿಯಾದಾಗ ಅವರನ್ನು 'ನಿಮ್ಮ ಮನೆಯಲ್ಲಿ ಯಜಮಾನರು ಯಾರು, ನಿಮ್ಮಪ್ಪನೋ ನಿಮ್ಮಮ್ಮನೊ; ನೀನೊ ನಿನ್ನ ಹೆಂಡತಿಯೊ' ಎಂದು ಕೇಳಿ."

ಪಿಪರ್ಲಾದ ಆಗುಹೋಗುಗಳನ್ನು ಅದರ ನೆರೆಹೊರೆಯವರು ಮಾತ್ರವಲ್ಲ, ಎಲ್ಲರೂ ಕುತೂಹಲದಿಂದ ನಿರೀಕ್ಷಿಸುತ್ತಿದ್ದಾರೆ. ಇನ್ನೆರಡು ಮೂರು ವರ್ಷಗಳಲ್ಲಿ ಪಿಪರ್ಲಾ ಹೋಗಿ ನೋಡಿ ಬರಬೇಕಾದಂಥ ಸ್ಥಳ ಎಂದಾದಲ್ಲಿ ಆಶ್ಚರ್ಯವೇನಿಲ್ಲ. *



# ಗಲಪಗೋಸ್--ವಿಚಿತ್ರ ಪ್ರಾಣಿಗಳ ಸಜೀವ ಅವಶೇಷ

ವಿವಿಧ ಮೂಲಗಳಿಂದ

ಇಕ್ವೆಡೋರ್ ದೇಶದಿಂದ ೬೦೦ ಮೈಲು ದೂರದಲ್ಲಿ ಶಾಂತಸಾಗರ ಮಧ್ಯದಿಂದ ಸಾವಿರಗಟ್ಟಳೆ ಅಡಿ ಎತ್ತರಕ್ಕೆ ತನ್ನ ಶಿಖರಗಳನ್ನೂ ಶಿಲಾಭಿತ್ತಿಗಳನ್ನೂ ಎತ್ತಿ ನಿಂತ ಲಾವಾನಿರ್ಮಿತ ದ್ವೀಪಸ್ತೋಮವೊಂದಿದೆ. !ಅದರ ಹೆಸರು ಗಲಪಗೋಸ್ ಎಂದು. ಬಹುಮಟ್ಟಿಗೆ ಬರಡೂ ನಿರ್ಜನವೂ ಆದ ಈ ದ್ವೀಪಸ್ತೋಮಕ್ಕೆ ವಿಜ್ಞಾನದ ಇತಿಹಾಸದಲ್ಲಿ ಮಹತ್ವದ ಸ್ಥಾನವಿದೆ. ಈ ದ್ವೀಪಗಳನ್ನೂ ಅದರ ತೀರ ಪ್ರದೇಶದಲ್ಲಿ ವಸತಿ ಮಾಡಿದ್ದ ವಿಚಿತ್ರ ಪ್ರಾಣಿಗಳನ್ನೂ ನೋಡಿದ ಮೇಲೆಯೆ ಡಾರ್ವಿನ್ನನು ತನ್ನ "ವಿಕಾಸವಾದ" ಸಿದ್ಧಾಂತವನ್ನು ರೂಪಿಸಿದನು. ಈ ಕ್ರಾಂತಿಕಾರಕ ಸಿದ್ಧಾಂತ ಮಂಡಿಸಲ್ಪಟ್ಟಂದಿನಿಂದ ಮಾನವನು ತನ್ನನ್ನೂ ಪ್ರಾಣಿ ಪ್ರಪಂಚವನ್ನೂ ನೋಡುವ ದೃಷ್ಟಿಯೆ ಬದಲಾಗಿಹೋಯಿತು.

ದ್ವೀಪ, ದ್ವೀಪಕ ಮತ್ತು ಹವಳ ದಂಡೆಗಳೆಲ್ಲಸೇರಿ ೩,೦೦೦ ಚದರ ಮೈಲು ವಿಸ್ತಾರವಾದ ಗಲಪಗೋಸ್ ದ್ವೀಪಸ್ತೋಮ ಇಂದು ಇಕ್ವೆಡೋರ್ ದೇಶಕ್ಕೆ ಸೇರಿದ್ದಾಗಿದೆ. ಅನಾದಿಯಲ್ಲಿ ಸಾಗರಗರ್ಭದಿಂದ ಜ್ವಾಲಾಮುಖಿಗಳು ಪುಟಿದೆದ್ದು ಈ ದ್ವೀಪವನ್ನು ನಿರ್ಮಿಸಿದವು. ಕೆಲ ಜ್ವಾಲಾಮುಖಿ ಶಿಖರಗಳು ೫,೦೦೦ ಅಡಿ ಎತ್ತರದ ವರೆಗೂ ಇವೆ. ಕೆಲವು ಈಗಲೂ ಆಗಾಗ್ಗೆ ಸಿಡಿದೆದ್ದು ಲಾವಾ ರಸವನ್ನು ಉಗುಳುತ್ತಿವೆ.

ಗಲಪಗೋಸ್ ದ್ವೀಪಸ್ತೋಮ ನೋಡಲು ಅತ್ಯಂತ ಅನಾಕರ್ಷಕವಾಗಿದೆ. ಅದರ ದ್ವೀಪಗಳ ತೀರ ಪ್ರದೇಶದಲ್ಲಿ ಮುಳ್ಳುಗಂಟಿ ಮತ್ತು ಕಳ್ಳಿ ಗಿಡಗಳಲ್ಲದೆ ಬೇರೇನೂ ಬೆಳೆಯುವುದಿಲ್ಲ. ಒಳನಾಡಿಗೆ ಹೋದರೆ ಮಾತ್ರ ಪರ್ವತಗಳ ತಪ್ಪಲುಗಳಲ್ಲಿ ಹುಲುಸಾದ ಮರಗಿಡಗಳು ಸಿಗುವವು. ೧೫೩೫ ರಲ್ಲಿ ಪನಾಮಾದ ಬಿಶಪ್ ಮೊಟ್ಟ ಮೊದಲು ಕಂಡುಹಿಡಿದ ಈ ದ್ವೀಪಗಳನ್ನು ಅನೇಕ ತಲೆಮಾರುಗಳ ನಾವಿಕರು ಭಯದಿಂದ ನೋಡಿದ್ದರು; ಅತ್ಯಂತ ವಿಚಿತ್ರವಾದ ಆಕರ್ಷಣೆಯಿಂದ ಇಲ್ಲಿನ ಕೆಲ ದ್ವೀಪಗಳು ಸಮೀಪ ಬಂದ ಹಡಗುಗಳನ್ನು ತಮ್ಮತ್ತ ಸೆಳೆದುಕೊಳ್ಳುವುದನ್ನೂ ಕೆಲವೊಮ್ಮೆ ತೀರವನ್ನು ಸಮೀಪಿಸಿದ ಹಡಗುಗಳನ್ನು ದೂರ ತಳ್ಳುವುದನ್ನೂ ಕಂಡು ಸ್ಪಾನಿಶ್ ನಾವಿಕರು ಇವಕ್ಕೆ "ಮಾಯಕದ ದ್ವೀಪಗಳು" ಎಂದೂ ಹೆಸರಿಟ್ಟಿದ್ದರು. ಇಲ್ಲಿ ಬಂದು ಬಿದ್ದರೆ ಕುಡಿಯುವ ನೀರು ಸಹಿತ ಸಿಗುವುದು ಅಸಾಧ್ಯಪ್ರಾಯವಾಗಿತ್ತು

ಎಷ್ಟೋ ಕಾಲ ಕಡಲುಗಳ್ಳರ ಬೀಡಾಗಿದ್ದ ಗಲಪಗೋಸ್ ದ್ವೀಪಸ್ತೋಮಕ್ಕೆ ಚಾರ್ಲಸ್



ಡಾರ್ವಿನ್ ೧೮೩೧ ರಲ್ಲಿ "ಬೀಗಲ್" ಹಡಗಿನಲ್ಲಿ ಸರ್ವೇ ಕಾರ್ಯಕ್ಕಾಗಿ ಬಂದಾತ ವಿಕಾಸವಾದ ಸಿದ್ಧಾಂತದೊಡನೆ ಮರಳಿ ಹೋಗುವಂತಾಯಿತು.

ಗಲಪಗೋಸ್ ದ್ವೀಪಗಳು ಎಂದೂ ದಕ್ಷಿಣ ಅಮೇರಿಕ ಅಥವಾ ಇತರ ಭೂಖಂಡಕ್ಕೆ ತಗಲಿದ್ದಿಲ್ಲ. ಆದ್ದರಿಂದಲೇ ಇಲ್ಲಿ ಜಗತ್ತಿನ ಬೇರಾವ ಭಾಗದಲ್ಲಿಯೂ ಕಂಡು ಕೇಳಿರದ ಪ್ರಾಣಿಗಳೂ ಸಸ್ಯಗಳೂ ಇವೆಯೆಂದು ಡಾರ್ವಿನ್ ಸರಿಯಾಗಿಯೆ ತರ್ಕಿಸಿದ. ಬಹಳ ಪುರಾತನ ಕಾಲದಲ್ಲಿ ಸಾಗರ ಧಾರೆಗಳ ಗುಂಟವೋ ತೆರೆಗಳ ಮೇಲೋ ಬಿರುಗಾಳಿಗೆ ಸಿಲುಕಿಯೋ ಪ್ರಾಣಿಗಳೂ ಸಸ್ಯಗಳೂ ಈ ಬಂಜರು ದ್ವೀಪಗಳನ್ನು ಸೇರಿರಬೇಕು.

ಇಲ್ಲಿನ ಸ್ಥಿತಿಗತಿಗಳಲ್ಲಿ ಬದುಕಿ ಬಾಳಬಲ್ಲ ಪ್ರಾಣಿಗಳು ಹೊರ ಜಗತ್ತಿನಿಂದ ಸ್ವತಂತ್ರವಾದ ತಮ್ಮವೇ ವೈಶಿಷ್ಟ್ಯಗಳನ್ನು ರೂಪಿಸಿಕೊಂಡು ಅಭಿವೃದ್ಧಿ ಹೊಂದಿದವು. ಇಲ್ಲಿ ಕಾಣಸಿಗುವ ೮೯ ಜಾತಿಯ ಪಕ್ಷಿಗಳಲ್ಲಿ ೭೭ ಜಾತಿಗಳು ಗಲಪಗೋಸ್‌ನಲ್ಲಿ ಮಾತ್ರವೇ ಇವೆ. ದಕ್ಷಿಣ ಅಮೇರಿಕ ಅಸಂಖ್ಯ ಜಾತಿಯ ಹಾವುಗಳ ತವರುಮನೆಯಾಗಿದ್ದರೂ ಗಲಪಗೋಸ್‌ನಲ್ಲಿರುವುದು ಕೇವಲ ಒಂದೇ ಜಾತಿಯ ಹಾವು. ಭೂನಿವಾಸಿ ಸಸ್ತನಿಗಳ ಪೈಕಿ ಗಬ್ಬಿಲ ಮತ್ತು ಇಲಿ ಮಾತ್ರವೇ ಇಲ್ಲಿ ಸಿಗುತ್ತವೆ.

ಆದರೆ ಗಲಪಗೋಸ್‌ಲ್ಲಿ ಬಂದಿಳಿದರೆ ನಿಮ್ಮನ್ನು ಚಕಿತಗೊಳಿಸುವವು ಇಲ್ಲಿನ ಉರಗಗಳು. ನೀವು ಒಮ್ಮೆಲೇ ಭೂಮಿಯ ಇತಿಹಾಸದಲ್ಲಿ ಕೋಟ್ಯಂತರ ವರ್ಷ ಹಿಂದೆ ಸಾಗಿದಂತೆ ಭಾಸವಾಗುವುದು. ಮೂರಡಿ ಉದ್ದವಾದ ಹಲ್ಲಿಗಳನ್ನು ನೀವಿಲ್ಲಿ ಕಾಣುವಿರಿ: "ಸಮುದ್ರ ಇಗುವಾನಾ" ಎಂಬ ಅನ್ಯತ್ರ ಅಲಭ್ಯವಾದ ಈ ಪ್ರಾಣಿಗಳು ಹಿಂಡುಹಿಂಡಾಗಿ ದಂಡೆಯ ಬಂಡೆಗಳ ಮೇಲೆ ಬಿಸಿಲು ಕಾಯಿಸುತ್ತಿರುತ್ತವೆ. ಒಂದು ಗಜ ವ್ಯಾಸದ ಚಿಪ್ಪುಗಳುಳ್ಳ ಆವೆಗಳು ಇಲ್ಲಿ ವಾಸಿಸುತ್ತವೆ. ನಿಜವಾಗಿ ಇವುಗಳಿಂದಲೇ ಈ ದ್ವೀಪಗಳಿಗೆ ಆ ಹೆಸರು ಬಂದದ್ದು. "ಗಲಪಗೋಸ್" ಎಂದರೆ ಸ್ಪಾನಿಶ್ ಭಾಷೆಯಲ್ಲಿ ಆವೆ ಎಂದರ್ಥ.

ಇಲ್ಲಿನ ನೈಸರ್ಗಿಕ ಪ್ರಾಣಿವರ್ಗಕ್ಕೆ ಬಿಳಿ ಮಾನವ ಇದನ್ನು ಕಂಡುಹಿಡಿದ ಮೇಲೆ ತನ್ನವೇ ದೇಯಗಳನ್ನು ಸೇರಿಸಿದ್ದಾನೆ. ಹದಿನೆಂಟನೇ ಶತಮಾನದಲ್ಲಿ ಇಲ್ಲಿ ತಳವೂರಿದ ಕಡಲುಗಳ್ಳರೂ ಸಾಹಸಿಗಳೂ ಆಹಾರಕ್ಕಾಗಿ ಆಡುಗಳನ್ನೂ ದನಕರುಗಳನ್ನೂ ಸಾಗಣಿಕೆಗಾಗಿ ಕುದುರೆಗಳನ್ನೂ ಕತ್ತೆಗಳನ್ನೂ ತಂದರು. ಸಸ್ಯವರ್ಗದಲ್ಲಿ ಕಿತ್ತಳೆ, ಬಾಳೆಗಳನ್ನೂ ಬೆಳೆಸಿದರು. ಆದರೆ ಇಲ್ಲಿನ ನಿರ್ಜಲ ಭೂಮಿಯಲ್ಲಿ ಬಾಳಲಾರದೆ ಅವರು ಇಲ್ಲಿಂದ ತಳ ಕಿತ್ತ ಮೇಲೆ ಈ ಪ್ರಾಣಿಗಳೂ ಸಸ್ಯಗಳೂ ಕಾಡುಸಿತಿಗೆ ಬಂದವು. ಇಂದು ಇಲ್ಲಿ ಆಡುಗಳೂ ದನಕರುಗಳೂ ಕುದುರೆ ಕತ್ತೆಗಳೂ ಕಾಡು ಸ್ಥಿತಿಯಲ್ಲಿ ಹಿಂಡುಹಿಂಡಾಗಿ ಹುಲುಸಾದ ತಪ್ಪಲು ಪ್ರದೇಶಗಳಲ್ಲಿ ಅಲೆಯುತ್ತವೆ.

ಗಲಪಗೋಸ್ ದ್ವೀಪಗಳ ಪ್ರಾಣಿಗಳು ತಮ್ಮ ರೂಪ ಗಾತ್ರಗಳಿಂದಷ್ಟೇ ನಿಮ್ಮನ್ನು ಅಚ್ಚರಿಗೊಳಿಸುವುದಿಲ್ಲ ಅವು ಕಪಟವನ್ನೇ ಅರಿಯವು. ಟವರ್ ದ್ವೀಪದಲ್ಲಿಳಿದು ಕೆಲ ದೂರ ಹೋಗುವುದರೊಳಗೇ ಪಕ್ಷಿವಸತಿಗಳು ಕಾಣಸಿಗುವವು. ಆದರೆ ನೀವು ಸಮೀಪಿಸುವುದನ್ನು ಕಂಡು ಅವು ಸ್ವಲ್ಪವೂ ಗಾಬರಿಗೊಳ್ಳುವುದಿಲ್ಲ. ಆರಡಿ ವಿಶಾಲವಾದ ರೆಕ್ಕೆಯಳವುಳ್ಳ ದೈತ್ಯ ಕರೀ ಫ್ರಿಗೇಟ್ ಪಕ್ಷಿಗಳನ್ನು ನೀವು ಹಿಡಿದಪ್ಪಿಕೊಂಡರೂ ಅವು ಪ್ರತಿಭಟಿಸುವುದಿಲ್ಲ. ಹಾರಾಡಲು ಬಾರದ ನೀಲಿ ಪಾದದ ಬೂಬಿ ಹಕ್ಕಿಗಳ ಮರಿಗಳನ್ನು ನೀವು ಓಲೈಸಿದರೆ ಅವುಗಳ ತಾಯಂದಿರು ಖುಶಿಯಿಂದ ನೋಡುತ್ತ ನಿಲ್ಲುತ್ತವೆ. ಥ್ರಶ್ ಪಕ್ಷಿಗಳು ನಿಮ್ಮ ಕಾಲಬುಡದಲ್ಲೇ ಬಂದಿಳಿಯುತ್ತವೆ. ಹದ್ದುಗಳು ನಿಮ್ಮನ್ನು ನೋಡಿ ಕುತೂಹಲ ತಾಳಲಾರದೆ ನಿಮ್ಮ ಹತ್ತಿರವೇ- ಕೈಗೆ ಎಟಕುವಷ್ಟು ಹತ್ತಿರ- ಇರುವ ಬಂಡೆಯ ಮೇಲೆ ಇಳಿದು ನಿಮ್ಮನ್ನು ಪರಿ

ಶೀಲಿಸುತ್ತವೆ.

ಬಹುಶಃ ಈ ಸಾಗರಪರೀತ ದ್ವೀಪಗಳ ನಿವಾಸಿಗಳು ದೊಡ್ಡ ಕ್ರೂರ ಪ್ರಾಣಿಗಳನ್ನೇ ಅರಿಯವಾದ್ದರಿಂದ ಅವುಗಳ ಪ್ರಕೃತಿಯಲ್ಲಿ ಭಯದ ವಾಸನೆ ಆನುವಂಶಿಕವಾಗಿ ಇಳಿದು ಬಂದೇ ಇಲ್ಲ. ಇದಕ್ಕೆ ಇಲ್ಲಿಯ ಸಮುದ್ರ ಇಗುವಾನಾ ಹಲ್ಲಿಗಳೆ ಸಾಕ್ಷಿ. ನೋಡಲು ಭಯಾನಕವಾಗಿ ಕಾಣುವ, ಬೆನ್ನೆಲುಬಿನುದ್ದಕ್ಕೂ ಒರಟಾದ ಮುಳ್ಳುಗಳಿಂದಲೂ ಉಗ್ರ ನಖಗಳಿಂದಲೂ ಸಜ್ಜಿತವಾದ, ಈ ಪ್ರಾಣಿಯನ್ನು ಬಾಲದಿಂದ ಹಿಡಿದೆತ್ತಿದರೆ ಅದು ತುಂಬ ಮಿಡುಕಾಡಿ ಹೊಯ್ದಾಡಿದರೂ ನಿಮಗೇನೂ ಅಪಾಯ ಮಾಡದು. ಅದನ್ನು ನೀರಿಗೆ— ಅದು ಚಿಕ್ಕ ಹೊಂಡವೇ ಇರಲಿ— ಒಗೆದರೆ ಕೂಡಲೇ ಅಲ್ಲಿಂದ ಪಾರಾಗಿ ನಿಮ್ಮ ಪಾದದ ಬುಡಕ್ಕೆ ಓಡಿ ಬರುತ್ತದೆ. ನೀವೆಷ್ಟು ಸಲ ಒಗೆದರೂ ಅದು ತನ್ನೀ ವರ್ತನೆಯನ್ನು ಬದಲಾಯಿಸುವುದಿಲ್ಲ. ಡಾರ್ವಿನ್ ನೂರಿಪ್ಪತ್ತೈದು ವರ್ಷಗಳ ಹಿಂದೆ ಇದನ್ನು ಗಮನಿಸಿದವನು ಇದರ ಕಾರಣ ಊಹಿಸಿದ್ದಾನೆ: ಗಲಪಗೋಸ್ ಸುತ್ತಲ ಸಮುದ್ರ ಕ್ರೂರ ಶಾರ್ಕ್ ಮೀನುಗಳಿಂದ ತುಂಬಿದೆ. ಆದರೆ ದ್ವೀಪಗಳಲ್ಲಿ ಬೇಟೆಯಾಡುವ ಪ್ರಾಣಿಗಳೇ ಇಲ್ಲ. ಆದಕಾರಣ ನೀರೆಂದರೆ ಅಪಾಯ, ನೆಲವೆಂದರೆ ನಿರ್ಭಯ ಎಂಬ ವಾಸನೆ ಇಗುವಾನಾಗಳ ರಕ್ತದಲ್ಲಿ ಇಳಿದು ಬಂದಿದೆ.

ಗಲಪಗೋಸ್‌ನ ನಿರ್ಜಲ ಭೂಮಿ ಮಾನವನಿಗೆ ಅನಾಕರ್ಷಕವಾಗಿದ್ದರೂ ಅದರ ಹವೆ ಆದರ್ಶವಾಗಿದೆ. ಶೀತಲ ಸಾಗರಧಾರೆಯೊಂದು ಅದರ ಬಳಿ ಹರಿಯುತ್ತಿರುವುದರಿಂದ ನೆಟ್ಟಗೆ ಭೂಮಧ್ಯರೇಖೆಯ ಮೇಲೆಯೇ ಈ ದ್ವೀಪಗಳು ಇದ್ದರೂ ಅದರ ಗಾಳಿ ಆಹ್ಲಾದಕರವಾಗಿದೆ. ಒಳನಾಡಿನ ತಪ್ಪಲುಪ್ರದೇಶಗಳಲ್ಲಿ ಮಳೆ ಬೀಳುವುದರಿಂದ ಅಲ್ಲಿ ಸಮೃದ್ಧವಾಗಿ ಸಸ್ಯಗಳು ಬೆಳೆಯುತ್ತವೆ.

ಶೀತಲ ಸಾಗರ ಧಾರೆಗಳೊಡನೆ ಗಲಪಗೋಸ್ ದ್ವೀಪಗಳಿಗೆ ಅನಿರೀಕ್ಷಿತ ಅತಿಥಿಗಳ ಆಗಮನವಾಗಿದೆ. ಸೀಲ್ ಮೀನು, ಸಮುದ್ರ ಸಿಂಹ, ಪೆಂಗ್ವಿನ್ ಪಕ್ಷಿ ಮುಂತಾದ ಶೀತವಲಯದ ಜೀವಿಗಳು ಇಲ್ಲಿ ಬಂದು ವಸತಿ ಮಾಡಿ ಇಲ್ಲಿನ ಗುಣಧರ್ಮಗಳನ್ನೇ ರಕ್ತಗತ ಮಾಡಿಕೊಂಡಿವೆ.

ಸಮುದ್ರ ಸಿಂಹಗಳು ಹೆಸರಿಗ ಮಾತ್ರ ಸಿಂಹಗಳು. ಕೊಬ್ಬಿದ ಮೈಯ ಈ ಸಿಂಹಗಳನ್ನು ಕುರಿತು ಪ್ರಸಿದ್ಧ ಜರ್ಮನ್ ಪ್ರಾಣಿಶಾಸ್ತ್ರ ಐಬಲ್-ಐಬೆಸ್‌ಫೆಲ್ಡರು ಹೀಗೆ ಬರೆಯುತ್ತಾರೆ: "ಒಸ್‌ಬೋರ್ನ್ ದ್ವೀಪದಲ್ಲಿ (ಗಲಪಗೋಸ್‌ನಲ್ಲಿ ಒಂದು) ಒಂದು ಸಮುದ್ರ ಸಿಂಹಗಳ ವಸತಿಗೆ ನಾನು ಅತಿಥಿಯಾಗಿ ಹೋದೆ. ಹಿಂಡಿನ ನಡುವೆಯೇ ನಾನು ಹೋದಾಗ ಅಲ್ಪಸ್ವಲ್ಪ ಆಶ್ಚರ್ಯದ ಲಕ್ಷಣಗಳು ಪ್ರಕಟವಾದರೂ ದ್ವೇಷ ಇಲ್ಲವೆ ವಿರೋಧದ ಸೂಚನೆಯೆ ಕಾಣಿಸಲಿಲ್ಲ. ಹಿಂಡಿನ ನಾಯಕನಾದ ಒಂದು ಮುದಿ ಗಂಡು ಮಾತ್ರ ಮೈಯನ್ನು ನಿಡಿದಾಗಿ ಚಾಚಿ ಭಯಪ್ರದರ್ಶಕ ಭಂಗಿಯಿಂದ ನನ್ನನ್ನು ಸಮೀಪಿಸಿತು. ನಾನೂ ಎದ್ದುನಿಂತೆ. ನನ್ನ ಎತ್ತರ ನೋಡಿ ಬಹುಶಃ ಅದಕ್ಕೆ ನಾನು ತನಗಿಂತಲೂ ದೊಡ ಪ್ರಾಣಿಯೆಂದು ಮನವರಿಕೆಯಾಗಿ ಅದು ನನ್ನ ಅಸ್ತಿತ್ವವನ್ನು ಸೈರಿಸಲು ನಿರ್ಧರಿಸಿತು. ಸ್ವಲ್ಪ ಹೊತ್ತಿನ ನಂತರ ಒಂದು ಎಳೆವರೆಯದ ಹೆಣ್ಣು ನನ್ನ ಕಾಲ ಬುಡಕ್ಕೇ ಬಂದು ತನ್ನ ದುಂಡು ಕಣ್ಣುಗಳಿಂದ ನನ್ನನ್ನು ನೋಡಿ ನನ್ನ ಬೂಟುಗಳನ್ನು ಕಡಿಯುವಂತೆ ಮಾಡಿ ಆಮೇಲೆ ಹಾಗೇ ನಿದ್ದೆಹೋಯಿತು."

ಆದರೆ ಈ ದ್ವೀಪಗಳ ಎಲ್ಲಕ್ಕೂ ದೊಡ್ಡ ಆಕರ್ಷಣೆಯೆಂದರೆ ಅದರ ದೈತ್ಯ ಕೂರ್ಮಗಳು. ಡಾರ್ವಿನ್ ಇಲ್ಲಿಗೆ ಬರುವ ಮೊದಲು ಇಲ್ಲಿ ಎಲ್ಲೆಲ್ಲಿಯೂ ಈ ಕೂರ್ಮಸಾಮ್ರಾಜ್ಯವೇ ಹಬ್ಬಿತ್ತು. ಸಾವಿರಗಟ್ಟಳೆಯಲ್ಲಿ ಅವು ಇಲ್ಲಿ ಓಡಾಡುತ್ತಿದ್ದವು. ಬೆಳೆದ ಗಲಪಗೋವೊಂದು ೫೦೦ ಪೌಂಡಿನ ವರೆಗೂ ತೂಗಬಹುದು. ಇಂದು

ಕೂಡ ಒಂದು ಆವೆಯನ್ನು ಎತ್ತಲು ನಾಲ್ಕು ಜನ ಸಶಕ್ತ ಮನುಷ್ಯರು ಬೇಕಾಗುವುದು. ಈ ನೆಲಆವೆಗಳು ಭೂಮಿಯಲ್ಲಿ ತತ್ತಿಯಿಡುತ್ತವೆ. ಅಲ್ಲಿಯೆ ಅವು ಮರಿಯಾಗುತ್ತವೆ. ಡಾರ್ವಿನ್ ಅನೇಕ ದ್ವೀಪಗಳಲ್ಲಿ ಇವುಗಳನ್ನು ಕಂಡನು. ಒಂದೊಂದು ದ್ವೀಪದಲ್ಲೂ ಅವು ಬೇರೆ ಬೇರೆ ವಿಶಿಷ್ಟ ಲಕ್ಷಣಗಳನ್ನು ಬೆಳಸಿಕೊಂಡಿದ್ದವು. ಈ ಲಕ್ಷಣವೈವಿಧ್ಯವೇ ಡಾರ್ವಿನ್ನನಿಗೆ ತನ್ನ ವಿಕಾಸ ವಾದ ಸಿದ್ಧಾಂತಕ್ಕೆ ನಿಶ್ಚಿತ ಪ್ರಮಾಣಗಳನ್ನೊದ ಗಿಸಿದ್ದು.

ಶತ್ರುರಹಿತ, ಸುಲಭ ಜೀವನೋಪಾಯ ವುಳ್ಳ ಕ್ಷೇತ್ರದಲ್ಲಿ ಪ್ರಾಣಿಗಳು ಹೇಗೆ ರೂಪಾಂತರ ಹೊಂದುವವೆಂಬುದಕ್ಕೆ ಗಲಪಗೋಸ್ ನಿಸರ್ಗದ ಪ್ರಯೋಗಶಾಲೆಯಂತಿದೆ. ಲಕ್ಷ ಲಕ್ಷಾಂತರ ವರ್ಷಗಳ ಹಿಂದೆ ಇಲ್ಲಿ ಬಂದು ನೆಲಸಿದ ಕೊರ್ಮೊರಾಂಟ್ ಪಕ್ಷಿಗಳಿಗೆ ಆಹಾರಕ್ಕಾಗಿ ದೂರ ಹಾರುವ ಅಗತ್ಯವಿಲ್ಲದೆ ನೆಲವನ್ನೇ ವಸತಿ ಮಾಡಿಕೊಂಡು ಬಾಳಿದವು. ಬರಬರುತ್ತ ಅವುಗಳ ರೆಕ್ಕೆಗಳು ಕೆಲಸವಿಲ್ಲದೆ ನಿರ್ಬಲ ವಾದವು. ಇಂದು ಗಲಪಗೋಸ್‌ನಲ್ಲಿರುವ ಕೊರ್ಮೊರಾಂಟ್ ಪಕ್ಷಿಗಳು ಜಗತ್ತಿನಲ್ಲೇ ಅತಿ ದೊಡ್ಡವು. ಆದರೆ ಅವು ಹಾರಲರಿಯವು. ಅವುಗಳ ರೆಕ್ಕೆಗಳು ಮೊಟಕಾಗಿವೆ.

ಸ್ಪರ್ಧಾರಹಿತ ಜೀವನವು ಪ್ರಾಣಿಗಳನ್ನು ಹೇಗೆ ನಿರ್ವೀರ್ಯವಾಗಿ ಮಾಡುವುದೆಂಬುದಕ್ಕೆ ಮತ್ತೆ ಸಮುದ್ರ ಇಗುವಾನಾಗಳ ಸಾಮಾಜಿಕ ಜೀವನದತ್ತ ದೃಷ್ಟಿ ಬೀರಬಹುದು. ಕಾಮೋದ್ರೇಕದ ಋತುವಿನಲ್ಲಿ ಗಂಡು ಇಗುವಾನಾಗಳಲ್ಲಿ ಒಂದಿಷ್ಟು ಪರಾಕ್ರಮ ಒಡಮೂಡುತ್ತದೆ. ಆಗ ಅವುಗಳಲ್ಲಿ ಹೆಣ್ಣಿನ ಸಲುವಾಗಿ ಜಗಳಗಳೂ ಆಗುತ್ತವೆ. ಈ ಜಗಳ ಮಾತ್ರ ತಮಾಷೆಯಾಯಾಗಿರುತ್ತದೆ. ಎರಡು ಗಂಡು ಇಗುವಾನಾಗಳು ತಮ್ಮ ಘೋರ ಶರೀರಗಳನ್ನು ಉದ್ದಕ್ಕೆ ಚಾಚಿ ತಲೆಯೆತ್ತಿ ಒಂದನ್ನೊಂದು ಹೆದರಿಸಲು ಯತ್ನಿಸುತ್ತವೆ. ಅಷ್ಟರಿಂದ ನಿರ್ಣಯವಾಗದಿದ್ದರೆ ತಲೆಬಗ್ಗಿಸಿ ಒಂದನ್ನೊಂದು ಸಮೀಪಿಸಿ ತಲೆಗೆ ತಲೆ ಕೊಟ್ಟು ತಳ್ಳತೊಡಗುತ್ತವೆ. ಕೆಲ ಕ್ಷಣಗಳಲ್ಲ ಯಾವುದು ದುರ್ಬಲವೆಂಬುದು ನಿರ್ಣಯವಾಗಿ ಅದು ನೆಲದ ಮೇಲೆ ಚಪ್ಪಟೆಯಾಗಿ ಮಲಗಿ ಸೋಲೊಪ್ಪಿಕೊಳ್ಳುತ್ತದೆ. ಅಲ್ಲಿಗೆ ಯುದ್ಧ ಮುಗಿಯಿತು. ಅತ್ಯಂತ ಅಪಾಯಕರವಾದ ನೈಸರ್ಗಿಕ ಆಯುಧಗಳಿದ್ದರೂ ಇವು ಒಂದನ್ನೊಂದು ಗಾಯಗೊಳಿಸುವುದು ಕೂಡ ಇಲ್ಲ. ಬಹುಶಃ ಇವು ತಮ್ಮ ಹೋರಾಟವನ್ನು ಹಿಂಸೆಯಿಂದ ತೀರ್ಮಾನಿಸಲು ಹೊರಟರೆ ಕೆಲ ಕಾಲದಲ್ಲಿ ಯಾದವೀ ಯುದ್ಧದಿಂದ ಇಡೀ ಕುಲವೇ ನಿರ್ನಾಮವಾದೀತೆಂದು ನಿಸರ್ಗ ಹೀಗೆ ಅವುಗಳಲ್ಲಿ "ಪೊಯ್ಯೆಂ ಬಿಳ್ದನಂ" ಎಂಬ ವೀರಧರ್ಮದ ಪ್ರವೃತ್ತಿಯನ್ನು ಬೆಳಸಿರಬೇಕು.

ಗಲಪಗೋಸ್ ದ್ವೀಪಗಳಿಗೂ ಇತಿಹಾಸವೊಂದಿದೆ. ೧೬ ನೇ ಶತಮಾನದಲ್ಲಿ ಅದನ್ನು ಬಿಳಿಯರು ನೋಡುವುದಕ್ಕಿಂತ ಮೊದಲು ಮಾನವನು ಇಲ್ಲಿ ಕಾಲಿಟ್ಟಿದ್ದಿಲ್ಲೆಂಬ ವಾದವಿತ್ತು. ಅದನ್ನು ಪ್ರಸಿದ್ಧ ನಾರ್ವೇಜಿಯನ್ ಸಾಹಸಿಯಾದ ಹಯರ್‌ದಾಲ್ ಹತ್ತು ವರ್ಷಗಳ ಹಿಂದೆ ನಿರಸ್ತಗೊಳಿಸಿ ದಕ್ಷಿಣ ಅಮೇರಿಕದ ನಿವಾಸಿಗಳಿಗೆ ಇದರ ಪರಿಚಯವಿತ್ತೆಂದು ತೋರಿಸಿಕೊಟ್ಟನು. ಬಿಳಿಯರು ಕಂಡುಹಿಡಿದ ಮೇಲೂ ಇದರ ಕಷ್ಟಮಯ ಸ್ಥಿತಿಗತಿ (ಇಲ್ಲಿ ಬಂದು ಬಿದ್ದ ನಾವಿಕರು ನೀರಿಲ್ಲದೆ ಸಾಯಬೇಕಾಗುತ್ತಿತ್ತು) ಯಿಂದಾಗಿ ಯಾವ ದೇಶವೂ ಇದನ್ನು ತನ್ನದೆಂದು ಹೇಳಲಿಲ್ಲ. ೧೮೩೨ ರಲ್ಲಿ

ಇಕ್ವೆಡೋರ್ ಇಲ್ಲಿ ತನ್ನ ಬಾವುಟವನ್ನು ನಟ್ಟು ಅಧಿಕಾರ ಸ್ಥಾಪಿಸಿತು.

ಆದರೆ ಬಹುಕಾಲ ಇದು ಇಕ್ವೆಡೋರ್ ಕೈದಿಗಳಿಗೆ "ಕಾಳಾಪಾಣಿ" ಯಾಗಿ ಮಾತ್ರ ಉಪಯೋಗಿಸಲ್ಪಡುತ್ತಿತ್ತು. ಇಲ್ಲಿ ವಸತಿ ಹೂಡುವ ಯತ್ನಗಳು ವಿಫಲವಾದವು. ತೀರ ಪ್ರದೇಶದ ನೆಲ ಹುಲುಸಾಗಿರಲಿಲ್ಲವಾಗಿ ಕೃಷಿ ಕಷ್ಟವಾಗಿತ್ತು. ಲಾವಾ ಮಣ್ಣಿನಲ್ಲಿ ಕಾಲಿಟ್ಟರೆ ಹೂತು ಹೋಗುವಂತಿದ್ದುದರಿಂದ ಸಾಗಾಟ ಕಷ್ಟವಾಗಿತ್ತು. ಸಾಗರ ಧಾರೆಗಳು ಬದಲಾಗುತ್ತಿದ್ದುದರಿಂದ ಮೀನು ಹಿಡಿಯುವ ವ್ಯವಸಾಯವೂ ನಿರ್ದಿಷ್ಟ ಫಲ ನೀಡುವ ಭರವಸೆಯಿದ್ದಿಲ್ಲ. ಹೀಗಿದ್ದರೂ ಕೆಲ ಜರ್ಮನ್, ಫ್ರೆಂಚ್ ಮತ್ತು ಸ್ಕಾಂಡಿನೇವಿಯನ್ ಸಾಹಸಿಗಳು ಈ ದ್ವೀಪಗಳಲ್ಲಿ ನೆಲಸುವ ವೀರ ಪ್ರಯತ್ನಗಳನ್ನು ಈ ಶತಮಾನದಲ್ಲಿ ಮಾಡಿದ್ದಾರೆ. ಬಹು ಜನ ಸೋತು ಹೊರಟುಹೋಗಿದ್ದಾರೆ.

ಎರಡನೇ ಮಹಾಯುದ್ಧವು ಇಲ್ಲಿಗೆ ನವನಾಗರಿಕತೆಯನ್ನು ತಂದಿತು. ಅಮೇರಿಕವು ಬಾಲ್ಟ್ರಾ ದ್ವೀಪದಲ್ಲೊಂದು ಸಾಮರಿಕ ನೆಲೆಯನ್ನು ಸ್ಥಾಪಿಸಿತು. ವಿಮಾನ ನಿಲ್ದಾಣ ಕಟ್ಟಲಾಯಿತು. ರಸ್ತೆಗಳಾದವು. ವಿಮಾನಗಳ ಗರ್ಜನೆ ದ್ವೀಪಗಳನ್ನು ನಡುಗಿಸಿತು.

ಇಂದು ಜನವಸತಿಯಿರುವ ದ್ವೀಪಗಳಲ್ಲಿ ಚಾಟ್‌ಹ್ಯಾಮ್ ಹೆಸರಿಸತಕ್ಕದ್ದು. ಇದರಲ್ಲೇ ಗಲಪಗೋಸ್ ರಾಜಧಾನಿ ಬಾಕರಿಜೋ ಮಾರಿನೋ ಇದೆ. ಅಲ್ಲೊಬ್ಬ ಗವರ್ನರ್, ನೌಕಾ ಕೇಂದ್ರ ಮತ್ತು ಒಂದು ಸಾವಿರದ ಇಕ್ವೆಡೋರಿಯನ್ ವಸತಿ ಇದೆ. ಇನ್‌ಡಿಫೆಟಿಗೇಬಲ್ ದ್ವೀಪದಲ್ಲಿ ಇಕ್ವೆಡೋರಿಯನ್, ಜರ್ಮನ್, ಸ್ವಿಸ್, ನಾರ್ವೇಜಿಯನ್, ಇಟಾಲಿಯನ್ ಮತ್ತು ಜೆಕೊಸ್ಲೊವೇಕಿಯನ್ ಜನರ ಒಂದು ಅಂತಾರಾಷ್ಟ್ರೀಯ ವಸತಿ ಇದೆ. ಈ ವಸತಿ ೧೯೩೨ ರಿಂದ ಬೆಳೆಯುತ್ತ ಬಂದಿದೆ. ಇಲ್ಲಿರುವ ಕೆಲ ತರುಣರು ಹೊರ ಪ್ರಪಂಚವನ್ನೇ ಕಂಡಿಲ್ಲ. ಇಲ್ಲಿ ತಳವೂರಿದ ಪ್ರಾಣಿಗಳಿಗಾದದ್ದೇ ಇವರಿಗೂ ಆಗುತ್ತಿದೆಯೇ ?

ಯುಗಯುಗಗಳಿಂದ ಮಾನವ ರಹಿತವಾಗಿದ್ದ ಗಲಪಗೋಸ್ ದ್ವೀಪಗಳಲ್ಲಿ ಬಿಳಿ ಮಾನವ ಬಂದ ನಂತರ ಅವನು ಎಲ್ಲೆಲ್ಲಿಯೂ ಮಾಡಿದಂತೆ ಇಲ್ಲಿಯೂ ನಿಸರ್ಗದ ಸಮತೋಲವನ್ನು ಕೆಡಿಸಲು ಏನುಬೇಕೋ ಅದನ್ನೆಲ್ಲ ಮಾಡಿದ್ದಾನೆ. ಶತ್ರುವೆಂಬ ಕಲ್ಪನೆಯನ್ನೇ ಅರಿಯದ ಇಲ್ಲಿಯ ಪ್ರಾಣಿಗಳು ಅವನ ಅವಿವೇಕದ ಕೊಲೆಗಡತನಕ್ಕೆ ಪಕ್ಕಾಗಿವೆ. ಎಲ್ಲಕ್ಕೂ ಹೆಚ್ಚಾಗಿ ಪೀಡಿತವಾದವೆಂದರೆ ಇಲ್ಲಿನ ಆವೆಗಳು. ಬಿಳಿ ಮಾನವ ಇಲ್ಲಿ ಕಾಲಿರಿಸಿದಾಗ ಸಹಸ್ರ ಸಹಸ್ರವಾಗಿದ್ದ ಆವೆಗಳನ್ನು ಆತ ನಿರ್ದಯದಿಂದ ಸಂಹರಿಸಿದನು. ಇಲ್ಲಿ ತಮ್ಮ ಮುಕ್ಕಾಮು ಮಾಡಿದ ಕಡಲುಗಳ್ಳರೂ ತಿಮಿಂಗಿಲ ಬೇಟೆಗಾರರೂ ಆವೆಯ ಮಾಂಸ ಅತಿ ರುಚಿಕರವಾಗಿರುವುದನ್ನು ಕಂಡುಕೊಂಡರು. ಅದರ ನೆಣದ ಸವಿಯನ್ನೂ ಗುರುತಿಸಿದರು. ತಿಂಗಳುಗಟ್ಟಳೆ ಆಹಾರವಿಲ್ಲದೆ ಅದು ಬದುಕಬಲ್ಲದು. ಹೀಗಾಗಿ ಅವನ್ನು ಹಿಡಿಹಿಡಿದು ಹಡಗುಗಳಲ್ಲಿ ತುಂಬಿಕೊಂಡರು. ಬೇಕಾದಾಗ ಕೊಂದು ತಿನ್ನಲು ಅನುಕೂಲ ಎಂದು. ಆ ಮೊದ್ದು ಜಂತುವಿಗೆ ಓಡಬೇಕೆಂದೂ ಹೊಳೆಯಲಿಲ್ಲ. ಓಡಿದರೂ ಮಾನವನ ಮುಂದೆ ಅದು ಎಷ್ಟು ಓಡೀತು ? ಡಾರ್ವಿನ್ನನ ಲೆಕ್ಕಾಚಾರದ ಪ್ರಕಾರ ಅದು ಒಂದು ದಿನಕ್ಕೆ ನಾಲ್ಕು ಮೈಲು ಓಡಬಲ್ಲದು.

ಈ ಶತಮಾನದ ಆರಂಭಕ್ಕಾಗಲೆ ಕೂರ್ಮ

ಸಂಖ್ಯೆ ಎಷ್ಟು ಇಳಿದು ಹೋಗಿತ್ತೆಂದರೆ ಅವು ನಾಮಶೇಷವಾಗಿ ಹೋಗಿವೆಯೆಂದು ಭಾವಿಸಲಾಗಿತ್ತು. ಆದರೆ ಸುದೈವದಿಂದ ಈಗ ಇನ್ ಡಿಫೆಟಿಗೇಬಲ್ ದ್ವೀಪದಲ್ಲಿ ಅವುಗಳು ಸಾಕಷ್ಟು ಸಂಖ್ಯೆಯಲ್ಲಿರುವುದು ಕಂಡುಹಿಡಿಯಲ್ಪಟ್ಟಿದೆ. ಆದರೆ ಅವುಗಳಿಗೂ ಬೇಟೆಗಾರರ ಹಾವಳಿ ಇದ್ದೇ ಇದೆ. ಸಾಲದ್ದಕ್ಕೆ ಮನುಷ್ಯ ಇಲ್ಲಿ ತಂದ ಇನ್ನೊಂದು ಪ್ರಾಣಿಯಾದ ಹಂದಿ ಕಾಡು ಸ್ಥಿತಿಗಿಳಿದು ಈ ದ್ವೀಪದಲ್ಲಿರುವ ಮರಿ ಆವೆಗಳನ್ನು ಕೊಲ್ಲುತ್ತಿದೆ. ಮಾನವ ತಂದ ಬೆಕ್ಕು ನಾಯಿಗಳೂ ಕಡಿಮೆ ಉಪದ್ರವ ಮಾಡುತ್ತಿಲ್ಲ.

ಮಾನವನ ಧ್ವಂಸಬುದ್ಧಿಯಿಂದ ಗಲಪಗೋಸ್‌ನ ಬಡಪ್ರಾಣಿಗಳನ್ನು ಕಾಪಾಡಿ ಅದರ ವೈಶಿಷ್ಟ್ಯಗಳನ್ನು ಉಳಿಸಿಕೊಂಡುಹೋಗಬೇಕೆಂದು ಇಕ್ವೆಡೋರಿಯನ್ ಸರಕಾರವು ೧೯೩೪ರಲ್ಲಿ ಒಂದು ಕಾಯದೆ ಮಾಡಿ ಇಲ್ಲಿನ ವಿಶಿಷ್ಟ ಪ್ರಾಣಿಗಳನ್ನು ಕೊಲ್ಲುವುದಕ್ಕೆ ಮತ್ತು ಹಿಡಿಯುವುದಕ್ಕೆ ಪ್ರತಿಬಂಧವೊಡ್ಡಿತು. ಅಂತಾರಾಷ್ಟ್ರೀಯ ನಿಸರ್ಗ ಮತ್ತು ನಿಸರ್ಗ ಸಂಪದ್ರಕ್ಷಣ ಸಂಘವು ಇಲ್ಲೊಂದು ಜೀವಶಾಸ್ತ್ರೀಯ ಕೇಂದ್ರವನ್ನು ಸ್ಥಾಪಿಸಬೇಕೆಂದಿದೆ.

ಆದರೆ ಕಾಯದೆಗಳು ಮತ್ತು ರಕ್ಷಣಾಯತ್ನಗಳೇನೇ ನಡೆದರೂ ಗುಪ್ತವಾಗಿ ಪ್ರಾಣಿಗಳನ್ನು ಕೊಲ್ಲುವ ಮೃಗಯಾವ್ಯಸನಿಗಳನ್ನೂ ಮಾಂಸಾಪೇಕ್ಷಿಗಳನ್ನೂ ತಡೆಯುವುದು ಕಷ್ಟವಾಗಿದೆ. ಗಲಪಗೋಸ್ ತನ್ನ ಅಪೂರ್ವತೆಯನ್ನು ಎಷ್ಟು ದಿನ ಉಳಿಸಿಕೊಂಡು ಬಾಳುವುದೋ ಹೇಳುವುದು ಕಷ್ಟ.

*

## ವೈಷ್ಣವ ಜನತೋ........

ವೈಷ್ಣವನೊಬ್ಬ ಮಥುರಾ ವೃಂದಾವನ ಯಾತ್ರೆಗೆಂದು ಹೊರಟಾತ ದಾರಿಯಲ್ಲಿ ಕತ್ತಲಾದುದರಿಂದ ಒಂದು ಗ್ರಾಮದಲ್ಲಿ ನಿಲ್ಲಬೇಕಾಯಿತು. ಆದರೆ ವೈಷ್ಣವರಲ್ಲದವರ ಮನೆಯಲ್ಲಿಳಿದುಕೊಳ್ಳಲು ಅವನಿಗಿಷ್ಟವಿರಲಿಲ್ಲ. ನೆರೆಗ್ರಾಮದಲ್ಲಿ ಎಲ್ಲರೂ ವೈಷ್ಣವರೇ ಎಂದು ಕೇಳಿ ಅಲ್ಲಿ ಹೋದ.

ಅಲ್ಲಿ ಮೊದಲು ಕಂಡುಬಂದ ಗೃಹಸ್ಥನನ್ನು ಕುರಿತು ಕೇಳಿದ: "ನಾನು ವೈಷ್ಣವ. ಇಲ್ಲಿ ಎಲ್ಲರೂ ವೈಷ್ಣವರೇ ಎಂದು ಕೇಳಿ ಬಂದಿದ್ದೇನೆ. ರಾತ್ರಿ ಆಶ್ರಯ ಬೇಕಾಗಿದೆ."

ಗೃಹಸ್ಥ ಉತ್ತರವಿತ್ತ: "ಸ್ವಾಮಿ, ನಾನು ವೈಷ್ಣವನಲ್ಲ. ನಾನೊಬ್ಬ ನರಾಧಮ. ನನ್ನ ಬಿಟ್ಟರೆ ಇಲ್ಲಿ ಎಲ್ಲರೂ ವೈಷ್ಣವರೇ. ಆದರೂ ತಾವು ನನ್ನಲ್ಲಿ ಇಳಿದುಕೊಳ್ಳುವುದಾದರೆ ತಮ್ಮ ಸೇವೆ ಮಾಡಿ ಕೃತಾರ್ಥನಾಗುವೆ. ಚಿತ್ತೈಸಬೇಕು."

ಎರಡನೇ ಮನೆಯಲ್ಲಿ ಕೇಳಿದಾಗ ಅದರ ಯಾಜಮಾನನೂ ಹಾಗೇ ಹೇಳಿದ: "ಮಹಾಸ್ವಾಮೀ, ನಾನೆಲ್ಲಿಯ ವೈಷ್ಣವ? ನಾನು ನೀಚರಲ್ಲಿ ನೀಚ. ನನ್ನ ಹೊರತು ಇಲ್ಲಿರುವವರೆಲ್ಲರೂ ವೈಷ್ಣವರು. ಆದರೂ ನನ್ನ ಮನೆಯಲ್ಲಿ ಈ ರಾತ್ರಿ ಕಳೆದು ನನ್ನನ್ನು ಧನ್ಯನಾಗಿ ಮಾಡಿದರೆ ಭಾರಿ ಉಪಕಾರ."

ಸೋಜಿಗದಿಂದ ಯಾತ್ರಿಕ ಮುಂದೆ ಸಾಗಿದ. ಮನೆಯಿಂದ ಮನೆಗೆ ಹೋದ. ಎಲ್ಲ ಕಡೆಯೂ ಅಷ್ಟೇ. ಯಾರೂ ತಾನು ವೈಷ್ಣವನೆಂದು ಹೇಳಿಕೊಳ್ಳಲಿಲ್ಲ.

ಗ್ರಾಮದ ಕೊನೆಯ ಮನೆಯಲ್ಲಿ ಇದೇ ಉತ್ತರವನ್ನು ಕೇಳಿದ ಮೇಲೆ ಯಾತ್ರಿಕನಿಗೆ ತಿಳಿವಳಿಕೆ ಮೂಡಿತು. ತನ್ನನ್ನು ವೈಷ್ಣವನೆಂದು ಡಂಭದಿಂದ ಹೇಳಿಕೊಳ್ಳುವವನು ನಿಜ ವೈಷ್ಣವನಲ್ಲ. ವಿನಯ ಸಂಪನ್ನನೂ ನಿರಹಂಕಾರಿಯೂ ತನ್ನ ತಪ್ಪುಗಳ ಬಗ್ಗೆ ಯಾವಾಗಲೂ ಕೊರಗುವವನೂ ಆದವನೇ ನಿಜ ವೈಷ್ಣವ.

ಯಾತ್ರಿಕನಿಗೀಗ ತಾನೇ ಮಹಾಪಾಪಿಯೆಂದು ತೋರಿತು. ಆತ ವೈಷ್ಣವತ್ವದ ಹೆಮ್ಮೆ ಬಿಟ್ಟು ಒಬ್ಬ ಗೃಹಸ್ಥನಲ್ಲಿ ಇಳಿದುಕೊಂಡ.

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ಏಕೆಂದರೆ : ಕಾಲ್ಗೇಟ್ ಡೆಂಟಲ್ ಕ್ರೀಮ್‌ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ **ಬಾಯಿಯಲ್ಲಿ ದುರ್ಗಂಧವನ್ನುಂಟುಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು** ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜುವುದರಿಂದ ದಂತಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟ್‌ನಿಂದ 10 ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೀ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟನಿಂದ ಉಜ್ಜಿರಿ. ಇದರ ಪ್ರಬಲವಾದ, ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಆ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.

ಮಕ್ಕಳಿಗೆ ಕಾಲ್ಗೇಟನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ನೆಚ್ಚಿನ ಪೆಪರ್‌ಮಿಂಟ್ ಸ್ವಾದವು ಇದರಲ್ಲಿ ಕೂಡಿರುತ್ತದೆ.




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ...ಒಂದು ಡಬ್ಬ ಹಲವು ತಿಂಗಳುಗಳವರೆಗೆ ಸಾಕಾಗುವುದು !

ಕಾಲ್ಗೇಟಿನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




**ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿಗೆ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ**

73- 7 3



ಜೀನತ್ ಮಹಲ್

ಬಾದಶಾಹ ಬಹಾದ್ದೂರ್ ಶಾಹನನ್ನು ರಂಗೂನಿಗೆ ಸಾಗಿಸಿದ ಮೇಲೆ ಏನಾಯಿತು? ಈಚೆಗೆ ನಡೆದ ಸಂಶೋಧನೆಗಳಿಂದ ಹೊರಟ ಕರುಣಾಜನಕ ಅಂಶಗಳು

# ಮೊಗಲ ವಂಶದ ಸಮಾಪ್ತಿ

ಗೋವಿಂದ ಸಿಂಹ

೧೮೫೭ ರ ಸ್ವಾತಂತ್ರ್ಯ ಸಂಗ್ರಾಮ ಸಹಸ್ರಾರು ಜನರನ್ನು ಬಲಿತೆಗೆದುಕೊಂಡಂತೆ ಮೊಗಲ ಸಾಮ್ರಾಜ್ಯದ ಚರಮ ಗೀತೆಯನ್ನೂ ಹಾಡಿತು. ಮೊಗಲಬಾದಶಾಹ ವಂಶದ ಈ ಅಂತ್ಯದ ದೀರ್ಘ ಕಥೆ ೧೮೫೮ ರಲ್ಲಿ ಬಹಾದ್ದೂರ ಶಾಹ ಜಾಫರನು ಸಕುಟುಂಬನಾಗಿ ಕ್ಯಾಪ್ಟನ್ ಹಡ್‌ಸನ್‌ನಿಗೆ ಶರಣುಹೋದಾಗ ಆರಂಭವಾಗಿ ೧೯೨೨ ರಲ್ಲಿ ರಂಗೂನಿನಲ್ಲಿ ಆತನ ಮೊಮ್ಮಗ ಜಮಶೇದ ಬಖ್ತ್ ಮರಣ ಹೊಂದಿದಾಗ ಮುಗಿಯುತ್ತದೆ.

೧೮೫೭ ರ ಬಂಡಾಯದ ಇತಿಹಾಸದಲ್ಲಿ, ೧೮೫೮ ರಲ್ಲಿ ಬಹಾದ್ದೂರ ಶಾಹ ಜಾಫರನು ಶರಣು ಬಂದ ಮೇಲೆ ಅವನನ್ನು ರಂಗೂನಿಗೆ ಗಡೀಪಾರು ಮಾಡಲಾಯಿತು ಮತ್ತು ಅಲ್ಲೇ ಅವನು ಮೃತಪಟ್ಟ, ಎಂಬ ಮಾತುಗಳಷ್ಟೇ ಮುಖ್ಯವಾಗಿ ಬರುತ್ತವೆ. ಆದರೆ ರಂಗೂನಿನಲ್ಲಿ ಆತ ಹೇಗೆ ಸತ್ತ, ಅವನ ಕುಟುಂಬದ ಇತರರ ಅಂತ್ಯ ಹೇಗಾಯಿತು ಎಂಬ ವಿಚಾರಗಳಲ್ಲಿ ಇತಿಹಾಸ ಹೆಚ್ಚು ಕಡಿಮೆ ಮೌನವಾಗಿಯೇ ಇದೆಯೆನ್ನಬಹುದು.

ಇತ್ತೀಚೆಗೆ ಈ ವಿಷಯದಲ್ಲಿ ಸಾಕಷ್ಟು ಸಂಶೋಧನೆಗಳು ನಡೆದಿದ್ದು ರಂಗೂನಿನಲ್ಲಿ ಬಹಾದ್ದೂರ ಶಾಹ ಜಾಫರ ಮತ್ತು ಅವನ ಕುಟುಂಬದವರ ಜೀವನದ ಸತ್ಯಕಥೆ ಬೆಳಕಿಗೆ ಬರುವಂತಾಗಿದೆ.

ಬಹಾದ್ದೂರ ಶಾಹ ಶರಣಾಗತನಾದ ಮೇಲೆ ಅವನ ಮೇಲೆ ಬಂಡಾಯ ಹಾಗೂ ಕೊಲೆಯ ಆರೋಪಗಳು ಇರಿಸಲ್ಪಟ್ಟವು. ವಿಶೇಷ ಸೈನಿಕ ನ್ಯಾಯಾಲಯವೊಂದರಲ್ಲಿ ೪೦ ದಿನಗಳ ವರೆಗೆ ವಿಚಾರಣೆ ನಡೆದು ಅವನಿಗೆ ಗಡೀಪಾರು ಶಿಕ್ಷೆ ವಿಧಿಸಲ್ಪಟ್ಟಿತು. ೧೮೧೮ ರ ಬಂಗಾಲ ರೆಗ್ಯುಲೇಶನ್ ಕಾಯದೆ ೩ ರನ್ವಯ ಬಾದಶಾಹನ ಕುಟುಂಬದವರಿಗೂ ಅವರ ಮೇಲೆ ಯಾವ ಖಟ್ಲೆ

ನಡೆದಿರದಿದ್ದರೂ ಇದೇ ಶಿಕ್ಷೆಯನ್ನು ವಿಧಿಸಲಾಲಾಯಿತು.

ವಿಕ್ಟೋರಿಯ ಮಹಾರಾಣಿಯ 'ಮೇಗೇರಾ' ಎಂಬ ಹಡಗಿನಲ್ಲಿ ೧೮೫೮, ಡಿಸೆಂಬರ್ ೮ ರಂದು ಬಾಹದ್ದೂರ ಶಾಹ ಜಾಫರನ ಪರಿವಾರವನ್ನು ರಂಗೂನಿನಲ್ಲಿ ಇಳಿಸಲಾಯಿತು. ಬಹಾದ್ದೂರ ಶಾಹನ ಜೊತೆಯಲ್ಲಿ ಅವನ ಪ್ರಿಯಪತ್ನಿ ಜೀನತ್ ಮಹಲ್, ಅವನ ಮಗ ಜವಾಂ ಬಖ್ತ್, ಅವನ ಉಪಪತ್ನಿ ಇಂಬ್ರುನ್ನಿಸಾಳ ಮಗ ಶಾಹ ಅಬ್ಬಾಸ್, ಜವಾಂ ಬಖ್ತನ ಹೆಂಡತಿ ಜಾಮನಿ ಬೇಗಂ ಇದ್ದರು. ಕೆಲ ನೌಕರರೂ ಇವರ ಜೊತೆ ಬಂದಿದ್ದರು. ಅವರಲ್ಲಿ ಅಹಮದ ಬೇಗ್ ಮತ್ತು ಅಬ್ದುಲ್ ರಹಮಾನರು ಮುಖ್ಯರಾಗಿದ್ದರು.

ರಂಗೂನಿನ ಮಿಲಿಟರಿ ಕ್ಯಾಂಟೋನ್‌ಮೆಂಟಿನ ಪ್ರದೇಶದಲ್ಲಿ ಕೆಲವು ಡೇರೆಗಳನ್ನು ಹೊಡೆದು ಅವುಗಳಲ್ಲಿ ಬಾದಶಾಹನ ಪರಿವಾರವನ್ನಿಳಿಸಲಾಯಿತು. ಜನಸಾಮಾನ್ಯರ ಲಕ್ಷ್ಯ ಇತ್ತ ಸೆಳೆಯದಿರಲೆಂದು ಡೇರೆಗಳ ಸುತ್ತಲೂ ಪಡದೆಗಳ ಗೋಡೆಯನ್ನು ನಿಲ್ಲಿಸಿದರು. ಬಾದಶಾಹನ ಕುಟುಂಬವನ್ನು ರಂಗೂನಿಗೆ ಸಾಗಿಸುವಾಗ ತುಂಬ ಗುಟ್ಟಿನಲ್ಲಿ ಸಾಗಿಸಲಾಗಿತ್ತು. ರಂಗೂನ್ ವಾಸಿಗಳಿಗೆ ಇದರ ಗಂಧಗಾಳಿಯೂ ಇರಲಿಲ್ಲ. ನಾಲ್ಕೈದು ದಿನಗಳ ನಂತರ ಡೇರೆಗಳಿಗೆ ತುಸು ದೂರದಲ್ಲಿಯೆ ಕಟ್ಟಿದ್ದ ಕಟ್ಟಿಗೆಯ ಮನೆಗಳಲ್ಲಿ ಬಾದಶಾಹನ ಸಂಸಾರವನ್ನು ಇಟ್ಟರು. ಈಗ ಬಾದಶಾಹ ಮತ್ತು ಆತನ ಕುಟುಂಬ ನಿಜವಾಗಿಯೂ ಕೈದಿಗಳಂತಾಗಿದ್ದರು. ಮನೆಗಳ ನಾಲ್ಕೂ ದಿಕ್ಕಿನಲ್ಲಿ ಬ್ರಿಟಿಶ್ ಸೈನಿಕರ ಕಾವಲ ನಿಂತಿತು. ಅಪ್ಪಣೆಯಿಲ್ಲದೆ ಯಾರೂ ಒಳಗೆ ಬರುವಂತಿರಲಿಲ್ಲ. ಈ ಕಾವಲು ಪಡೆಯ ಮುಖ್ಯಾಧಿಕಾರಿಯಾದ ಲೆಫ್ಟಿನಂಟ್ ಓಮೆನ್ ಪ್ರತಿನಿತ್ಯ ಮುಂಜಾನೆ ಬಂದು ಬಾದಶಾಹನ ಪರಿವಾರದ ಎಲ್ಲರೂ ಇದ್ದಾರೆಯೆ ಇಲ್ಲವೆ ಎಂದು ನೋಡಿಕೊಳ್ಳುತ್ತಿದ್ದ.

ಬಹಾದ್ದೂರ ಶಾಹನನ್ನೊಬ್ಬನನ್ನು ಬಿಟ್ಟು ಈ ಪರಿವಾರದ ಉಳಿದೆಲ್ಲರೂ ದೃಢಕಾಯರಾಗಿಯೆ ಇದ್ದರು. ಬಹಾದ್ದೂರಶಾಹನ ಜಡ್ಡಿಗೆ ಅನೇಕ ಕಾರಣಗಳಿದ್ದವು. ಸ್ವಭಾವತಃ ಕವಿಯೂ ದಾರ್ಶನಿಕನೂ ಆಗಿದ್ದ ಅವನ ಮನದ ಮೇಲೆ, ನಡೆದ ದುಃಖಪೂರ್ಣ ಘಟನೆಗಳು ತುಂಬ ಪ್ರಭಾವವನ್ನು ಬೀರಿದ್ದವು. ಕ್ಯಾಪ್ಟನ್ ಹಡ್‌ಸನ್‌ನು ಅವನ ಮೂವರು ರಾಜಕುಮಾರರ ತರಿದ ತಲೆಗಳನ್ನು ತಂದು ಅವನ ಮುಂದಿಟ್ಟಾಗಿನಿಂದ ಅವನ ದೇಹ ತತ್ತರಿಸತೊಡಗಿತ್ತು. ಈ ಬೀಭತ್ಸ ದೃಶ್ಯವು ಅವನಿಗೆ ಪ್ರಬಲವಾದ ಆಘಾತವನ್ನು ಉಂಟುಮಾಡಿತ್ತು.

ಬಹಾದ್ದೂರ ಶಾಹನ ಪ್ರಿಯ ಮತ್ತು ಪರಮ ಸುಂದರಿ ಪತ್ನಿ ಜೀನತ್‌ಮಹಲಳ ಸ್ವಭಾವ ಈಗ ತುಂಬ ಸಿಡುಕಿನದಾಗಿಬಿಟ್ಟಿತ್ತು. ಅವಳ ಸುಂದರ ಸ್ವಪ್ನಗಳೆಲ್ಲ ಭಗ್ನವಾಗಿ ಹೋಗಿದ್ದೇ ಅದಕ್ಕೆ

ಬಹಾದ್ದೂರಶಾಹ



ಕಾರಣವಾಗಿತ್ತು. ಸಿಂಹಾಸನಕ್ಕೆ ಮೂವರು ಬೇರೆ ಉತ್ತರಾಧಿಕಾರಿಗಳಿದ್ದರೂ ತನ್ನ ಮಗನಾದ ಜವಾಂ ಬಖ್ತನಿಗೆ ಪಟ್ಟ ದೊರೆಯಬೇಕೆಂದು ಜೀನತ ಮಹಲಳ ಆಕಾಂಕ್ಷೆಯಾಗಿತ್ತು. ಬಂಡಾಯಕ್ಕೆ ಮೊದಲೇ ಅವಳ ಈ ಸೂಚನೆ ತಿರಸ್ಕೃತವಾಗಿಬಿಟ್ಟಿತ್ತು. ಬ್ರಿಟಿಶರು ಬೇರೊಬ್ಬ ರಾಜಕುಮಾರನನ್ನು ಉತ್ತರಾಧಿಕಾರಿಯೆಂದು ಸೂಚಿಸಿದ್ದರು. ಆದರೆ ಆತ ಮುಂದೆ ಬಹು ರಹಸ್ಯಮಯವಾದ ಪರಿಸ್ಥಿತಿಯಲ್ಲಿ ಸತ್ತ. ಅನಂತರವೇ ಬಂಡಾಯ ನಡೆಯಿತು. ಬಂಡಾಯದಲ್ಲಿ ಮೂವರೂ ರಾಜಕುಮಾರರು ಭಾಗವಹಿಸಿದರು. ಜವಾಂ ಬಖ್ತನನ್ನು ಪಟ್ಟಕ್ಕೇರಿಸುವುದಾದರೆ ಸಹಾಯ ಮಾಡುವದಾಗಿ ಜೀನತ್ ಮಹಲ್ ಬ್ರಿಟಿಶರಿಗೆ ತಿಳಿಸಿದಳು. ಬ್ರಿಟಿಶರು ಹೂಂ ಎಂದು ಅವಳ ಸಹಾಯ ಪಡೆದರಾದರೂ ದಿಲ್ಲಿಯನ್ನು ವಶಪಡಿಸಿಕೊಂಡ ಮೇಲೆ ಆ ಮೂವರೂ ರಾಜಕುಮಾರರ ಹತ್ಯೆಗೈದುದಲ್ಲದೆ ಜವಾಂ ಬಖ್ತನಿಗೂ ಕೈತೋರಿಸಿ ಅವನನ್ನೂ ಗಡೀಪಾರು ಮಾಡಿಬಿಟ್ಟರು. ಬಂಡಾಯದ ಸಮಯದಲ್ಲಿ ಕೇವಲ ೧೭ ವರ್ಷದವನಾಗಿದ್ದ ಜವಾಂ ಬಖ್ತ ಅದರಲ್ಲಿ ಒಂದಿಷ್ಟೂ ಭಾಗವಹಿಸಿರಲಿಲ್ಲ. ಅತ್ಯಂತ ಸುಂದರಿಯೂ ಇನ್ನೂ ಕಿಶೋರಾವಸ್ಥೆಯಲ್ಲಿ ಇದ್ದವಳೂ ಆದ ಅವನ ಹೆಂಡತಿ ಜಾಮನಿ ಬೇಗಂ ಆಗಲೇ ಎರಡು ಮಕ್ಕಳ ತಾಯಿಯಾಗಿದ್ದಳು. ವಿವಾಹ ಸಮಯದಲ್ಲಿ ಅವಳಿಗೆ ಲಕ್ಷಾಂತರ ರೂಪಾಯಿ ಬೆಲೆಯ ಜಮೀನು, ಲಕ್ಷಾಂತರ ಬೆಲೆಬಾಳುವ ಮುತ್ತುರತ್ನಾದಿಗಳ ಬಳುವಳಿ ಬಂದಿತ್ತಾದರೂ ಬಂಡಾಯದ ನಂತರ ಅವೆಲ್ಲ ಜಪ್ತಾಗಿಬಿಟ್ಟವು.

ಬಾದಶಾಹನ ಪರಿವಾರದವರಲ್ಲಿ ಯಾವನೂ ಹೊರಗಿನವರೊಡನೆ ಮಾತಾಡಲಾಗದೆಂಬ ಕಟ್ಟಪ್ಪಣೆಯಿದ್ದಿತು. ಹೊರಗೆ ಹೋಗುವ ಮಾತಂತೂ ದೂರವೇ ಇತ್ತು. ರಂಗೂನಿನ ಮುಸಲ್ಮಾನ ನಿವಾಸಿಗಳಿಗೆ ಕೂಡ ಮೊಗಲ ಬಾದಶಾಹ ಗಡೀಪಾರಾಗಿ ರಂಗೂನಿಗೆ ಬಂದಿರುವ ಸುದ್ದಿ ತಿಳಿದಿರಲಿಲ್ಲ. ಕೇವಲ ಕೆಲ ಆಯ್ದ ನೌಕರರಿಗಷ್ಟೇ ಬಾದಶಾಹನ ಮನೆಗೆ ಹೋಗಿ ಬರಲು ಅಪ್ಪಣೆಯಿತ್ತು. ಅವರಿಗೆ ದಿನನಿತ್ಯವೂ ಹೊಸ ಹೊಸ ಪ್ರವೇಶ ಚೀಟಿಗಳನ್ನು ಕೊಡುತ್ತಿದ್ದರು. ಚೀಟಿಗಳನ್ನು ಕೊಡುವ ಅಧಿಕಾರಿ ವಾರಕ್ಕೊಮ್ಮೆ ಬದಲಾಯಿಸಲ್ಪಡುತ್ತಿದ್ದನು. ಗುಟ್ಟನ್ನು ಕಾಪಾಡಲು ಬಹು ದಕ್ಷತೆ ವಹಿಸಲ್ಪಟ್ಟಿತ್ತು.

ಬಾದಶಾಹನ ಪರಿವಾರಕ್ಕೆ ಪ್ರತಿನಿತ್ಯ ಸಂಸಾರ ವೆಚ್ಚಕ್ಕೆಂದು ೧೧ ರೂಪಾಯಿಗಳು ಸಿಗುತ್ತಿದ್ದವು. ಪ್ರತಿ ರವಿವಾರ ಇದರಲ್ಲಿ ಒಂದು ರೂಪಾಯಿಯ ಹೆಚ್ಚಳವಾಗುತ್ತಿತ್ತಲ್ಲದೆ ಪ್ರತಿ ತಿಂಗಳ ೧೮ ನೆಯ ತಾರೀಖಿನಂದು ಮತ್ತೆರಡು ರೂಪಾಯಿಗಳು ಹೆಚ್ಚಿಗೆ ದೊರೆಯುತ್ತಿದ್ದವು.

೧೮೫೯, ಏಪ್ರಿಲ್ ತಿಂಗಳಲ್ಲಿ ಲೆಫ್ಟಿನೆಂಟ್ ಓಮೆನ್ ಕ್ಯಾಪ್ಟನ್ ಡೇವಿಸ್‌ನಿಗೆ ತನ್ನ ಚಾರ್ಜು ವಹಿಸಿ ಕೊಟ್ಟ. ಕ್ಯಾಪ್ಟನ್ ಡೇವಿಸ್ ಮೊದಲು ಪೇಗೂದ ಕಮಿಶನರರ ಸಹಾಯಕ ಸಚಿವನಾಗಿದ್ದ. ಈತ ಉದಾರ ವಿಚಾರಗಳ ವ್ಯಕ್ತಿಯಾಗಿದ್ದ. ಜವಾಂ ಬಖ್ತ ಮತ್ತು ಶಾಹ ಅಬ್ಬಾಸರಿಗೆ ಇಂಗ್ಲೀಷ್ ಶಿಕ್ಷಣ ಕೊಡಿಸಿದರೆ ಅವರು ಬ್ರಿಟಿಶ್ ಭಕ್ತರಾಗಬಹುದೆಂದು ಈತ ಭಾವಿಸಿದ. ಇದರ ಫಲವಾಗಿ ಪ್ರತಿ ನಿತ್ಯ ಮುಂಜಾನೆ ಇಂಗ್ಲಿಷ್ ಕಲಿಯುವುದಕ್ಕಾಗಿ ಆ ಇಬ್ಬರು ರಾಜಕುಮಾರರು ಕ್ಯಾಪ್ಟನ್ ಡೇವಿಸ್‌ನ ಬಂಗಲೆಗೆ ಬಿಳಿ ಸೈನಿಕರ ಕಾವಲಿನಲ್ಲಿ ಬರತೊಡಗಿದರು. ಜೀನತ್ ಮಹಲ್ ಮತ್ತು ಜಾಮನಿ ಬೇಗಮರಿಗೆ ಮುಂಜಾನೆ ಮತ್ತು ಸಂಜೆ ಅಡ್ಡಾಡಿಕೊಂಡು ಬರಲು ಅಪ್ಪಣೆ ಸಿಕ್ಕಿತು.

ಬಹಾದ್ದೂರ ಶಾಹನ ಸ್ಥಿತಿ ಮಾತ್ರ ದುಃಖದಾಯಕವಾಗಿತ್ತು. ಲೆಫ್ಟಿನೆಂಟ್ ಓಮೆನ್‌ನ ಕಾಲದಲ್ಲಿ ಬಾದಶಾಹನ ಕುಟುಂಬಕ್ಕೆ ಓದು ಬರೆಯುವ ಸೌಕರ್ಯವಿರಲಿಲ್ಲವಾದ್ದರಿಂದ ಬಾದಶಾಹ ಜಾಫರನು ತನ್ನ ಕವಿತೆಗಳನ್ನು ಗುಣಗುಣಿಸುವುದರಲ್ಲಿಯೆ ತೃಪ್ತನಾಗಬೇಕಿತ್ತು. ಕೋಣೆಯಲ್ಲಿ ಶತಪಥ ಹಾಕುತ್ತ ಇಲ್ಲವೆ ಮೌನದಿಂದ ಕುಳಿತು ಕಾಲ ಕಳೆಯಬೇಕಿತ್ತು. ಕ್ಯಾಪ್ಟನ್

ಡೇವಿಸ್ ಬಹಾದ್ದೂರ ಶಾಹನಿಗೆ ಓದು ಬರೆಯುವ ಅವಕಾಶವನ್ನೊದಗಿಸಿಕೊಟ್ಟ. ಈಗ ಜಾಫರ್ ಕವಿತೆ ಬರೆಯುತ್ತಿದ್ದ, ತಿದ್ದು ಪಡಿ ಮಾಡುತ್ತಿದ್ದ, ಸುಮ್ಮನೆ ಮಲಗಿರುತ್ತಿದ್ದ. ಬರಬರುತ್ತ ಆತನ ಪ್ರಕೃತಿ ತೀರ ಕೆಡತೊಡ ಗಿತು. ಆತ ಭ್ರಮಿಷ್ಠನಂತಾಗಿ ಬಡಬಡಿಸ ಹತ್ತಿದ. ಅವನ ಆರೋಗ್ಯದ ವಿಚಾರವಾಗಿ ಯಾರೂ ಗಮನವೀಯಲಿಲ್ಲ. ೧೮೬೫, ಜುಲೈ ತಿಂಗಳ ಕೊನೆಯ ಸುಮಾರಿಗೆ ಆತನ ಸ್ವಾಸ್ಥ್ಯ ತೀರ ಹದಗೆಟ್ಟಾಗ ಅವನ ಪರಿವಾರದ ಒಬ್ಬನೂ ಅವನ ಬಳಿ ಬರುತ್ತಿರಲಿಲ್ಲ. ಸ್ವಾಮಿಭಕ್ತನಾದ ಅಹಮದ್ ಬೇಗ್ ಒಬ್ಬನೇ ಅವನ ಸೇವೆ ಶುಶ್ರೂಷೆಗಳನ್ನು ಮಾಡುತ್ತಿದ್ದ. ಈತ ತನ್ನ ಸ್ವಾಮಿಗಾಗಿ ತನ್ನ ಸಂಸಾರವನ್ನು ತ್ಯಜಿಸಿ ದಿಲ್ಲಿಯಿಂದ ರಂಗೂನಿಗ ಬಂದಿದ್ದ. ಬಾದಶಾಹ ಸತ್ತ ನಂತರವೇ ಈತ ದಿಲ್ಲಿಗೆ ಹಿಂತಿರುಗಿದ. ೧೮೬೨, ನವೆಂಬರ ೭ ರಂದು ಬಹಾದ್ದೂರಶಾಹ ಜಾಫರ್ ಮರಣ ಹೊಂದಿದ. ಸಾಯುವುದಕ್ಕೆ ಮೊದಲು ಆತ ತೀರ ಹುಚ್ಚನಂತಾಗಿಬಿಟ್ಟಿದ್ದ.

ಆತ ಸತ್ತ ದಿನವೇ ಅವನ ಕಳೇವರವನ್ನು ಕಟ್ಟಿಗೆಯ ಪೆಟ್ಟಿಗೆಯಲ್ಲಿಟ್ಟು ಪೆಟ್ಟಿಗೆಯನ್ನು ಮಖಮಲ್ ಅರಿವೆಯಲ್ಲಿ ಸುತ್ತಿ ಕ್ಯಾಂಟೋನ್-ಮೆಂಟ್ ಪ್ರದೇಶದಲ್ಲಿಯೆ ಹೂಳಿಬಿಟ್ಟರು. ದಫನ ವಿಧಿಯ ಕಾಲದಲ್ಲಿ ಒಬ್ಬನೇ ಒಬ್ಬ ಮುಲ್ಲಾ ಹಾಜರಿದ್ದ. ಆತನಿಗೆ ಕುರಾನ ಪಠನ ಮಾಡಲೂ ಅಪ್ಪಣೆ ಸಿಗಲಿಲ್ಲ. ಕ್ಯಾಪ್ಟನ್ ಡೇವಿಸ್ ತನ್ನ ಸಂತಾಪ ಸೂಚಿಸಲೆಂದು ಬಂದಾಗ ಅವನಿಗೆ ಬಾದಶಾಹ ಕುಟುಂಬದಲ್ಲೊಬ್ಬರಿಗಾದರೂ ಜಾಫರನ ಮರಣದಿಂದ ದುಃಖವಾದಂತೆ ಕಾಣಲಿಲ್ಲ.

ಜಾಫರನ ಮರಣದಿಂದಲೂ ರಂಗೂನಿನ ಮೇಲೆ ಏನೂ ಪರಿಣಾಮವಾಗಲಿಲ್ಲ. ಗಡೀಪಾರಾದ ಬಾದಶಾಹನ ಬಗ್ಗೆ ಸುದ್ದಿ ಅಲ್ಲಲ್ಲಿ ಹರಡಿತ್ತಾದರೂ ಯಾರಿಗೂ ಅದರಲ್ಲಿ ನಂಬಿಗೆಯಾಗುತ್ತಿರಲಿಲ್ಲ. ಕಾಬೂಲಿನಿಂದ ಕಾಮರೂಪದವರೆಗೆ, ಕಚ್ಛದಿಂದ ಚಟಗಾಂವದವರೆಗೆ ರಾಜ್ಯವನ್ನಾಳುತ್ತಿದ್ದ ಬಹಾದ್ದೂರ ಶಾಹ ಜಾಫರನು ತೀರ ಸಾಮಾನ್ಯ ಕೈದಿಯಂತೆ ಇರುವುದೆಂದರೆ ಏನು ವಿಚಿತ್ರ! ರಂಗೂನಿನ ಜನ ಈ ಮಾತನ್ನು ನಂಬಲು ಸಿದ್ಧರಿರಲಿಲ್ಲ.

ಹೀಗೆ ಮೊಗಲ ವಂಶದ ಕೊನೆಯ ಬಾದಶಾಹ ಸತ್ತ. ಅವನಿಗೆ ಗೋರಿ ಕೂಡ ಕಟ್ಟಲ್ಪಡಲಿಲ್ಲ. ಅವನನ್ನು ಹೂಳಿದ ಸ್ಥಳದಲ್ಲಿ ಒಂದು ದೊಡ್ಡ ಕಲ್ಲನ್ನು ತಂದಿಟ್ಟರು, ಅಷ್ಟೆ. ಅದರ ಮೇಲೆ ಏನನ್ನೂ ಬರೆದಿರಲಿಲ್ಲ. ಜುಮ್ಮಾ (ಶುಕ್ರವಾರ) ದಿನ ಗೋರಿಯ ಬಳಿ ಒಂದು ದೀಪವನ್ನೂ ಹಚ್ಚಲಿಲ್ಲ. ಯಾರೂ ಅಂದು ಇಬಾದತ್ (ಪ್ರಾರ್ಥನೆ) ಮಾಡಲು ಬರಲಿಲ್ಲ. ಬಾದಶಾಹ ಸಾಮಾನ್ಯ ಮುಸಲ್ಮಾನನಿಗಿಂತಲೂ ಕೀಳು ಅವಸ್ಥೆಯಲ್ಲಿ ಮರಣ ಹೊಂದಿದ. ತೇಜಸ್ವಿ ಸಾಮ್ರಾಜ್ಯದ ಕೊನೆಯ ದೀಪ ಸಾಮಾನ್ಯವಾದೊಂದು ಮಣ್ಣಿನ ಹಣತೆಯ ದೀಪದಂತೆ ನಂದಿಹೋ-ಯಿತು.

ಬಹಾದ್ದೂರ ಶಾಹನ ಮರಣಾನಂತರ ಬ್ರಿಟಿಶ್ ಶಾಸಕರು ಸಮಾಧಾನದ ಉಸಿರುಗರೆದರು. ರಾಜಪರಿವಾರದ ಮೇಲಿನ ಕಡು ನಿರ್ಬಂಧ ಕಿತ್ತೊಗೆಯಲ್ಪಟ್ಟಿತು. ರಂಗೂನಿನಲ್ಲಿ ನೆಲಸಿ ಧನಿಕನಾದ ಮುಹಮ್ಮದ್ ತಾಹೀರನೆಂಬ ವ್ಯಾಪಾರಿ ಬ್ರಹ್ಮೀ ಸ್ತ್ರೀಯೊಬ್ಬಳನ್ನು ಲಗ್ನವಾಗಿದ್ದ. ಅವನ ಮಗಳು ಆಯುಶಾ ಶಾಹಳೊಂ-ದಿಗೆ ಶಾಹ ಅಬ್ಬಾಸನ ಲಗ್ನವಾಯಿತು. ಲಗ್ನವಾದ ಮೇಲೆ ಶಾಹ ಅಬ್ಬಾಸನಿಗೆ ರಂಗೂನಿನಲ್ಲಿರಲು ಅನುಜ್ಞೆ ಸಿಕ್ಕಿತು. ಅವನಿಗೆ ತಿಂಗಳಿಗೆ ೧೫ ರೂಪಾಯಿಗಳ ಪೆನ್ಶನ್ ಕೂಡ ಕೊಡತೊಡಗಿದರು. ಶಾಹ ಅಬ್ಬಾಸ್ ಕೆಲ ದಿನಗಳ ವರೆಗೆ ರಂಗೂನಿನ "ಪಬ್ಲಿಕ್ ವರ್ಕ್ಸ್ ಡಿಪಾರ್ಟ್-ಮೆಂಟ್"ನಲ್ಲಿ ಕೆಲಸ ಮಾಡಿದ. ಅಲ್ಲಿ ಅಯೋಗ್ಯನೆಂದು ಅವನನ್ನು ಕಿತ್ತುಹಾಕಿದರು. ಆಮೇಲೆ ಆತ ಮಾವನೊಂದಿಗಿದ್ದು ಅವನ ವ್ಯಾಪಾರ ವ್ಯವಹಾರದಲ್ಲಿ ಸಹಾಯ ಮಾಡತೊಡಗಿದ.

ಆದರೆ ಇನ್ನೂ ಬಹಾದ್ದೂರಶಾಹನ ಕುಟುಂಬದವರ ಮೇಲೆ ನಜರಬಂದಿ ಇದ್ದೇ ಇತ್ತು. ೧೮೬೩ ರಲ್ಲಿ ಜಾಮನಿ ಬೇಗಮಳಿಗೆ ಭಾರತಕ್ಕೆ ಮರಳಲು ಅಪ್ಪಣೆ ಸಿಕ್ಕಿತು. ಭಾರತದಲ್ಲಿ ಜಯಪುರ ಮತ್ತು ದಿಲ್ಲಿಗಳಿಗೆ ಮಾತ್ರ ಹೋಗಲು ಅನುಮತಿಯಿತ್ತು. ಜಯಪುರದಲ್ಲಿದ್ದ ತನ್ನ ತಾಯಿಯನ್ನು ಭೆಟ್ಟಿಯಾಗಿ ಜಾಮನಿ ಬೇಗಂ ದಿಲ್ಲಿಗೆ ಬಂದಾಗ ಜನರಲ್ಲಿ ಗುಸುಗುಸು ಏಳಲು ಬ್ರಿಟಿಶರು ಅವಳನ್ನು ಮತ್ತೆ ರಂಗೂನಿಗೆ ಕಳಿಸಿಬಿಟ್ಟರು. ಮುಂದೆ ಅವಳಿಗೆ ಕಲಕತ್ತೆಗೆ ಹೋಗಿ ಬರಲು ಅಪ್ಪಣೆ ಸಿಕ್ಕಿತು ಆಮೇಲೆ ಅವಳು ತನ್ನ ಆರೋಗ್ಯ ಸುಧಾರಣೆಗೆಂದು ಹಲವಾರು ಸಲ ಕಲಕತ್ತೆಗೆ ಹೋಗಿಬಂದಳು.

ಜಾಫರನ ಮರಣಾನಂತರ ಅವನ ಕುಟುಂಬದ ಇತರರ ವಿಚಾರದಲ್ಲಿ ಬ್ರಿಟಿಶರು ತುಂಬ ಪ್ರಚಾರ ಮಾಡಿದರು. ಜಾಮನಿಯ ತಾಯಿಗೆ ರಂಗೂನಿಗೆ ಬಂದು ಮಗಳನ್ನು ಕಾಣಲು ಅನುಮತಿಯಿತ್ತರಲ್ಲದೆ ಈ ಬಗ್ಗೆ ಬಹಳಷ್ಟು ಪ್ರಚಾರ ಮಾಡಿದರು.

ಜೀನತ್ ಮಹಲ್ ಮತ್ತು ಜವಾಂ ಬಖ್ತರು ತಮ್ಮ ಮೇಲಿನ ನಜರ್‌ಬಂದಿಯನ್ನು ತೆಗೆದು ಹಾಕಲು ಪುನಃ ಪುನಃ ಅರ್ಜಿಮಾಡಿಕೊಂಡರು. ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ಆದರೆ ೧೮೬೬ ರಲ್ಲಿ ನೀವು ರಂಗೂನಿನಲ್ಲಿ ಎಲ್ಲಿ ಬೇಕಲ್ಲಿ ಇರಬಹುದು ಎಂದು ಅವರಿಗೆ ಹೇಳಿದರು. ಕ್ಯಾಂಟೋನ್‌ಮೆಂಟಿನಲ್ಲಿ ಕ್ಲಾರ್ಸ್ ಲೈನಿನಲ್ಲಿ ಒಂದು ಮನೆಯಲ್ಲಿ ನಜರಬಂದಿಯಿಂದ ಮುಕ್ತರಾದ ತಾಯಿ ಮಗ ಇರತೊಡಗಿದರು. ಜವಾಂ-ಬಖ್ತನಿಗೆ ತಿಂಗಳಿಗೆ ೩೦೦ ಮತ್ತು ಜೀನತ್‌ಮಹಲಳಿಗೆ ೨೫೦ ರೂಪಾಯಿಗಳ ಪೆನ್ಶನ್ ಸಿಗತೊಡಗಿತು. ವಾರಕ್ಕೊಮ್ಮೆ ಬ್ರಿಟಿಶ್ ಅಧಿಕಾರಿಯೊಬ್ಬ ಬಂದು ಅವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ. ಆದರೆ ಇವರು ಭಾರತಕ್ಕೆ ಓಡಿಹೋಗಬಾರದು ಎಂದು ಬ್ರಿಟಿಶರು ತುಂಬ ಎಚ್ಚರಿಕೆ ವಹಿಸುತ್ತಿದ್ದರು. ಭಾರತಕ್ಕೇನಾದರೂ ಇವರು ಹೋದರೆ ತುಂಬ ಗೊಂದಲವೆದ್ದೀತು ಎಂಬ ಭಯ ಬ್ರಿಟಿಶರಿಗಿತ್ತು.

ಜಾಫರನ ಮರಣಾನಂತರ ಜೀನತ್ ಮಹಲಳ ಆರೋಗ್ಯ ಕೆಟ್ಟಿತು. ಜವಾಂ ಬಖ್ತ್ ಅನನುಭವಿಯಾಗಿದ್ದ. ಜವಾಂ ಬಖ್ತ್ ಕೆಲ ದಿನಗಳ ವರೆಗೆ ಮನುಷ್ಯರೆಳೆಯುವ ರಿಕ್ಷಾಗಳನ್ನಿಟ್ಟು ಉದ್ಯೋಗ ಮಾಡಿದ. ಅದರಲ್ಲಿ ಹಾನಿಯಾಗಲು ಮನೆ ಹಿಡಿದು ಕುಳಿತ. ಅವನಿಗೆ ದುಶ್ಚಟಗಳು ಅಂಟಿಕೊಂಡವು. ಕುಡಿತ ಜೂಜುಗಳಲ್ಲಿ ಹಣ ಹಾಳು ಮಾಡತೊಡಗಿದ. ಸಾಲವನ್ನೂ ಮಾಡಹತ್ತಿದ. ಅನಾರೋಗ್ಯದಿಂದ ಬಳಲುತ್ತಿದ್ದ ಜಾಮನಿ ಬೇಗವಳು ಬಲು ದುಖಿತಳಾದಳು. ಅವಳ ಕಣ್ಣೂ ಕೆಟ್ಟಿತು. ಬ್ರಿಟಿಶ್ ಸರಕಾರಕ್ಕೆ ಪುನಃ ಪುನಃ ಬರೆದುಕೊಂಡ ಮೇಲೆ ಜಾಮನಿ ಬೇಗಮಳಿಗೆ ಕಲಕತ್ತೆಗೆ ಹೋಗಿ ಚಿಕಿತ್ಸೆ ಪಡೆಯಲು ಅನುಮತಿ ದೊರೆಯಿತು. ಆದರೆ ಜೀನತ್ ಮಹಲಳ ಬೇನೆಯ ವಿಚಾರ ಪೂರ್ಣ ದುರ್ಲಕ್ಷಿಸಲ್ಪಟ್ಟಿತು.

೧೮೭೧ ರಲ್ಲಿ ಮಿಸ್ಟರ್ ವ್ಹೀಲರ್ ಎಂಬವರು ಇವರಿಬ್ಬರಿಗೂ ತುಂಬ ಸಹಾಯ ಮಾಡಿದರು. ಅವರು ದಿಲ್ಲಿಯೊಡನೆ ಪತ್ರ ವ್ಯವಹಾರ ಮಾಡಿ ಜವಾಂ ಬಖ್ತನ ಸಾಲ ತೀರಿಸುವ ವ್ಯವಸ್ಥೆ ಮಾಡಿದ್ದಲ್ಲದೆ ಅವನ ಮಗ ಜಮಶೇದ್ ಬಖ್ತನ ವಿದ್ಯಾಭ್ಯಾಸದ ಏರ್ಪಾಡು ಮಾಡಿದರು. ಆದರೆ ಡಿಯೊಸೆಸಾನ್ ಶಾಲೆಯಲ್ಲಿ ಅವನ ಹೆಸರು ಹಚ್ಚಿದ ಮರುದಿನವೇ ಈ ವಿಷಯವೆ ಮನಸ್ಸಿಗೆ ಬಾರದ ಅಲ್ಲಿಯ ಅಧಿಕಾರಿಗಳು ಅವನ ಹೆಸರನ್ನು ಕಿತ್ತುಹಾಕಿ ಬಿಟ್ಟರು. ಹಾಗಿದ್ದರೂ ಅದೇ ಶಾಲೆಯ ಶಿಕ್ಷಕನೊಬ್ಬ ಮನೆಗೆ ಬಂದು ಜಮಶೇದ್ ಬಖ್ತನಿಗೆ ಕಲಿಸತೊಡಗಿದ. ಮುಂದೆ ಇವನನ್ನು ಮಿಶನ್ ಶಾಲೆಯೊಂದಕ್ಕೆ ಸೇರಿಸಿದರು.

ದಯಾಳುವಾಗಿದ್ದ ವ್ಹೀಲರರು ೧೮೬೬ ರಲ್ಲಿ ಜವಾಂ ಬಖ್ತ್ ಮತ್ತು ಜಾಮನಿ ಬೇಗಮರಿಗಾಗಿ ಒಂದು ಹೊಸ ಮನೆ ಕೊಂಡುಕೊಟ್ಟರು. ಈ ದಂಪತಿಗಳು ಮಕ್ಕಳು ಮರಿ ಸಮೇತ ಹೊಸ

ಮನೆಗೆ ಬಂದರೂ ಜೀನತ್‌ಮಹಲ್ ಮಾತ್ರ ಹಳೆಯ ಮನೆಯಲ್ಲೆ ಉಳಿದುಕೊಂಡಳು. ತಾನು ತನ್ನ ಪತಿಯ ಗೋರಿಯ ಹತ್ತಿರವೇ ಇರಬಯಸುವುದಾಗಿ ಅವಳು ಹೇಳಿದಳು.

ಜಮಶೇದ ಬಖ್ತ್ ವಿದ್ಯಾಭ್ಯಾಸದಲ್ಲಿ ತೊಡಗಿದ್ದ. ಜಾಮನಿ ಬೇಗಮಳ ಮಗಳು ರೌನಕಳು ದೊಡ್ಡವಳಾಗುತ್ತ ನಡೆದಿದ್ದಳು. ಜವಾಂ ಬಖ್ತ್ ಮೊಗಲ ಸುನ್ನಿ ಪಂಥದವನಾಗಿದ್ದ. ಜಾಮನಿ ಬೇಗಂ ಫಾರಸಿ ಶಿಯಾ ಆಗಿದ್ದಳು. ಆದ್ದರಿಂದ ರೌನಕಳ ವಿವಾಹ ಸಂಬಂಧದಲ್ಲಿ ಅವರೀರ್ವರಲ್ಲಿ ಐಕಮತ್ಯವಿರಲಿಲ್ಲ. ಈ ವಾದದಲ್ಲಿ ಜಾಮನಿ ಬೇಗಮಳೇ ಗೆದ್ದಳು. ಕಲಕತ್ತೆಯ ಹಸನ್ ಎಂಬ ಮುಸಲ್ಮಾನ ತರುಣನೊಂದಿಗೆ ಅವಳ ವಿವಾಹವನ್ನು ಜಾಮನಿ ಬೇಗಂ ಮಾಡಿದಳು. ಈ ತರುಣ ಚೀನದಿಂದ ಬಂದು ಕಲಕತ್ತೆಯಲ್ಲಿ ನೆಲೆಸಿದ್ದ. ಈತ ತೈಮೂರನ ವಂಶದವನಾಗಿದ್ದ. ಈ ಲಗ್ನ ಸಮಯದಲ್ಲಿ ಬ್ರಿಟಿಶ್ ಸರಕಾರ ವೆಚ್ಚಕ್ಕೆಂದು ಹತ್ತು ಸಾವಿರ ರೂಪಾಯಿಗಳನ್ನು ಜಾಮನಿ ಬೇಗಮಳಿಗೆ ಕೊಟ್ಟಿತು.

ಲಗ್ನವಾದ ನಂತರ ಸರಕಾರದ ಆದೇಶದಂತೆ ಜಾಮನಿ ರಂಗೂನಿಗೆ ಮರಳಬೇಕಾಯಿತು. ಅವಳ ಕಣ್ಣಿನ ರೋಗ ಉಲ್ಬಣಿಸಿ ಅವಳು ಕುರುಡಿಯಾದಳು. ದಿನದಿನಕ್ಕೂ ಕೆಡುತ್ತ ನಡೆದಿದ್ದ ಜವಾಂ ಬಖ್ತ್ ಜಾಮನಿ ಕುರುಡಿಯಾದ ಮೇಲೆ ವ್ಯಭಿಚಾರಕ್ಕೂ ತೊಡಗಿದ. ಜಾಮನಿಯನ್ನು ಹಿಂಸಿಸತೊಡಗಿದ. ಜಾಮನಿ ಅವನಿಂದ ಬೇರೆ ಇರತೊಡಗಿದಳು. ದುರ್ವ್ಯಸನಗಳಿಂದ ರೋಗಿಷ್ಠನಾದ ಜವಾಂ ಬಖ್ತ್ ಮೋಲಮೀನ್ ಎಂಬಲ್ಲಿ ೧೮೮೪ ರಲ್ಲಿ ಮರಣಹೊಂದಿದ.

ಏಕಾಂಗಿ ಜೀವನದಿಂದ ಬೇಸತ್ತ ಜೀನತ್ ಮಹಲ್ ದುಃಖ ಮರೆಯಲೆಂದು ಅಫೀಮು ಸೇವಿಸತೊಡಗಿದ್ದಳು. ೧೮೮೬ ರಲ್ಲಿ ಅವಳೂ ತೀರಿಕೊಂಡಳು. ಗಂಡನ ಗೋರಿಯ ಮಗ್ಗುಲಲ್ಲೆ ಅವಳನ್ನು ಹೂಳಿದರು. ೧೮೯೯ ರಲ್ಲಿ ಜಾಮನಿ ಬೇಗಂ ಕೂಡ ಮೃತಪಟ್ಟಳು.

ಈ ಅವಧಿಯಲ್ಲಿ ರಂಗೂನಿನ ಮುಸಲ್ಮಾನರಲ್ಲಿ ತುಂಬ ಜಾಗೃತಿಯಾಗಿತ್ತು. ಬಹಾದ್ದೂರ ಶಾಹನ ಕುಟುಂಬದವರ ಬಗ್ಗೆ ಅವರಲ್ಲಿ ಅಪಾರ ಸಹಾನುಭೂತಿ ಉಂಟಾಗಿತ್ತು. ಅವರು ಜಾಫರ್ ಮತ್ತು ಜೀನತ್ ಮಹಲಳ ಗೋರಿಯ ಮೇಲೆ ಮಂದಿರ ಕಟ್ಟಲು ಅರ್ಜಿಗಳನ್ನು ಹಾಕಿದರು.

ಜಾಫರನ ಮೊಮ್ಮಗ ಜಮಶೇದ್ ಬಖ್ತನನ್ನು ರಂಗೂನಿನ ಮುಸಲ್ಮಾನರು ತುಂಬ ಗೌರವಿಸತೊಡಗಿದ್ದರು. ೧೯೨೨ ರಲ್ಲಿ ಜಮಶೇದ್ ಬಖ್ತ್ ಸತ್ತಾಗ ಶವಯಾತ್ರೆಯಲ್ಲಿ ೮,೦೦೦ ಕ್ಕಿಂತಲೂ ಹೆಚ್ಚು ಜನ ಭಾಗ ವಹಿಸಿದ್ದರು. ಜಾಫರ ಸತ್ತಾಗ ಒಬ್ಬನೇ ಒಬ್ಬಾತನೂ ಇರಲಿಲ್ಲ.

ಹೀಗೆ ಬ್ರಹ್ಮದೇಶದಲ್ಲಿ ಮೊಗಲ ಬಾದಶಹರ ವಂಶ ಸಮಾಪ್ತಿಗೊಂಡಿತು. *

"ಕಾದಂಬಿನಿ" ಯಿಂದ

---

ತಂದೆ- ನೋಡಪ್ಪಾ, ನನ್ನ ಮಗಳಿಗೆ ಸಂಗೀತ, ಚಿತ್ರಕಲೆ, ಕವಿತಾಲೇಖನಗಳಲ್ಲಿ ತುಂಬ ನೈಪುಣ್ಯವಿದೆ. ಅವಳು ಎಂ. ಎ. ಪಾಸಾಗಿದ್ದಾಳೆ. ಗಣಿತ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರ, ವೇದಾಂತ ವಿಷಯಗಳಲ್ಲಿ ತುಂಬ ಪರಿಣಿತಿ ಇದೆ. ತಿಳಿಯಿತೆ! ಇನ್ನು ನಿನ್ನ .. ..

ತರುಣ-ಇಂಥ ತರುಣಿ ನನ್ನ ಹೆಂಡತಿಯೇನಾದರೂ ಆದಲ್ಲಿ ಸಂದರ್ಭಾನುಸಾರ ಪ್ರಯೋಜನಕ್ಕೆ ಬರಲಿ ಎಂದು ನಾನು ಅಡಿಗೆ ಮಾಡುವುದು ಮತ್ತು ಹೊಲಿಗೆ ಕಸೂತಿಗಳನ್ನು ಕಲಿಯುತ್ತಿದ್ದೇನೆ.

* * *

ಮಿಂತ ಭಾಷಣದಲ್ಲಿ ನನಗೆ ಪೂರ್ಣ ವಿಶ್ವಾಸವಿದೆ, ನಾನು ಆ ಬಗ್ಗೆ ತಾಸುಗಟ್ಟಲೆ ಬೇಕಾದರೂ ಮಾತಾಡಬಲ್ಲೆ.

—ಬರ್ನಾರ್ಡ ಶಾ

# ಇದುವೆ ಜೀವ ಇದು ಜೀವನ

ನನ್ನ ಸ್ನೇಹಿತ ರಾಜು ಮದುವೆಯು ಹೊಸದರಲ್ಲಿ ರಮಾಳ ಮನಸ್ಸನ್ನು ನೋಯಿಸಬಾರದೆಂದು ಮಾಡಿದ್ದ. ಹೊಸ ಸಂಸಾರ ಹೂಡಿ ೧೫ ದಿನಗಳು ಕಳೆದಿದ್ದವು —ಯಾವ ತರ್ಕವೂ ಇಲ್ಲದೇ. ಒಮ್ಮೆ ಸಾರಿನಲ್ಲಿ ಉಪ್ಪು ಹೆಚ್ಚಿದ್ದಿತು. ರಾಜು ಮಾತನಾಡುತ್ತ ಉಂಡ. ಮಾರನೆ ದಿನ ಸಾರು ಪಲ್ಯ ಎರಡರಲ್ಲೂ ಉಪ್ಪು ಜಾಸ್ತಿ. ಊಟದ ಮಧ್ಯೆ ರಮಾ ರಾಜುವನ್ನು ನೋಡಿದಳು. ರಾಜು ಮಾತನಾಡಲಿಲ್ಲ. ಅಂದು ರಾತ್ರಿ ಊಟವೆಲ್ಲವೂ ಉಪ್ಪೇ ಆಗಿತ್ತು. "ಏನಿದು ಅಂಗಡಿಯಿಂದ ಅಕ್ಕಿಯಲ್ಲಿ, ತರಕಾರಿಯಲ್ಲಿ ಉಪ್ಪು ಬೆರೆಸಿ ಕಳುಹಿಸುತ್ತಾರೇನು?" ರಾಜು ದನಿಯೆತ್ತಿದ. ರಮಾ ನಗುತ್ತಾ, ಹೇಳಿದಳು: "ಅಬ್ಬಾ, ನಿಮ್ಮ ಪಾಲಿಗೆ ನಾನು ಹೊರಗಿನವಳಲ್ಲೆಂದು ಈಗ ವಿದಿತವಾಯಿತು. ನಮ್ಮವರಲ್ಲದೆ ಇನ್ನಾರು ಹುಳುಕನ್ನು ಎತ್ತಿ ಹೇಳಿ ತಿದ್ದುವುದು? ಅದನ್ನು ಬಿಡಿ. ಬೇರೆ ಅಡಿಗೆ ತೆಗೆದಿಟ್ಟಿದ್ದೇನೆ."

—ಎ. ಎಲ್. ರಮಣ

ಒಂದು ದಿನ ನನಗೆ ಸರ್ವೆ ರಿಕಾರ್ಡು ಗಳನ್ನು ತಯಾರು ಮಾಡುತ್ತಿರುವಾಗ ಸ್ನೇಹಿತನ ನೆನಪು ಬಂದು ಕಾರ್ಡು ಬರೆದು ಹಾಕಿದೆ. ಕೆಲವು ದಿನಗಳ ನಂತರ ನನಗೆ ಒಂದು ಪತ್ರ ಬಂತು. ಓದಿದೆ. ಈ ಪತ್ರ ನನಗೇ ಬಂದದ್ದೇ ಎಂದು ಸಂದೇಹವಾಯಿತು. ಅದರಲ್ಲಿ— "ನಿನ್ನ ಪತ್ರ ತಲುಪಿ ಅಭಿಪ್ರಾಯವಾಯಿತು. ನೀನು ಚೆನ್ನಾಗಿದ್ದೀಯೆಂದು ತಿಳಿದಿದ್ದೆ. ನಿನಗೆ ಬುದ್ಧಿಭ್ರಮಣೆಯಾಗಿದೆಯೆ? ನಿನ್ನನ್ನು ಶೀಘ್ರದಲ್ಲಿಯೇ ನೋಡಬಯಸುತ್ತೇನೆ"— ಎಂದು ಬರೆದಿತ್ತು. ಅಡ್ರೆಸ್ ನೋಡಿದೆ, ನನ್ನದೆ; ಬರೆದವನು ನನ್ನ ಮಿತ್ರನೇ. ನನಗೆ ಹೀಗೇಕೆ ಬರೆದ ಎಂದು ಯೋಚನೆ ಇಟ್ಟುಕೊಂಡಿತು.

ಕೆಲವು ದಿನಗಳ ನಂತರ ನನ್ನ ಸ್ನೇಹಿತ ಮನೆಗೆ ಬಂದ. ನಾನು ಮೊದಲಿನಂತೆ ಕುಶಲ ಪ್ರಶ್ನೆ ಮಾಡಿ ವಿಚಾರಿಸಿದೆ. ಅದಕ್ಕೆ ಅವನು "ಸದ್ಯ ಚೆನ್ನಾಗಿದ್ದೀಯಲ್ಲಾ" ಎಂದ. "ಏನು ಹೀಗೆ ಹೇಳ್ತೀಯಲ್ಲಾ" ಎಂದುದಕ್ಕೆ ತನ್ನ ಕೋಟಿನ ಜೇಬಿನಿಂದ ಕಾರ್ಡು ತೆಗೆದು ಕೊಟ್ಟು ಮೊದಲಿನಿಂದ ಓದು ಎಂದ. ಓದಲು ಪ್ರಾರಂಭಿಸಿದೆ. ಆಗ ಗೊತ್ತಾಯಿತು ನನಗೆ ಅವನು ಹಾಗೆ ಕಾಗದ ಬರೆದಿದ್ದ ಕಾರಣ. ಕಾಗದ ಬರೆಯುವಾಗ ನಾನು ಮೊದಲು "ಕ್ಷೇಮ, ಶ್ರೀರಾಮ" ಎಂದು ಬರೆಯುವ ವಾಡಿಕೆ. ಸರ್ವೆ ರಿಕಾರ್ಡು ಮಾಡುತ್ತಿರುವಾಗ ನನ್ನ ಮಿತ್ರನಿಗೆ ಬರೆದ ಕಾಗದದಲ್ಲಿ "ಕ್ಷೇಮ-ಶ್ರೀರಾಮ" ಬರೆಯುವ ಬದಲು "ಕ್ಷೇತ್ರ-ಉತ್ತರ" ಎಂದು ಬರೆದಿದ್ದೆ.

ನನ್ನ ಸ್ನೇಹಿತ ನನಗೆ, "ಸದಾ ಕಾಲ ಕೆಲಸ ಮಾಡ್ತಾನೇ ಇರಬೇಡ. ಆಗಾಗ್ಗೆ ವಿಶ್ರಾಂತಿ ತಕೋ. ಇಲ್ಲದಿದ್ದರೆ ನಿನಗೆ ಬುದ್ಧಿಭ್ರಮಣೆಯಾದೀತು" ಎಂದ.

(ಕ್ಷೇತ್ರ-ಉತ್ತರ ಎಂದು ಸರ್ವೆಸ್ಕೆಚ್ ಮೇಲ್ಭಾಗದಲ್ಲಿ ಬರೆಯುವುದು ವಾಡಿಕೆ)

—ಡಿ. ವೆಂಕಟಸ್ವಾಮಿ. ಚಾಮರಾಜನಗರ

ಅಂದು ಮಧ್ಯಾಹ್ನ ಬಸವನಗುಡಿಯಲ್ಲಿ ಕೆಲಸವಿದ್ದುದರಿಂದ ಶೇಷಾದ್ರಿಪುರದಿಂದ ಸೈಕಲ್ಲಿನಲ್ಲಿ ಹೋದೆ. ಕೆಲಸ ಮುಗಿಯುವಾಗ ಗಂಟೆ ಎಂಟಾಯಿತು. ಸೈಕಲಿನಲ್ಲಿ ದೀಪವಿರಲಿಲ್ಲ. ಇನ್ನು ಅಷ್ಟು ದೂರ ಸೈಕಲ್ ದೂಡಿಕೊಂಡೇ ಹೋಗಬೇಕೇ ಎಂದು ಗೊಣಗುತ್ತ ಹೊರಟರೆ ಮೇಲೆ ಮಳೆಯೂ ಬೀಳಲಾರಂಭಿಸಿತು. ಕೊಡೆಯೂ ಇರಲಿಲ್ಲ. ಸೈಕಲ್ ಸಮೇತ ಜಲಾಭಿಷೇಕಸಂಪ್ರೀತನಾಗಿ ನಡುಗುತ್ತ ಮನೆ ಸೇರಬೇಕಾಯ್ತಲ್ಲ ಎನ್ನುತ್ತ ಹತ್ತಿರದಲ್ಲೇ ಇದ್ದ ಮಿತ್ರನ ಬಿಡಾರಕ್ಕೆ ಹೋಗಿ ಅಲ್ಲಿ ಸೈಕಲ್ ಬಿಟ್ಟು ಹೋಗೋಣವೆಂದುಕೊಂಡೆ. ದುರದೃಷ್ಟದಿಂದ ಆತ ಆ ರೂಂ ಬಿಟ್ಟು ಎರಡು ತಿಂಗಳಾಗಿತ್ತೆಂದು ಅಲ್ಲಿ ಹೋದ ಮೇಲೆ ತಿಳಿಯಿತು.

ಸೈಕಲ್ ದೂಡಿಕೊಂಡು ಹೋಗುವುದಾದರೆ ಮನೆ ಸೇರಲು ೧೦ ಗಂಟೆಯಾಗುತ್ತದೆ. ನೆನೆದು ಚಳಿಯಿಂದ ನಡುಗಬೇಕಾಗುತ್ತದೆ. ಈ ದರಿದ್ರ ಸೈಕಲ್ ಒಂದನ್ನು ಯಾರಾದರೂ ಇಟ್ಟುಕೊಳ್ಳುವುದಾದರೆ ಅವರಿಗೆ ಕೇಳಿದ್ದು ಕೊಟ್ಟೇನು ಎಂದುಕೊಂಡೆ. ಆ ಮೇಲೆ ಬಸ್ ಹತ್ತಿ ಬೆಚ್ಚಗೆ ಮನೆ ಸೇರಬಹುದಿತ್ತು.

ಮಳೆ ಕಡಿಮೆಯಾಗುವುದನ್ನೇ ನಿರೀಕ್ಷಿಸುತ್ತ ಒಂದು ಕಟ್ಟೆಯ ಮೇಲೆ ನಿರಾಶನಾಗಿ ನಿಂತಿದ್ದ ನನಗೆ ಒಮ್ಮೆಲೆ ಒಂದು ಯೋಚನೆ ಹೊಳೆಯಿತು. ತಟ್ಟನೆ ಬೈಸ್ಕಲ್ ಹತ್ತಿ ಹೊರಟೆ. ಸ್ವಲ್ಪ ದೂರ ಹೋಗುವುದರೊಳಗೆ ಸರ್ಕಲ್ಲಿನ ಬಳಿ ನಿಂತ ಪೋಲೀಸ್ ನನ್ನನ್ನು ಹಿಡಿದು ನಿಲ್ಲಿಸಿದ. ಲಂಚ ಕೊಡಲೊಪ್ಪದ್ದರಿಂದ ಆತ ನೇರವಾಗಿ ನನ್ನನ್ನು ಹತ್ತಿರದ ಪೋಲೀಸ್ ಸ್ಟೇಶನ್ನಿಗೆ ಕರೆದೊಯ್ದು ಹೆಸರು ವಿಳಾಸ ಬರೆದುಕೊಂಡು ಮರುದಿನ ಹನ್ನೊಂದು ಗಂಟೆಗೆ ಕೋರ್ಟಿಗೆ ಬರಲು ಅಪ್ಪಣೆಯಿತ್ತ.

ನಾನು ಅವನನ್ನು ಹರಸುತ್ತ ಬೆಚ್ಚಗೆ ಮನೆಗೆ ಹೋದೆ. ಮರುದಿನ ಕೋರ್ಟಿನಲ್ಲಿ ಒಂದು ರೂಪಾಯಿ ದಂಡ ತೆತ್ತು ಸೈಕಲ್ ತೆಗೆದುಕೊಂಡು ಮನೆಗೆ ಬಂದೆ.

—ಬಿ. ಜೆ. ಶ್ರೀಧರ

ಆ ದಿನ ನಮ್ಮ ಹದಿಮೂರು ವರ್ಷದ ಸುನೀಲನ ಶಾಲೆಯಲ್ಲಿ ವಾರ್ಷಿಕ ಪಂದ್ಯಾಟಗಳು ನಡೆಯುವವಿದ್ದವು. ನಮ್ಮ ಹುಡುಗನೂ ಮೂರು ಕಾಲಿನ ಓಟದಲ್ಲಿ ಭಾಗವಹಿಸಿದ್ದ. ಅವನ ಒತ್ತಾಯಕ್ಕಾಗಿ ನಾನೂ ನನ್ನವಳೂ ಆಟನೋಡಲು ಅವನ ಶಾಲೆಗೆ ಹೋಗಿದ್ದೆವು.

ಸರಿ, ಪಂದ್ಯ ಸುರುವಾಯ್ತು. ನಮ್ಮ ಸುನೀಲ ಹಾಗೂ ಇನ್ನೊಬ್ಬ ಹುಡುಗ ಉತ್ಸಾಹದಿಂದ ನಿಂತಿದ್ದರು. ಸೀಟಿಯು ನಾದ ಹೊರಹೊಮ್ಮುತ್ತಿದ್ದಂತೆ ಭಾಗವಹಿಸಿದ ಹುಡುಗರ ಜೊತೆಗೆ ಎಲ್ಲರೂ ಓಡಿದರು. ನಾವೂ ಅರೆಕ್ಷಣ ನಿಂತು ಮುಂದೆ ಓಡುತ್ತಿದ್ದಂತೆ ಯಾರೋ "ಓ ಆನಂದ ರಾಯರ... ನಿಲ್ರಿ... ವೀಣಕ್ಕ...ಬರ್ರಿ..." ಎನ್ನುವ ಕೂಗು ಕೇಳಿ ಗಕ್ಕನೆ ನಿಂತೆವು.

ಎದುರು ಕೂಗುತ್ತ ಬರುತ್ತಿದ್ದವರು ಯಾರೂ ಅಲ್ಲ-ನಮ್ಮ ಸುನೀಲ. "ಹಾಗೇಕೆ ಕೂಗ್ತೀಯೋ.... ಹೆಸ್ರು ತಗೊಂಡು?" ಇವಳು ಹುಸಿಕೋಪ ಬೆರೆಸಿ ತಲೆ ನೇವರಿಸುತ್ತ ಕೇಳುತ್ತಿದ್ದಂತೆ— "ಅಮ್ಮಾ, ಇಲ್ಲಿ ಬರೀ ಅಪ್ಪ-ಅಮ್ಮರೇ ತುಂಬಿರೋವಾಗ ನಿಮ್ಮನ್ನ ಹುಡುಕೋ ಬಗೆ ಹೇಗೆ? ಅದ್ಕೇ ಬೇಗ ನಿಮ್ಮನ್ನ ಹುಡ್ಕಿ ನಾ ಫಸ್ಟ್ ಬಂದದ್ದನ್ನ ಹೇಳಬೇಕಂತ ಹಾಗೆ ಕೂಗಿದೆ" ಎಂದು ಸುನೀಲ ಎದೆ ಉಬ್ಬಿಸಿ ಹೇಳಿದ.

—ಆನಂದ ಕುಲಕರ್ಣಿ

ಗಂಡಸರನ್ನು ಸರಿ ದಾರಿಯಲ್ಲಿ ನಡೆಸುವ
ಚಾಕಚಕ್ಯ ಹೆಂಗಸರಲ್ಲಿರಬೇಕು

# ತಂಗಿಗೊಂದು ಪತ್ರ

ಸತ್ಯಕಾಮು ವಿದ್ಯಾಲಂಕಾರ
"ಜೀವನ ಸಾಥಿ" ಯಿಂದ

ಪ್ರಿಯ ಇರಾ;

ನೀನು ನಿನ್ನ ಪತ್ರದಲ್ಲಿ ಬರೆದಿರುವಿ, "ನಾನು ತುಂಬ ತೊಂದರೆಗೆ ಸಿಲುಕಿಕೊಂಡಿದ್ದೇನೆ. ನನ್ನ ಪತಿ ತೀರ ಬದಲಾಯಿಸಿಹೋಗಿದ್ದಾರೆ. ಈ ಮೊದಲು ನಾನು ಹೇಳಿದ್ದಕ್ಕೆಲ್ಲ ಹೂಂ ಎನ್ನುತ್ತಿದ್ದರು. ಈಗ ಹಾಗಿಲ್ಲ. ನಾನು ಹೇಳುವುದನ್ನೆಲ್ಲ ಅವರ ಒಳ್ಳೆಯದಕ್ಕೇ ಹೇಳುತ್ತೇನೆ. ಅವರ ಹಿತಕ್ಕಾಗಿ ನಾನು ಅಗಣಿತ ಕಷ್ಟಗಳನ್ನು ಸಹಿಸಿದ್ದೇನೆ, ತ್ಯಾಗ ಮಾಡಿದ್ದೇನೆ. ಆದರೆ ಅವರು ಅದೊಂದಕ್ಕೂ ಬೆಲೆ ಕೊಡುತ್ತಿಲ್ಲ. ಇದಲ್ಲದೆ ಇನ್ನೂ ಒಂದು ದೊಡ್ಡ ಸಂಕಟ ತಲೆಯೆತ್ತಿದೆ. ಈಗ ಕೆಲ ದಿನಗಳಿಂದ ಅವರು ಪರಸ್ತ್ರೀಯರೊಡನೆ ಬಲು ಸಲಿಗೆಯಿಂದ ನಗುತ್ತ ಕೆಲೆಯುತ್ತ ಮಾತಾಡತೊಡಗಿದ್ದಾರೆ. ಅವರು ಹೀಗೆಯೆ ಇದ್ದುಬಿಟ್ಟರೆ ನಾನು ವಿಷ ಕುಡಿಯುತ್ತೇನೆ ಇಲ್ಲವೆ ಅವರು ಯಾರೊಂದಿಗೆ ಮಾತಾಡುತ್ತಾರೊ ಅವರಿಗೆ ವಿಷ ಕೊಟ್ಟುಬಿಡುತ್ತೇನೆ. ನನಗೊಂದು ಹಾದಿ ತೋರಿಸು. ನನ್ನ ಜೀವನ ನರಕ



ವಾಗಿ ಬಿಟ್ಟಿದೆ" ಎಂದು.

ಸಂಸಾರವನ್ನು ನರಕ ಅಥವಾ ಸ್ವರ್ಗವನ್ನು ಮಾಡುವುದು ನಿನ್ನ ಕೈಯೊಳಗಿನ ಮಾತು. ನೀನು ಕುಶಲಳೂ ಪ್ರಾಮಾಣಿಕಳೂ ಆದ ಗೃಹಿಣಿಯೆಂದು ನಾನು ಬಲ್ಲೆ. ಪತಿಸೇವೆಯಲ್ಲಿ ತುಂಬ ಕಷ್ಟಗಳನ್ನು ಸಹಿಸಿರುವಿ ಮತ್ತು ಮಕ್ಕಳ ತಾಯಿಯಾಗಿ ತುಂಬ ತ್ಯಾಗವನ್ನೂ ಮಾಡಿರುವಿ. ಈಗ ನೀನು ನಿನ್ನ ತ್ಯಾಗಕ್ಕೆ ಸರಿಯಾಗಿ ಆದರ ಸಿಗುತ್ತಿಲ್ಲ ಎಂದು ತಿಳಿಯುತ್ತಿರುವಿ ಇದರಿಂದ ನೀನು ಕ್ಷುಬ್ಧಳಾಗಿರುವಿ. ಈ ಕ್ಷೋಭೆ ನಿನ್ನ ಮನದಲ್ಲಿ ಹಲವಾರು ವಿಕೃತ ಭಾವಗಳನ್ನು ಹುಟ್ಟಿಸುತ್ತಿದೆ. ಅವುಗಳಲ್ಲಿ ಈಗ ನಿನ್ನ ಮನದಲ್ಲಿ ಪತ್ನಿಯ ಅಧಿಕಾರವನ್ನು ಪಡೆಯಬೇಕೆಂಬ ಲಾಲಸೆ ಹುಟ್ಟಿರುವುದೂ ಒಂದಾಗಿದೆ. ನಿನ್ನ ಪತಿ ಮಾತ್ರವೇ ಬದಲಾಗಿಲ್ಲ, ನೀನೂ ಬದಲಾಗಿರುವಿ. ಈ ಮೊದಲು ನೀನು ಕೂಡ ಎಲ್ಲವನ್ನೂ ಆತನ ಸಲಹೆಯಂತೆಯೆ ಮಾಡುತ್ತಿರಲಿಲ್ಲವೆ?

ಆದರೆ ಈಗ ನೀನು ಮನೆಯ ವ್ಯವಸ್ಥೆಯನ್ನು ಮಾಡುವಾಗ ಪತಿಯ ರುಚಿ ಅರುಚಿಗಳನ್ನು ಗಮನಿಸುವುದಿಲ್ಲ ಈಗ ನೀನು ನಿನ್ನ ಮಾತನ್ನು ಸಾಧಿಸುವುದಕ್ಕಾಗಿ ಇದು ನನಗೆ ಸಂಬಂಧಿಸಿದ್ದು ನಿಮಗಲ್ಲ ಎಂದು ಆತನಿಗೆ ಹೇಳುತ್ತಿರುವಿ ನೀನೊಂದು ವೇಳೆ ನಿನ್ನ ಈಗಿನ ನಡಾವಳಿಯನ್ನು ಕುರಿತು ಲಕ್ಷ್ಯಪೂರ್ವಕವಾಗಿ ಯೋಚಿಸಿದಲ್ಲಿ ನೀನೀಗ ಅಧಿಕಾರದ ಚರ್ಚೆಯನ್ನೆ ಹೆಚ್ಚಾಗಿ ಮಾಡುತ್ತಿರುವಿ, ಪತಿಯ ಮೇಲೆ ಅಧಿಕಾರ ಚಲಾಯಿಸಲು ಬಯಸುತ್ತಿರುವಿ ಎಂದು ನಿನಗೆ ತಿಳಿಯದಿರದು. ನೆನಪಿನಲ್ಲಿಟ್ಟುಕೊ, ಈ ಒಂದು ಸತ್ಯ ಮಾತನ್ನು—ಅಧಿಕಾರದ ಅಂಕುಶದಿಂದ ಪತಿಯನ್ನು ಸರಿಯಾದ ಹಾದಿಗೆ ಹಚ್ಚುವ ಪ್ರಯತ್ನ ನಿರರ್ಥಕವಾಗುತ್ತದೆ. ಮನುಷ್ಯನನ್ನು ಅಂಕುಶದಿಂದಲ್ಲ, ಪ್ರೇಮದಿಂದ ಮಾತ್ರವೇ ವಶೀಕರಿಸಿಕೊಳ್ಳಬಹುದು. ಸರಿಹಾದಿ ತೋರಲು ಪ್ರೇಮದ ದೀಪವನ್ನು ಹಚ್ಚಬೇಕು. ಅಂಕುಶದ ಬಲದಿಂದ ಪತಿಯನ್ನು ನಡೆಸಿದೆಯಾದರೆ ಆತ ಒಂದು ಕುತ್ತಿನಿಂದ ಪಾರಾಗಿ ಮತ್ತಾವುದಾದರೂ ಕುತ್ತಿಗೆ ಬಲಿಯಾಗುವನು.

ಪತಿಯ ಮೇಲೆ ಅಧಿಕಾರ ಚಲಾಯಿಸಬೇಕೆಂಬ ಇಚ್ಛೆ ಸ್ತ್ರೀಯ ಮನದಲ್ಲಿ ಮೂಡಿದೊಡನೆ ಅವಳು ತನ್ನ ಕೋಮಲತೆಯ ಆಕರ್ಷಣವನ್ನು ಕಳೆದುಕೊಳ್ಳುತ್ತಾಳೆ. ಸ್ತ್ರೀಯ ಕೋಮಲತೆಯೆ ಪತಿಯ ಮೇಲೆ ಅಧಿಕಾರ ನಡೆಸಬಲ್ಲದು. ಸ್ವಭಾವತಃ ಪುರುಷ ಅಹಂಕಾರಿ ಎಂಬ ಮಾತು ನಿಜ. ಆದರೆ ಆತ ಸ್ತ್ರೀಯ ಪ್ರೇಮದೆದುರು ತನ್ನ 'ಅಹಂ'ನ್ನು ಮರೆತು ಬಿಡುತ್ತಾನೆಂಬುದೂ ಅಷ್ಟೇ ನಿಜ.

ನಿನ್ನ ಇಚ್ಛೆಯೆ ನಿನ್ನ ಮನೆಯಲ್ಲಿ ಕಾಯದೆಯಾಗುವಂತೆ ಮಾಡುವ ಹವ್ಯಾಸವನ್ನು ಬಿಟ್ಟುಕೊಡು ಎಂದೇ ನಾನು ಸಲಹೆ ಮಾಡುವೆ

ಪತಿಯ ಅಭ್ಯಾಸಗಳನ್ನು ಬದಲಿಸುವ ಯತ್ನಗಳು ಕೂಡ ಗೃಹಜೀವನದಲ್ಲಿ ಕಹಿಯನ್ನು ಹುಟ್ಟಿಸುವವು. ಸೂರ್ಯೋದಯಕ್ಕೆ ಮೊದಲೇ ಏಳುವ ಅಭ್ಯಾಸ ನಿನಗಿದೆ ಎಂದಿಟ್ಟುಕೊ. ಆದರೆ ನಿನ್ನ ಗಂಡನಿಗೆ ಬಹಳ ತಡವಾಗಿ ಏಳುವ ಅಭ್ಯಾಸವಿದೆ. ನೀನು ಮನೆಯನ್ನು ಸ್ವಚ್ಛ ಮಾಡಲು ಆರಂಭಿಸಿದಿ. ಬಾಗಿಲುಗಳು ಖಟ್ ಖಟ್ ಸಪ್ಪಳ ಮಾಡತೊಡಗಿದವು. ಬಟ್ಟಿಗಳನ್ನು ಝಾಡಿಸುವ ಶಬ್ದ ದೊಡ್ಡದಾಯಿತು. ಗಂಡನಿಗೆ ಇದರಿಂದ ಬೇಜಾರಾದರೂ ಮಾತಾಡಲಿಲ್ಲ. ಮಗ್ಗಲು ತಿರುಗಿ ಅಥವಾ ಮುಖದ ಮೇಲೆ ಚಾದರದ ಮುಸುಕೆಳೆದುಕೊಂಡು ಮತ್ತೆ ಆತ ಮಲಗಿದ. ಕೆಲ ನಿಮಿಷಗಳ ಮೇಲೆ ನೀನು ಆ ಚಾದರನ್ನು ಹಿಡಿದೆಳೆದು ಅವನ ಮೈ ಅಲುಗಿಸಿ ಎಬ್ಬಿಸಿದಿ. ಹೀಗಿದ್ದಲ್ಲಿ ಪತಿಯ ಮೇಲೆ ಈ ರೀತಿ ಅಂಕುಶ ಚಲಾಯಿಸುವ ನಿನ್ನ ಅಭ್ಯಾಸವನ್ನು ಬದಲಾಯಿಸಬೇಕಾಗುವುದು.

ನಿನ್ನ ಎರಡನೆಯ ದೂರು ಬರೀ ಕಲ್ಪನೆಯದು. ನಿನ್ನ ಪತಿ ಆಗೀಗ ಪರಸ್ತ್ರೀಯರ ಸೌಂದರ್ಯವನ್ನು ಹೊಗಳುತ್ತಾನೆ ಎಂದು ಬರೆದಿರುವಿ. ಸೌಂದರ್ಯವನ್ನು ಹೊಗಳುವುದು ಪಾಪವಲ್ಲ.

ನಿನ್ನ ಗಂಡ ಮೊಟ್ಟಮೊದಲು ನಿನ್ನನ್ನು ನೋಡಿದಾಗ ನಿನ್ನ ವಿಶುದ್ಧ ಸೌಂದರ್ಯವನ್ನು ಆತ ಹೊಗಳಿರಬೇಕು. ಆ ದೃಷ್ಟಿಯಲ್ಲಿ ವಿಷಯ ವಾಸನೆಯೇನೂ ಇದ್ದಿರಲಿಲ್ಲ ಇದೇ ವಾಸನಾ ರಹಿತ ದೃಷ್ಟಿಯಿಂದಲೇ ಇತರ ಸ್ತ್ರೀಯರನ್ನು ನೋಡಬಹುದು. ಈ ಮಾತನ್ನು ನೀನು ಒಪ್ಪುವೆಯಾದರೆ ನೀನೇತಕ್ಕೆ ಚಿಂತೆಗೊಳಗಾಗಬೇಕು ? ಪ್ರತಿಯೊಬ್ಬ ಸ್ತ್ರೀಯ ಸೌಂದರ್ಯವನ್ನೂ ಪತಿ ಭೋಗಿಸ ಬಯಸುತ್ತಾನೆ ಎಂಬಷ್ಟು ದೀರ್ಘಕ್ಕೆ ನಿನ್ನ ಸಂಶಯವಾದರೂ ಯಾತಕ್ಕೆ ಹೋಗಬೇಕು ?

ಸ್ತ್ರೀಯರು ಅಂತಃಪುರಗಳಲ್ಲಿ ಕೈದಿಗಳಾಗಿರುತ್ತಿದ್ದ ಕಾಲದಲ್ಲಿ ನಾವೀಗ ಇಲ್ಲ. ಸ್ತ್ರೀಯರು ಪುರುಷರ ಹೆಗಲಿಗೆ ಹೆಗಲು ಹಚ್ಚಿ ನಡೆಯುತ್ತಿರುವ ಯುಗದಲ್ಲಿ ನಾವಿದ್ದೇವೆ. ಕ್ರೀಡಾಂಗಣದಲ್ಲಿ ಸ್ತ್ರೀಯರು ಪುರುಷರಂತೆಯೆ ಓಡುತ್ತಾರೆ, ಜಿಗಿಯುತ್ತಾರೆ. ಆಫೀಸುಗಳಲ್ಲಿ ಕೆಲಸ ಮಾಡುತ್ತಾರೆ. ಸೈನ್ಯದಲ್ಲಿ ಸೇರಿಕೊಳ್ಳುತ್ತಾರೆ. ಸ್ವತಂತ್ರವಾಗಿ ಸಕಲ ಬಗೆಯ ಕೆಲಸಗಳನ್ನೂ ನಿರ್ವಹಿಸುತ್ತಾರೆ.

ಸಾರ್ವಜನಿಕ ಮನೋರಂಜನ ಕಾರ್ಯಕ್ರಮಗಳನ್ನು ನೋಡುವುದನ್ನು ಬಿಟ್ಟು ಪತಿಯ ಮೇಲೆ ಕಾವಲು ನಡೆಸುವ ಎಷ್ಟೋ ಜನ ಪತ್ನಿಯರನ್ನು ನಾನು ನೋಡಿದ್ದೇನೆ. ಗಂಡನ ಕಣ್ಣು ಆಟದ ಮೇಲೆ, ಹೆಂಡತಿಯ ಕಣ್ಣು ಗಂಡನ ಮೇಲೆ. ತನ್ನ ಗಂಡನ ಕಣ್ಣು ಎಲ್ಲಿ ಪಕ್ಕದಲ್ಲಿ ಕುಳಿತಿರುವ ಸುಂದರ ಹುಡುಗಿಯತ್ತ ಹಾಯುವುದೋ ಎಂದು ಅವಳು ನೋಡುತ್ತಿರುತ್ತಾಳೆ.

ಸಾಮಾನ್ಯವಾಗಿ ಗಂಡ ಆಫೀಸಿನಿಂದ ಬರುವುದು ತಡವಾದರೆ ಹೆಂಡತಿಯ ದುಶ್ಚಿಂತೆಗಳ ಭಾರ ಹೆಚ್ಚುತ್ತದೆ. ಇಂದಾರೋ ಮಿತ್ರನ ಮನೆಯಲ್ಲಿ ಅವನ ಹೆಂಡತಿಯೊಡನೆ ಹರಟುತ್ತ ಕುಳಿತಿರಬೇಕು ಎಂದು ಅವಳ ಮನಸ್ಸು ಕಲ್ಪಿಸುತ್ತದೆ. ಅವಳಿಗೆ ಒಬ್ಬೊಬ್ಬರಾಗಿ ತನ್ನ ಪರಿಚಯದ ಎಲ್ಲ ಸ್ತ್ರೀಯರ ಮೇಲೆ ಸಂದೇಹವುಂಟಾಗತೊಡಗುವುದು. ಆ ಎಲ್ಲ ಸ್ತ್ರೀಯರೂ ತಮ್ಮ ಮೋಹಜಾಲದಲ್ಲಿ ತನ್ನ ಗಂಡನನ್ನು ಕೆಡವಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆಂದು ಅನಿಸುವುದು. ಈ ಕಲ್ಪನೆಯಿಂದ ಅವಳ ಮನಸ್ಸು ಕಂಪಿಸತೊಡಗುವುದು.

ಕೆಲವರಂತೂ ಈ ಭಯದಿಂದ ಎಷ್ಟು ವ್ಯಗ್ರರಾಗಿ ಹೋಗುತ್ತಾರೆಂದರೆ ಅವರು ಒಂದು ದಿನದ ಮಟ್ಟಿಗೂ ಪತಿಯನ್ನು ಬಿಟ್ಟು ಇರಲೊಪ್ಪುವುದಿಲ್ಲ. ಗಂಡನನ್ನು ಏಕಾಂಗಿಯಾಗಿ ಬಿಟ್ಟು ಹೋದಲ್ಲಿ ಈ ಭೋಳೇ ಮನುಷ್ಯ ಯಾವಳದಾದರೂ ಮೋಹಜಾಲದಲ್ಲಿ ಸಿಲುಕಿಕೊಂಡಾನು ಎಂಬ ಭಯ ಅವರಿಗಿರುತ್ತದೆ. ಇವರು ಸದಾ ಪತಿಯ ನೆರಳಿನಂತೆ ಅವರ ಜೊತೆಯಲ್ಲಿರುತ್ತಾರೆ. ಈ ಬಗೆಯ ಅತಿ ಸಾಹಚರ್ಯದಿಂದ ಇಬ್ಬರ ಮನದಲ್ಲೂ ಅಪ್ರೀತಿಯ ಬೀಜ ಮೊಳಕೆಯೊಡೆಯುತ್ತದೆ. ವಿಯೋಗವು ಪ್ರೇಮಿಗಳ ಪ್ರೇಮಕ್ಕೆ ಪುಟ ಕೊಡುತ್ತದೆ ಎಂಬ ಮಾತನ್ನವರು ಮರೆಯುತ್ತಾರೆ. ಸಂಶಯಗ್ರಸ್ತ ಪತ್ನಿಯರು ವಿಯೋಗಕ್ಕೆ ಅವಕಾಶವನ್ನೇ ಕೊಡದೆ ದೊಡ್ಡ ತಪ್ಪನ್ನು ಮಾಡುತ್ತಾರೆ.

ಈ ಸಂದೇಹವು ಕೆಲ ಮೂರ್ಖ ಪತ್ನಿಯರನ್ನು ಅತಿ ಶೃಂಗಾರಪ್ರಿಯರನ್ನಾಗಿಯೂ ಮಾಡುತ್ತದೆ. ಗಂಡ ಥಳಕು-ಬೆಳಕಿನ ಹೆಂಗಸರಲ್ಲಿ ಅನುರಕ್ತನಾಗಿದ್ದಾನೆಂಬ ಮಾತು ಅವರ ಮನದಲ್ಲಿ ಬೇರೂರಿಬಿಡುತ್ತದೆ. ಪತಿಯ ಅನುರಾಗದ ಏಕಾಧಿಕಾರ ಪಡೆಯಬೇಕೆಂಬ ಹಂಬಲದಿಂದ ಇವರು ಸಲ್ಲದ ಮಟ್ಟಿಗೆ ಶೃಂಗಾರ ಮಾಡಿಕೊಳ್ಳಲಾರಂಭಿಸುತ್ತಾರೆ. ಶೃಂಗಾರಸಾಧನಗಳಿಗಾಗಿ ಹಣದ ದುರುಪಯೋಗವಾಗತೊಡಗುತ್ತದೆ.

ಬಾಹ್ಯ ಥಳಕುಬೆಳಕಿನಿಂದ ಪತಿಯ ಹೃದಯವನ್ನು ಗೆದ್ದುಕೊಳ್ಳುವುದೆಂದರೆ ಅವನ ತೃಷ್ಣೆಯು ಇನ್ನಿಷ್ಟು ಪ್ರಬಲವಾಗುವುದಕ್ಕೆ ಸಹಾಯ ಮಾಡಿದಂತೆಯೆ ಎಂದು ಈ ಮೂರ್ಖ ಪತ್ನಿಯರಿಗೆ ಯಾರು ತಿಳಿಸಿ ಹೇಳಬೇಕು? ನಿಜವಾಗಿಯೂ ಅವರಲ್ಲಿಂಥ ತೃಷ್ಣೆ ಜಾಗೃತವಾಗಿದ್ದರೆ ಈ ಹೊಸ ಪ್ರಲೋಭನದಿಂದ ಅದು ಇನ್ನಷ್ಟು ಪ್ರಬಲವಾ-

ದೀತೇ ವಿನಾ ಶಾಂತವಾಗದು. ಪತ್ನಿ ಕೂಡ ಗಂಡನನ್ನು ಭೋಗಾಸಕ್ತನನ್ನಾಗಿ ಮಾಡಲು ಯತ್ನಿಸಿದರೆ ಆತ ಅವಳನ್ನು ಕೂಡ ಕೇವಲ ವಿಲಾಸದ ಸಾಮಗ್ರಿಯೆಂದು ತಿಳಿದುಕೊಳ್ಳು ವನು. ಗೃಹಜೀವನದ ಪಾವಿತ್ರ್ಯ ಸುಟ್ಟು ಬೂದಿ ಯಾಗಿ ಹೋಗುವುದು. ಹೆಂಡತಿಯ ಜೀವನ ಹಾಹಾಕಾರಮಯವಾಗಿ ಬಿಡುವುದು.

ಇಂಥ ಉದ್ದಾಮ ವಾಸನಾಮಯ ಪ್ರೇಮದ ಉತ್ಕಟ ಆಕಾಂಕ್ಷೆಗಳು ಕೂಡ ಎಷ್ಟೋ ಸಲ ಹೆಂಡತಿಯನ್ನು ಅಸ್ವಸ್ಥಳನ್ನಾಗಿ ಮಾಡುವುವು. ಅವನ್ನು ಹೊಂದಲು ಅವಳು ಯಾವ ಕೀಳು ಉಪಾಯಗಳ ಆಶ್ರಯ ಪಡೆಯುತ್ತಾಳೊ ಅವು ಗಳಿಂದ ಪತಿಯ ದೃಷ್ಟಿಯಲ್ಲಿ ಅವಳ ಅಂತ-ಸ್ತೇನೂ ಹೆಚ್ಚುವುದಿಲ್ಲ, ಕಡಿಮೆಯೇ ಆಗುತ್ತದೆ. ಸಾಮಾನ್ಯದಲ್ಲಿ ಪುರುಷ ಸ್ವಾಭಿಮಾನಿಯಾಗಿರು ತ್ತಾನೆ. ಸಮಾಜದಲ್ಲಿ ಆತ ತನ್ನ ಪ್ರತಿಷ್ಠೆಯನ್ನು ಕಾಯ್ದಿಟ್ಟುಕೊಂಡಿರಲು ಬಯಸುತ್ತಾನೆ. ತನ್ನಿಂದ ಪ್ರಮಾದವಾದರೂ ಆತ ಅದರ ಝಳ ಮನೆಗೆ ತಾಕದಂತೆ ಜಾಗ್ರತೆ ವಹಿಸಬಯಸು ತ್ತಾನೆ. ತನ್ನ ವಿಷಯವಾಸನೆಯ ತೃಪ್ತಿ ಯಾವ ಸ್ತ್ರೀಯಿಂದ ದೊರೆಯುವುದೊ ಅವಳನ್ನು ಕೂಡ ಆತ ಕೆಳ ದರ್ಜೆಯವಳೆಂದೇ ತಿಳಿದುಕೊಂಡಿ ರುತ್ತಾನೆ ಕ್ಷಣಿಕ ತೃಪ್ತಿಯಲ್ಲಾತ ಮನೆಯ ಸುಖವನ್ನೂ ಹೆಂಡತಿಯ ಮೃದು ಪ್ರೇಮ ವನ್ನೂ ಮರೆತಿರುವುದಿಲ್ಲ. ನಿಜವಾಗಿ ಯೆಂದರೆ ಹೊರಗಿನ ಭೋಗ ವಿಲಾಸಗ-ಳಿಂದ ದಣಿದವನಾಗಿ ಆತ ಮನೆಗೆ ಬಂದು ಮನೆಯ ಪ್ರೇಮಗಂಗೆಯಲ್ಲಿ ಸ್ನಾನ ಮಾಡಿದಾಗ ಅವನ ಮನಸ್ಸು ಮತ್ತೆ ತನ್ನ ಸಂಸಾರದಲ್ಲಿ ಆಕೃಷ್ಟವಾಗುತ್ತದೆ. ಮನೆ ಆತನಿಗಾಗಿ ಸದಾ ತೀರ್ಥಸ್ನಾನವಾಗಿ ಪರಿಣಮಿಸುತ್ತದೆ.

ಆದರೆ ಈ ಸಮಯದಲ್ಲಿ ಪತಿಯ ಮೇಲೆ ಸಂಶಯಪಟ್ಟುಕೊಂಡು ಅಥವಾ ಆತನ ಯಾವು ದೊಂದು ತಪ್ಪನ್ನು ಗುಡ್ಡವಾಗಿ ಮಾಡಿ ಸಾ-ಕ್ಷಾತ್ ಚಂಡಿಯ ಅವತಾರವನ್ನು ತಾಳುವ ಹೆಂಡಂದಿರು ಸಂಸಾರದ ಸುಖಶಾಂತಿಯ ಬಾಗಿ ಲನ್ನು ಸದಾ ಮುಚ್ಚಿಕೊಂಡು ಬಿಡುತ್ತಾರೆ. ಮನೆಯ ಬಾಗಿಲು ಗಂಡನಿಗಾಗಲಿ, ಹೆಂಡತಿ ಗಾಗಲಿ ಎಂದೂ ಮುಚ್ಚಬಾರದು. ತಪ್ಪು ಹೆಂಡ ತಿಯದಿರಲಿ, ಗಂಡನದಿರಲಿ ಮನೆಯ ಬಾಗಿಲು ಅವರಿಗಾಗಿ ತೆರೆದಿರಲೇಬೇಕು. ಮನೆ ಎಂಬುದರ ಮಹತ್ವವೇನೆಂದರೆ ಆ ಸ್ಥಾನದಲ್ಲಿ ಅಲ್ಲಿ ಒಳಿತು ಕೆಡಕುಗಳ ವಿಚಾರಣೆ ನಡೆಯಕೂಡದು. ತಾಯಿಯ ವಾತ್ಸಲ್ಯಪೂರ್ಣ ಮಡಲಿನಂತೆ ಮನೆಯ ಅಂಗಳ ಎಲ್ಲರ ಹಾದಿ ಕಾಯುವುದು.

ಪತ್ನಿಯಾದವಳು ತನ್ನ ಮನದಲ್ಲಿ ಸಂದೇಹಕ್ಕೆ ಸ್ಥಾನವನ್ನೆ ಕೊಡಕೂಡದು. ಒಂದು ವೇಳೆ ಸಂದೇಹವೇನಾದರೂ ಬಂದಿದ್ದೇ ಆದರೆ ಬಹು ಶೀಘ್ರವಾಗಿ ಅದನ್ನು ಇಲ್ಲದಂತಾಗಿಸ ಬೇಕು. ಈ ಸಂಶಯದ ಹಿಂದೆ ಗಂಡು ಮತ್ತು ಹೆಣ್ಣಿನ ಸಂಬಂಧ ವಾಸನಾರಹಿತವಾಗಿರಲು ಸಾಧ್ಯವಿಲ್ಲ ಎಂಬ ನಮ್ಮ ಪರಂಪರಾಗತ ವಿಚಾರ ವಡಗಿದೆ. ಈ ವಿಚಾರದಿಂದಲೇ ಪತಿ-ಪತ್ನಿಯರು ಬಹು ಬೇಗನೆ ಆತ್ಮವಿಶ್ವಾಸವನ್ನು ಕಳೆದು ಕೊಂಡುಬಿಡುತ್ತಾರೆ.

ಈ ವಿಷಯುಕ್ತ ವಿಚಾರಗಳಿಗೆ ತಿಲಾಂಜಲಿ ಯನ್ನೀಯಬೇಕಾದ ಕಾಲವೀಗ ಪ್ರಾಪ್ತವಾಗಿದೆ. ಸತೀತ್ವರಕ್ಷಣೆಗಾಗಿ ಪತ್ನಿ ಈ ಲಕ್ಷ್ಮಣ ರೇಖೆಯ ಒಳಗೇ ಇರಬೇಕಾಗುತ್ತದೆ. ಪತಿ ಮಾತ್ರ ಈ ರೇಖೆಯೊಳಗೆ ಬರಬಲ್ಲನು. ಆತ ಮನಬಂದಾಗ ರೇಖೆಯನ್ನು ದಾಟಿ ಹೊರಗೆ ಹೋಗಬಲ್ಲ. ಈ ರೇಖೆ ಸ್ತ್ರೀಯ ಆತ್ಮದ ಮೇಲೆ ಚಾಬೂಕಿನ ಬರೆಯಂತೆ ಮೂಡುವುದು ಈ ಸಂತಾಪವೇ ಅನೇಕ ಸಲ ಪತಿಯಲ್ಲಿ ಅವಳ ಸಂಶಯವುದ್ಭವಿ ಸುವುದಕ್ಕೆ ಕಾರಣವಾಗುವುದು. ಈ ರೇಖೆಯ ಗುರುತು ಅಳಿಯುವ ವರೆಗೂ ಸಂದೇಹ ದೂರ ವಾಗದು. ಈ ಲೋಹಪಂಜರದಿಂದ ಹೊರಗೆ ಬಂದಾಗಲೇ ಪುರುಷ ಮತ್ತು ಸ್ತ್ರೀ ಇಬ್ಬರೂ ಸ್ವಚ್ಛ ಪ್ರಕಾಶದಲ್ಲಿ ನಿರ್ಮಲ ಭಾವನೆಗಳನ್ನು ಹೊಂದಿ ಜೊತೆಯಾಗಿ ಸಾಗಬಲ್ಲರು. *

"ನವನೀತ" ದಿಂದ ಉದ್ಧೃತ

ಪನ್ನಾದ ಗಣಿಗಳಲ್ಲಿ ನೀವೂ ನಿಮ್ಮ ಭವಿಷ್ಯವನ್ನು ಕಾಣಬಹುದು

# ೫ ರೂಪಾಯಿ ಕೊಟ್ಟರೆ ವಜ್ರ!

ರಾಧಾಕೃಷ್ಣ ರಾವ್

ನಿಮ್ಮ ಅದೃಷ್ಟ ಚೆನ್ನಾಗಿದೆಯೆಂದೆನಿಸಿದರೆ ಪನ್ನಾಕ್ಕೆ ಹೋಗಿರಿ, ಐದು ರೂಪಾಯಿ ತೆತ್ತು ಲೈಸನ್ಸ್ ಪಡೆಯಿರಿ ಮತ್ತು ವಜ್ರಶೋಧಕರಾಗಿರಿ. ನಿಮ್ಮ ಗ್ರಹಗತಿ ಲಾಭದಲ್ಲಿರುವುದು ನಿಜವಾಗಿದ್ದರೆ ನೀವು ಸಾವಿರಗಟ್ಟಳೆ ಬೆಲೆ ಬಾಳುವ ವಜ್ರಗಳನ್ನು ಅಗೆದು ಧನ್ಯರಾಗಿ ಹೋಗಬಲ್ಲಿರಿ.

ಕೆಲ ಶತಮಾನಗಳ ಹಿಂದೆ ಭಾರತವೇ ಜಗತ್ತಿಗೆ ವಜ್ರಗಳನ್ನೊದಗಿಸುವ ಏಕಮಾತ್ರ ದೇಶವಾಗಿತ್ತು. ಗೋವಳಕೊಂಡದ ವಜ್ರದ ಗಣಿಗಳೇ ಇಂದು ಜಗತ್ತಿನಲ್ಲಿ ಇತಿಹಾಸಪ್ರಸಿದ್ಧವೆನಿಸಿದ ವಜ್ರಗಳಲ್ಲಿ ಹೆಚ್ಚಿನವುಗಳನ್ನು ಕೊಟ್ಟವುಗಳು. ಆದರೆ ಗೋವಳಕೊಂಡದ ಗಣಿಗಳ ವಜ್ರನಿಧಿ ಖಾಲಿಯಾಯಿತು ಮತ್ತು ದಕ್ಷಿಣ ಆಫ್ರಿಕದ ಕಿಂಬರ್ಲಿ ಗಣಿಗಳು ಅನಂತವೆನಿಸುವಂಥ ವಜ್ರನಿಧಿಯನ್ನು ಹೊಂದಿರುವುದು ಕಳೆದ ಶತಮಾನದಲ್ಲಿ ಕಂಡುಹಿಡಿಯಲ್ಪಟ್ಟಿತು. ಭಾರತದ ಹೆಸರು ಜಗತ್ತಿನ ವಜ್ರ ನಕಾಶೆಯಿಂದ ಮಾಯವಾಯಿತು.

ಆದರೆ ಪನ್ನಾ ಇನ್ನೂ ಇದೆ. ಗೋವಳಕೊಂಡ ಅಥವಾ ಕಿಂಬರ್ಲಿಯಂತೆ ಅಪಾರ ವಜ್ರಗರ್ಭಿತವಲ್ಲದಿದ್ದರೂ ಪನ್ನಾದ ಬಗ್ಗೆ ನಾವು ಹೆಮ್ಮೆ ತಾಳಬಹುದು. ವಾಸ್ತವಿಕವಾಗಿ ಬುಂದೇಲಖಂಡದ ಜನ ಪನ್ನಾದ ವಜ್ರದ ಖನಿ ದೈವದತ್ತವೆಂದು ನಂಬುತ್ತಾರೆ. ಮೊಗಲರ ಸಾಮ್ರಾಜ್ಯಶಾಹಿಗೆ ತಲೆವಾಗದೆ ಔರಂಗಜೇಬನ ನಾ-ತಾ ಎಂಬ ಸೇನಾನಾಯಕರಿಗೆ ಚಳ್ಳೇಕಾಯಿ ತಿನ್ನಿಸಿದ ಬುಂದೇಲಿ ವೀರ ಛತ್ರಸಾಲನಿಗೆ ಅವನ ಪ್ರಿಯ ಗುರುವಿನಿಂದ ಬಂದ ವರದಾನವೇ ಪನ್ನಾದ ವಜ್ರದ ಗಣಿಗಳೆಂದು ಬುಂದೇಲಿ ಆಖ್ಯಾಯಿಕೆಗಳ ಹೇಳಿಕೆ. ಛತ್ರಸಾಲನ ಸ್ವಾತಂತ್ರ್ಯ ಸಮರದ ಮಧ್ಯದಲ್ಲೊಂದು ಸಲ ಅವನಿಗೆ ಹಣದ ಅಡಚಣೆ ಬಂದೊದಗಿತಂತೆ. ಆಗ ಯೋಗಿಯಾದ ಅವನ ಗುರು ಸ್ವಾಮೀ ಪ್ರಾಣನಾಥರು ಅವನನ್ನು ಕರೆದು, "ವತ್ಸಾ, ಬಾ. ಕುದುರೆಯೇರಿ ನೀನು ಇಂದು ಎಷ್ಟು ಪ್ರದೇಶವನ್ನು ಸುತ್ತುವಿಯೋ ಅಷ್ಟೂ ವಜ್ರಗರ್ಭಿತವಾಗುತ್ತದೆ" ಎಂದು ಹರಸಿದರಂತೆ.

ಅಂದಿನಿಂದ ಬುಂದೇಲ ಖಂಡದ ಆರ್ಥಿಕ ಸ್ಥೈರ್ಯಕ್ಕೆ ಪನ್ನಾದ ವಜ್ರದ ಗಣಿ ಆಧಾರವಾಯಿತು ಛತ್ರಸಾಲ-ಸ್ವಾಮೀ ಪ್ರಾಣನಾಥರ

ಪನ್ನಾದಲ್ಲಿ ದೊರೆತ "ವಿಜಯ"



ಆಖ್ಯಾಯಿಕೆಯ ಸತ್ಯಾಸತ್ಯತೆ ಹೇಗೇ ಇರಲಿ, ಕನಿಷ್ಠಪಕ್ಷ ೧೭೩೯ ರಿಂದಲೂ ಪನ್ನಾದಲ್ಲಿ ವಜ್ರಗಳು ಸಿಗುತ್ತಿರುವುದು ಸಿದ್ಧವಾಗಿದೆ. ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಪನ್ನಾದ ರಾಜಮನೆತನವು ಈ ಅಮೌಲ್ಯ ಖನಿಜವನ್ನು ಅಗೆಸುತ್ತಿತ್ತು. ಇಂದು ಅಲ್ಲಿನ ವಜ್ರಗಳು ದೇಶದ ಅನೇಕ ರತ್ನಪಡಿ ವ್ಯಾಪಾರಿಗಳ ಕಪಾಟುಗಳಿಗೆ ಶೋಭೆ ಕೊಡುತ್ತಿವೆ.

ಮಧ್ಯ ರೇಲ್ವೆಯ ಅಲಹಾಬಾದ-ಜಬಲಪುರ ಶಾಖೆಯಲ್ಲಿ ಸತಾನಾ ನಿಲ್ದಾಣದಿಂದ ೪೫ ಮೈ. ಪಶ್ಚಿಮಕ್ಕಿರುವ ಪನ್ನಾದ ಬಳಿ ಒಂದು ವಿಮಾನ ಇಳಿಯುವ ಪಟ್ಟಿಯೂ ಇದೆ. ಪ್ರಸಿದ್ಧ ದೇವಾಲಯ ನಗರ ಖುಜರಾಹೋಗೆ ಹೋಗುವವರು ಈ ಪಟ್ಟಿಯಲ್ಲಿ ಇಳಿಯುತ್ತಾರೆ.

ಅಕಬರನ ಕಾಲದಲ್ಲೇ ಈ ಪ್ರದೇಶದಲ್ಲಿ ವಜ್ರ ಸಿಗುತ್ತಿತ್ತೆಂದು ಅಬುಲ್ ಫಜಲನ ಬರವಣಿಗೆಯಿಂದ ತಿಳಿಯುತ್ತದೆ. ೧೭೫೦ ರಿಂದ ಪನ್ನಾದ ಅರಸರು ವಜ್ರ ಅಗೆಸುತ್ತಿದ್ದರು. ಆಗ ವರ್ಷಕ್ಕೆ ಆಗಿನ ೪,೦೦,೦೦೦ ರೂಪಾಯಿ ಬೆಲೆಯ ವಜ್ರಗಳು ಸಿಗುತ್ತಿದ್ದವಂತೆ. ಆದರೆ ಬರಬರುತ್ತ ಈ ಗಣಿಗಳ ಉತ್ಪಾದನೆ ಶೂನ್ಯಪ್ರಾಯವಾಗಿಹೋಯಿತು

ಇಂದು ಪನ್ನಾದ ಗಣಿಗಳು ಚಿಕ್ಕ ಉದ್ಯಮದ ರೀತಿಯಲ್ಲಿ ನಡೆಸಲ್ಪಡುತ್ತಿವೆ. ವರ್ಷಕ್ಕೆ ರೂ. ೫,೦೦,೦೦೦ ಬೆಲೆಯ ವಜ್ರಗಳು ಇಲ್ಲಿ ದೊರೆಯುತ್ತಿವೆ ಪ್ರಥಮ, ದ್ವಿತೀಯ ಮತ್ತು ತೃತೀಯ ವರ್ಗಗಳ ವಜ್ರಗಳು ಇಲ್ಲಿ ಸಿಗುತ್ತಿದ್ದು, ಮೊದಲನೆಯವೆರಡು ವರ್ಗಗಳ ವಜ್ರಗಳು ಆಭರಣಗಳಿಗಾಗಿ ಮತ್ತು ಮೂರನೇ ವರ್ಗದವು ಔದ್ಯೋಗಿಕ ಉಪಕರಣಗಳಿಗಾಗಿ ಉಪಯೋಗಿಸಲ್ಪಡುತ್ತಿವೆ.

ಪನ್ನಾದಲ್ಲಿ ಭಾಗ್ಯವನ್ನರಸಬೇಕೆಂಬ ಖಾಸಗಿ ಜನರಿಗೂ ಸ್ಥಾನವಿದೆ. ೪೦ ಚದರ ಮೈಲು ವಿಸ್ತಾರವಾದ ಪ್ರದೇಶದಲ್ಲಿ ವಜ್ರ ಎಲ್ಲಿ ಬೇಕಾದರೂ ದೊರಕಬಹುದು. 'ವಜ್ರಾಧಿಕಾರಿ'ಯಿಂದ ಐದು ರೂಪಾಯಿ ಕೊಟ್ಟು ಲೈಸನ್ಸ್ ಪಡೆದರೆ ನಿಮಗೆ ಆತ ೫೦ ಚದರಡಿ ಭೂಮಿಯನ್ನು ಅಳೆದು ಕೊಡುತ್ತಾನೆ. ಅಲ್ಲಿ ನೀವು ಐದರಿಂದ ೧೫ ಅಡಿ ಆಳದ ವರೆಗೆ ಎಷ್ಟು ಆಳದಲ್ಲೂ ನಿಮ್ಮ ಅದೃಷ್ಟವನ್ನು ಥಕ್ಕನೆ ಕಾಣಬಹುದು.

ಬೇಸಗೆಯಲ್ಲಿ ನೀರು ಅಲಭ್ಯವಾದ ಈ ಪ್ರದೇಶದಲ್ಲಿ ಜುಲೈ ನಂತರವೇ ಗಣಿ ಕೆಲಸ ಪ್ರಾರಂಭವಾಗುವುದು ಹೆಚ್ಚು. ಮೇಲಿನ ಮೂರುನಾಲ್ಕಡಿಯ ಮಣ್ಣು ಬರಿ ಮಣ್ಣು. ಅದರ ಕೆಳಗೆ ಹತ್ತರಿಂದ ೧೫ ಅಡಿ ಆಳದ ವರೆಗೂ ಅಗೆದು ಸಾಕಷ್ಟು ಕುಟ್ಟಿ ಮಣ್ಣನ್ನೂ ಕೆಲಸಕ್ಕೆ ಬಾರದ ಕಲ್ಲು ಹರಳುಗಳನ್ನೂ ಸಾಣಿಸಿ ಒಗೆಯಲಾಗುತ್ತದೆ. ಉಳಿದ ಕಲ್ಲು ತುಣುಕುಗಳನ್ನು ಒಂದೆಡೆ ರಾಶಿ ಹಾಕಲಾಗುತ್ತದೆ. ಇದರಲ್ಲೇ ನಿಮ್ಮ ಭಾಗ್ಯ ಹುದುಗಿರುವ ಸಂಭವವಿರುತ್ತದೆ. ಆದರೆ ಅದನ್ನು ಹುಡುಕಿ ತೆಗೆಯುವುದು ಬಣವಿಯಲ್ಲಿ ಸೂಜಿ ಹುಡುಕುವುದಕ್ಕಿಂತ ಸ್ವಲ್ಪ ಮಾತ್ರ ಸುಲಭ ಕಾರ್ಯ. ಈ ಕಲ್ಲು ತುಣುಕುಗಳನ್ನು ಎರಡೆರಡು ಮೂರುಮೂರು ಬಾರಿ ವನೆಯಬೇಕು. ಇದು ಕಷ್ಟ ಅಥವಾ ಬಲು ವೆಚ್ಚದ ಕೆಲಸವಲ್ಲವಿದ್ದರೂ ಮೈಯೆಲ್ಲ ಕಣ್ಣಾಗಿರಬೇಕಾದ ಪ್ರಸಂಗ. ಸ್ವಲ್ಪ ಅಜಾಗರೂಕರಾಗಿದ್ದರೆ ಅಮೂಲ್ಯ ವಜ್ರದ ತುಣುಕು ಕಣ್ಣುತಪ್ಪಿ ಚೆಲ್ಲಿಕೊಡಲಿರುವ ಕಲ್ಲ ರಾಶಿಯಲ್ಲಿ ಸೇರಿ ಬಿಡಬಹುದು.

ವಜ್ರಾನ್ವೇಷಣ ಕಾರ್ಯದಲ್ಲಿ ನಿಮಗೆ ವರ್ಷಗಳ ಯತ್ನದ ನಂತರವೂ ನಿರಾಶೆಯೇ ಕೈವರ್ತಿಸಬಹುದು; ಅಥವಾ ಹಲಗಾಲ ದುಡಿದು ಇನ್ನು ಫಲವಿಲ್ಲ ಎನ್ನುವಾಗ ಒಮ್ಮೆಲೆ ಬೇಸಗೆಯಲ್ಲಿ ಮಿಂಚಿನಂತೆ ಒಂದು ದೊಡ್ಡ ವಜ್ರ ನಿಮ್ಮ ಮುಂದೆ ಮಿಂಚಬಹುದು; ಇಲ್ಲವೆ ನೆಲ ಕೆರೆದಿರೋ ಇಲ್ಲವೋ ಎನ್ನುವುದರೊಳಗೆ ಜಗ್ಗೆಂದು ಭಾಗ್ಯ ನಿಮ್ಮನ್ನು ಎದುರುಗೊಳ್ಳಲೂಬಹುದು.

ಕೆಲ ಪರಿವಾರಗಳು ಪನ್ನಾದಲ್ಲಿ ವರ್ಷಗಟ್ಟಳೆ ವಿಶೇಷ ಯಶ ಕಾಣದೆ ವಜ್ರಾನ್ವೇಷಣೆಯಲ್ಲಿ

ಮಗ್ನವಾಗಿದ್ದುದುಂಟು. ಆದರೆ ರಸೂಲ್ ಮಹಮ್ಮದನೆಂಬ ರೈತನಿಗೆ ೧೯೬೧ ಅಕ್ಟೋಬರ ೧೩ ರಂದು (ಎಂಥ ಅಶುಭ ತಿಥಿ!) ದೊರೆತ ೪೨.೫ ಕೆರೆಟ್ ಭಾರದ ನೀಲಿ—ಶುಭ್ರ, ಹೊಳಪಿನ ವಜ್ರವನ್ನಾತ ಏನೂ ಕಷ್ಟವಿಲ್ಲದೆ ಸಂಪಾದಿಸಿದ್ದ. ವಿಶ್ವಪ್ರಸಿದ್ಧ ಕೋಹಿನೂರ್ ೧೦೬.೬೨೫ ಕೆರೆಟ್ ನದಿತ್ತೆಂದರೆ ಈ ವಜ್ರದ ತುಲನಾತ್ಮಕ ಯೋಗ್ಯತೆ ತಿಳಿದೀತು. ಸಾಮಾನ್ಯವಾಗಿ ಕ್ಯಾರಟ್ಟಿಗೆ ರೂ. ೪೫೦. ಬೆಲೆ ಬಾಳುವ ಉತ್ತಮ ವಜ್ರಗಳಿಗಿಂತಲೂ ಶ್ರೇಷ್ಠ ನೀರಿನ ಈ ವಜ್ರದ ಬೆಲೆ ಮೂರು ಲಕ್ಷ ರೂಪಾಯಿಗಿಂತಲೂ ಹೆಚ್ಚೆಂದು ಭಾವಿಸಲಾಗಿದೆ. ರಸೂಲನಿಗದು ಲೈಸನ್ಸ್ ಪಡೆದು ಒಂದೇ ವಾರದೊಳಗೆ ಲಭಿಸಿತ್ತು.

ವಜ್ರ ಸಂಪಾದಿಸಿದಾತ ಅದನ್ನು ನೆಟ್ಟಗೆ ಮನೆಗೆ ಹೊರುವಂತಿಲ್ಲ. ಅದನ್ನು ಸರಕಾರಿ ಖಜಾನೆಯಲ್ಲಿ ಜಮಾ ಮಾಡಿ ರಶೀದಿ ಪಡೆಯಬೇಕು. ಅನಂತರ ಲಿಲಾವಿನ ದಿನವನ್ನು ಕಾಯಬೇಕು. ಅಗಸ್ಟ್ ಮತ್ತು ಡಿಸೆಂಬರಿನಲ್ಲಿ ಈ ಲಿಲಾವು ನಡೆಯುತ್ತದೆ. ಅದರಲ್ಲಿ ನಿಮ್ಮ ವಜ್ರಕ್ಕೆ ಬಂದ ಬೆಲೆಯಲ್ಲಿ ಶೇಕಡಾ ೨೦ ರಷ್ಟು ಕರವನ್ನು ಕೊಟ್ಟಮೇಲೆ ಉಳಿದದ್ದೆಲ್ಲ ನಿಮಗೇ. ಆಮೇಲೆ ವಜ್ರವನ್ನು ವಜ್ರಪರೀಕ್ಷಕರ ಸೂಚನೆಯಂತೆ ಕೊಯ್ದು ಆಭರಣಗಳಿಗೆ ಬೇಕಾದಂತೆ ಒಪ್ಪ ಹಾಕುವರು.

ಪನ್ನಾದಲ್ಲಿ ವರ್ಷವರ್ಷವೂ ಸಿಗುವ ನೂರಾರು ವಜ್ರಗಳಲ್ಲಿ ಆಭರಣಗಳಿಗೆ ಉಪಯುಕ್ತವಾದವುಗಳಿಗೆ ರೂ. ೫೦೦ ರಿಂದ ಅನೇಕ ಲಕ್ಷಗಳವರೆಗೂ ಬೆಲೆ ಬರಬಹುದು. ಬೆಲೆಯು ಆಕಾರ-ಪ್ರಕಾರ, ಶುದ್ಧತೆ, ಕಲೆಗಳ ಅಭಾವ ಮೊದಲಾದ ಅನೇಕ ಸಂಗತಿಗಳನ್ನು ಅವಲಂಬಿಸಿದೆ. ರಸೂಲನಿಗೆ ಮೊನ್ನೆ ದೊರೆತ ವಜ್ರವು ಭಾರತದಲ್ಲಿ ಅನೇಕ ಶತಮಾನಗಳಿಂದ ಲಭ್ಯವಾದ ಅಮೂಲ್ಯ ವಜ್ರಗಳಲ್ಲಿ ೧೧ ನೇ ಸ್ಥಾನವನ್ನು ಪಡೆದಿದೆ. ಇದಕ್ಕೆ "ವಿಜಯ" ಎಂದು ಹೆಸರಿಡಲಾಗಿದೆ.

ಬೆಲೆಬಾಳುವ ವಜ್ರಗಳು ಆಭರಣಕ್ಕೆ ಉಪಯೋಗಿಸಲ್ಪಡುತ್ತಿದ್ದರೂ ಚಿಕ್ಕವುಗಳೂ ಮಹತ್ವದಲ್ಲಿ ಕಡಿಮೆಯವಲ್ಲ. ಖನಿಜಗಳಲ್ಲೆಲ್ಲ ಅತಿ ಕಠೋರವಾದ ವಜ್ರವು ಕೊರೆಯುವ ಉಪಕರಣಗಳಲ್ಲಿ ಅತಿ ಮಹತ್ವದ ಪಾತ್ರ ವಹಿಸುತ್ತದೆ. ಭೈರಿಗೆಯ ತುದಿಗೆ ವಜ್ರದ ಒಂದು ಸಣ್ಣ ಕಣವನ್ನು ತಗಲಿಸಿದರೂ ಅದು ಉಕ್ಕನ್ನು ಸುಲಭವಾಗಿ ಕೊರೆಯಬಲ್ಲದು. ಉಕ್ಕಿನ ಭೈರಿಗೆ ೨೪೦ ಕಿಲೋಮಿಟರ್, ಟಂಗ್‌ಸ್ಟನ್ ಭೈರಿಗೆ ೧,೬೦೦ ಕಿಲೋಮಿಟರ್ ಲೋಹದಪಟ್ಟಿಯನ್ನು ಕೊರೆದ ಮೇಲೆ ಮೊಂಡಾಗಿ ಹೋಗುವುದಾದರೆ ವಜ್ರಮುಖ ಭೈರಿಗೆ ೬,೦೦೦ ಕಿಲೋಮಿಟರ್ ಪಟ್ಟಿಯನ್ನು ಕೊರೆಯಬಲ್ಲದು. ವಜ್ರಮುಖಿಯಿಂದ ಭಾರಿಭಾರಿ ಬಂಡೆಗಲ್ಲುಗಳನ್ನೂ ಕೊರೆಯಬಹುದಾದ್ದರಿಂದ ನೂತನ ಭಾರತದ ಔದ್ಯೋಗಿಕ ಪ್ರಗತಿಯಲ್ಲಿ ಪನ್ನಾದ ಪಾತ್ರ ಪ್ರಾಮುಖ್ಯವೇ ಆಗಿದೆ. ಅದು ನಮಗೆ ಕೋಟ್ಯಂತರ ಬೆಲೆಯ ವಿದೇಶಿ ವಿನಿಮಯವನ್ನು ಉಳಿಸಬಲ್ಲದು; ಮಹತ್ವದ ಒಂದು ಅವಶ್ಯಕತೆಯ ವಿಷಯದಲ್ಲಿ ನಮ್ಮನ್ನು ವಿದೇಶಗಳ ಅವಲಂಬನೆಯಿಂದ ಅದು ಕಾಪಾಡುತ್ತಲಿದೆ. *

---

ಸಮಯವು ನಮ್ಮನ್ನೆಂದೂ ನಮ್ಮವರಿಂದ ಅಗಲಿಸುವುದಿಲ್ಲ. ಯಾಕೆಂದರೆ ನಾವು ಯಾರನ್ನು ನೆನೆಸಿಕೊಳ್ಳುತ್ತೇವೆಯೊ ಅವರು ನಮ್ಮ ಹತ್ತಿರವೇ ಇರುತ್ತಾರೆ.

ಜೇಮ್ಸ್ ಮೊಡಗೆ ಕ್ಯಾಂಡಲ್

* * *

ಒಬ್ಬ: "ಏನಯ್ಯ, ನಿನಗೊಂದು ಲಕ್ಷ ರೂಪಾಯಿ ರಸ್ತೆಯಲ್ಲಿ ಸಿಕ್ಕರೆ ನೀನೇನು ಮಾಡುವಿ?"

ಇನ್ನೊಬ್ಬ: "ಬಡವನವಿದ್ದರೆ ವಾಪಸ್ ಕೊಡುವೆ."

ಅವರ ವಿಷ ಕೊಲ್ಲದೆನೇ
ನಿಶ್ಚೇಷ್ಟಿತಗೊಳಿಸುತ್ತದೆ!



# ಕಣಜದ ಹುಳ: ಹಾರಾಡುವ ವಿಷಕುಂಭ

ಗಂಗಾಧರ

ಪ್ರತಿಯೊಬ್ಬನೂ ನೋಡಿರಬಹುದಾದ ಕಣಜ ಅಥವಾ ಕಡಜೀರಿಗೆ ಹುಳದ ಸೋಜಿಗದ ಜೀವನಕ್ರಮವನ್ನರಿತವರು ಮಾತ್ರ ಬಲು ವಿರಳ. ಅವುಗಳಲ್ಲಿ ಸುಮಾರು ಹತ್ತು ಸಾವಿರ ಜಾತಿಗಳಿವೆ. ಅವುಗಳ ಉದ್ದಳತೆ ಕೂಡ ೧/೧೦೦ ಅಂಗುಲದಿಂದ ನಾಲ್ಕಂಗುಲದ ವರೆಗೆ ವೈವಿಧ್ಯಪೂರ್ಣವಾಗಿದೆ.

ಬೇಸಗೆಯಲ್ಲಿ ಕಡಜೀರಿಗೆ ಕಡಿದಂತೆ ಎಂದೊಂದು ನಾಣ್ಣುಡಿಯೆ ಇದೆ. ಅದರಿಂದ ಕಡಿಸಿ ಕೊಂಡವರಿಗೇ ಅದರ ರುಚಿ ಗೊತ್ತು. ಅವು ವಿಷದ ಕಾರಖಾನೆಗಳೇ ಆಗಿವೆಯೆಂದರೂ ಸಲ್ಲುವುದು. ಕಡಜೀರಿಗೆಯ ವಿಷಕ್ಕೆ 'ಅಲರ್ಜಿಕ್' ಆಗಿರುವವರಿಗಂತೂ ಅದರ ಒಂದೇ ಒಂದು ಕಡಿತ ಮಾರಕವಾಗಬಲ್ಲದು. ಅವರ ಮುಖ ನೀಲಿಯಾಗಿ ಹೃದಯಸ್ಪಂದ ಸಾವಕಾಶವಾಗಿ ನಿಂತುಹೋಗಬಹುದು. ಹತ್ತಿರ ಡಾಕ್ಟರರಿಲ್ಲದಿದ್ದರೆ ಅದು ಮರಣಾಂತಿಕವಾಗಬಲ್ಲದು.

ಸುದೈವದಿಂದ ಮನುಷ್ಯ ತಾನಾಗಿ ಕಣಜವನ್ನು ಕೆರಳಿಸಿದ ಹೊರತು ಅದು ಅವನನ್ನು ಕಡಿಯುವುದಿಲ್ಲ. ಜೇನ್ನೊಣದಂತೆ ಹುಟ್ಟು ಕಟ್ಟಿಕೊಂಡು ಬಾಳುವ ಕೆಲ ಜಾತಿಯ ಕಣಜಗಳು ಮಾತ್ರ ಹುಚ್ಚೆದ್ದು ನಿಷ್ಕಾರಣವಾಗಿ ಮನುಷ್ಯನ ಮೇಲೇರಿ ಬರುವುದುಂಟು. ಒಟ್ಟಿನ ಮೇಲೆ ಮನುಷ್ಯನಿಗೆ ಪೀಡೆ ಕೊಡುವ ಅನೇಕ ಕೀಟಗಳನ್ನು ನಾಶಮಾಡುವುದರಿಂದ ಕಣಜದ ಹುಳ ಮಾನವನ ಮಿತ್ರನೇ ಎನ್ನಬೇಕು. ಸ್ವತಃ ಅದು ಮಾನವನಿಗೆ ಆಹಾರ ವಿಷಯದಲ್ಲಿ ಸ್ಪರ್ಧಿಯಾಗಿಲ್ಲ.

ಕಡಜೀರಿಗೆಯ ವಿಷದ ಒಂದು ವೈಶಿಷ್ಟ್ಯವೆಂದರೆ ಅದು ನೇರವಾಗಿ ಕೊಲ್ಲುವುದಿಲ್ಲ. ಅದರಿಂದ ಕಡಿಯಲ್ಪಟ್ಟ ಕೀಟಗಳು ನಿಶ್ಚೇಷ್ಟಿತವಾಗಿ ಬಿಡುವುವು. ಅವುಗಳ ಹೃದಯದ ಬಡಿತ ಕೂಡ ನಿಂತುಹೋಗುವುದು. ಇಷ್ಟು ಮಾಡಲು ಕೀಟದ ರಕ್ತದಲ್ಲಿ ಅದರ ೨೦ ಕೋಟಿಯಲ್ಲೊಂದಂಶದಷ್ಟು ವಿಷ ಸೇರಿಕೊಂಡರೂ ಸಾಕು. ವಿಷ ಇಷ್ಟು ಉಗ್ರವಾಗಿದ್ದರೂ ಕಡಜೀರಿಗೆ ಕಡಿದು ಸತ್ತಂತೆಯೆ ಬಿದ್ದ ಕೆಲ ಕೀಟಗಳನ್ನು ವಿಜ್ಞಾನಿಗಳು ಅನೇಕ ತಿಂಗಳುಗಳ ನಂತರ ಪುನಶ್ಚೇತನಗೊಳಿಸಿದ್ದುಂಟು.

ಇತರ ಅನೇಕ ಕೀಟಗಳಲ್ಲಿ ಹೇಗೋ ಹಾಗೆ ಕಣಜದ ಹುಳಗಳಲ್ಲೂ ಗಂಡಿಗಿಂತ ಹೆಣ್ಣೇ ಭಯಂಕರ. ಮತ್ತು ಅದರ ಘೋರ ಸ್ವರೂಪ ಮಾತೃತ್ವದ ಮುಂದೆ ಪ್ರಕಾಶಕ್ಕೆ ಬರುವಷ್ಟು ಚೆನ್ನಾಗಿ ಬೇರಾವಾಗಲೂ ಬರುವುದಿಲ್ಲ. ಪೆಪ್ಸಿಸ್

ಎಂಬ ಜಾತಿಯ ಕಣಜ ನೆಲದಲ್ಲಿ ಬಿಲ ತೋಡಿ ತತ್ತಿಗಳನ್ನಿಡುತ್ತದೆ. ಬೇಸಿಗೆಯ ಸಂಜೆ ಅದು ತನ್ನ ಬಲಿಷ್ಠ ಕಾಲು ಮತ್ತು ದವಡೆಗಳಿಂದ ನೆಲದಲ್ಲಿ ಎಂಟೊಂಭತ್ತಂಗುಲ ಆಳವಾದ ಹೊಂಡ ತೋಡುತ್ತದೆ.

ಅನಂತರ ಜೇಡರ ಹುಳವನ್ನರಸುತ್ತ ಹೊರಡುತ್ತದೆ. ಅದು ಸಿಕ್ಕಿದೊಡನೆ ಅದರ ಮೇಲೆ ಇಳಿಯುತ್ತದೆ. ಜೇಡನನ್ನು ಕಡಿಯಲು ಅತ್ಯಂತ ಅನುಕೂಲ ಮತ್ತು ಅದರ ನರಕ್ಕೆ ವಿಷ ನಾಟುವಂಥ ಸ್ಥಳವನ್ನು ಅರಸುತ್ತ ಜೇಡನ ಮೇಲೆ ಅದು ಸಂಚರಿಸುತ್ತದೆ. ನೊಣ ಮೊದಲಾದ ತನ್ನ ಕೊಳ್ಳೆಗಳನ್ನು ಮಂತ್ರಮೋಹಿತಗೊಳಿಸಿದಂತೆ ಮಾಡಿ ಅವುಗಳನ್ನು ವಿದ್ಯುದ್ವೇಗದಿಂದ ಆಕ್ರಮಿಸಿ ಕೊಲ್ಲುವ ಆ ಜೇಡ ಈ ಕಣಜದ ಹುಳ ತನ್ನ ಮೇಲಿಳಿದಾಗ ತಾನೇ ಮಂತ್ರಮುಗ್ಧವಾದಂತೆ ಅದಕ್ಕೆ ತನ್ನ ದೇಹಪರೀಕ್ಷೆ ಮಾಡಗೊಡುವುದೊಂದು ಆಶ್ಚರ್ಯ. ಕೊನೆಗೆ ತನಗೆ ಬಂದ ವಿಪತ್ತಿನ ಕಲ್ಪನೆ ಬಂದು ಅದು ಹೋರಾಡಲನುವಾದಾಗ ಪರಿಸ್ಥಿತಿ ಕೈಮೀರಿ ಹೋಗಿರುತ್ತದೆ. ಅದೆಷ್ಟೇ ಪ್ರತಿಭಟಿಸಿದರೂ ಆಯಕಟ್ಟಿನ ಸ್ಥಳದಲ್ಲಿ ತನ್ನ ವಿಷ ಕೊಂಡಿಯನ್ನೂರಿ ಅದನ್ನು ಕಣಜ ನಿಶ್ಚೇಷ್ಟಿತಗೊಳಿಸುತ್ತದೆ.

ಕಣಜಗಳು ಬಲು ಚುನಾಯಿಸಿಕೆಯ ಜಂತುಗಳು. ಪೆಪ್ಸಿಸ್ ಕಣಜ ಒಂದು ವಿಶಿಷ್ಟ ಜಾತಿಯ ಜೇಡರ ಹುಳವನ್ನೇ ತನ್ನ ಭಾವಿ ಸಂತಾನದ ಅನ್ನಪ್ರಾಶನ ಸಮಾರಂಭಕ್ಕೆ ಉಪಯೋಗಿಸುತ್ತದೆ. (ಆ ಸಮಾರಂಭದಲ್ಲಿ ತಾಯಿ ಹಾಜರಿರುವುದಿಲ್ಲೆಂಬ ಮಾತು ಬೇರೆ.) ಈ ನಿಶ್ಚೇಷ್ಟಿತಾವಸ್ಥೆಯಲ್ಲಿ ಜೇಡನನ್ನೆಳೆದೊಯ್ದು ಕಡಜೀರಿಗೆ ತಾನು ನೂತನವಾಗಿ ರಚಿಸಿದ ಬಿಲದೊಳಗೆ ತಳ್ಳಿ ಅದರ ಹೊಟ್ಟೆಯ ಮೇಲೆ ತತ್ತಿಗಳನ್ನಿಡುತ್ತದೆ ಮತ್ತು ಬಿಲದ ಮುಖವನ್ನು ಮುಚ್ಚಿಬಿಡುತ್ತದೆ. ಅಲ್ಲಿಗೆ ಅದರ ಮಾತೃತ್ವದ ಹೊಣೆ ಮುಗಿಯಿತು. ಅನಂತರ ಅದು ಇತ್ತ ಮುಖ ಕೂಡ ಹಾಕದು. ಕೆಲ ದಿನಗಳಲ್ಲಿ ಒಳಗೆ ತತ್ತಿ ಒಡೆದು ಕ್ರಿಮಿರೂಪದಲ್ಲಿ ಮರಿ ಕಣಜಗಳು ಹೊರಬರುತ್ತವೆ. ಒಡನೆ ಅವು ಜೇಡನನ್ನು ಹರಿದು ನುಂಗುತ್ತವೆ. ಆ ವರೆಗೂ ಜೇಡ ಬದುಕಿರುತ್ತದಾದ್ದರಿಂದ ಮರಿ ಕಣಜಗಳಿಗೆ ತಾಜಾ ಮಾಂಸವೇ ದೊರೆತಂತಾಗುವುದು.

ಬಗೆಬಗೆಯ ಜೇಡಗಳು ಎದುರಿಗಿದ್ದರೂ ತನಗಿಂತ ಎಷ್ಟೋ ದೊಡ್ಡ ಗಾತ್ರದ ತರಂತುಲಾ ಎಂಬ ಜೇಡನೇ ಪೆಪ್ಸಿಸ್‌ಗೆ ಬೇಕು. ಹುಲ್ಲು ಕಡಜೀರಿಗೆ ಹುಳವೂ ನೂರಾರು ಜಾತಿಯ ಹುಲ್ಲೆಸಳುಗಳನ್ನು ಪರೀಕ್ಷಿಸಿ ತನಗೆ ಬೇಕಾದಂಥದನ್ನೆ ಆರಿಸುತ್ತದೆ. ಕಡಜೀರಿಗೆಗೆ ಅಳೆಯುವ ಕಲೆಯೂ ಗೊತ್ತು. ಪೆಪ್ಸಿಸ್ ಜಾತಿಯದು ತಾನು ತರಲಿರುವ ಜೇಡನ ಗಾತ್ರಕ್ಕೆ ಸರಿಯಾಗಿ ತನ್ನ ಬಿಲದ ಬಾಯನ್ನಿಟ್ಟಿರುತ್ತದೆ. ಹುಲ್ಲು ಕಣಜ ತಾನು ಒಯ್ಯಲಿರುವ ಹುಲ್ಲೆಸಳ ಮೇಲೆ ಅತ್ತಿಂದಿತ್ತ ಇತ್ತಿಂದಿತ್ತ ನಡೆದು ಸರಿಯಾದ ಅಳತೆಗೆ ಅದನ್ನು ಕತ್ತರಿಸಿಕೊಳ್ಳುತ್ತದೆ. ಇದನ್ನೆಲ್ಲ ನೋಡಿ ಕಡಜೀರಿಗೆ ಕೀಟಗಳಲ್ಲೆಲ್ಲ ಬಲು ಬುದ್ಧಿಶಾಲಿಯೆಂದು ಕೆಲ ವಿಜ್ಞಾನಿಗಳಿಗೆ ಭಾವನೆಯಾಗಿದೆ.

ಕಣಜದ ಬುದ್ಧಿಶಕ್ತಿ ಕೇವಲ ಪ್ರವೃತ್ತಿಜನ್ಯವಾದುದಲ್ಲ. ಅದಕ್ಕೆ 'ವಿಚಾರ ಶಕ್ತಿ' ಇದ್ದಂತೆ ಕಾಣುತ್ತದೆ. ನಾರ್ಮನ್ ಕಾರ್ಲೈಲರೆಂಬವರು ಇದಕ್ಕೊಂದು ಉದಾಹರಣೆ ಕೊಡುತ್ತಾರೆ. ಒಂದು ಗಾಜಿನ ಭರಣಿಯಲ್ಲಿ ಒಂದು ಜೇನು ಹುಳವನ್ನಾಗಲಿ ಮತ್ತಾವುದಾದರೂ ಹಾರುವ ಕೀಟವನ್ನಾಗಲಿ ಹಾಕಿ ಅದನ್ನು ತಲೆ ಕೆಳಗಾಗಿ ಹಿಡಿದರೆ ಅದು ಹೊರಗೆ ಹಾರಿ ಹೋಗಲು ಚಡಪಡಿಸಿ ಸಿಕ್ಕಾಬಟ್ಟೆ ಭರಣಿಯ ಬದಿಗಳಿಗೆ ಬಡಿಯತೊಡಗುತ್ತದೆ. ತಾನು ಒಳ ಹೊಕ್ಕ ಭರಣಿಯ ಬಾಯಿ ಈಗ ಕೆಳಮುಖವಾಗಿದೆಯೆಂದೂ ಆ ದಾರಿಯಾಗಿ ಹೊರಗೆ ಹೋಗಬಹುದೆಂದೂ ಅದಕ್ಕೆ ಹೊಳೆಯುವುದೇ ಇಲ್ಲ. ಅದೇ ಒಂದು ಕಡಜೀರಿಗೆಯನ್ನು ಭರಣಿಯೊಳಗೆ ಹಾಕಿ ಅದನ್ನು ಮುಗುಚಿ ಹಿಡಿದಾಗ ಅದು ಮೇಲ್ಭಾಗದಲ್ಲಿ ಹೊರ ಹೋಗಲು ದಾರಿಯಿಲ್ಲೆಂದು ಬಲು ಬೇಗ ಕಂಡು

ಕೊಂಡಿತು. ತಲೆ ಕಳೆದುಕೊಳ್ಳದೆ ಅದು ಸುತ್ತಲೂ ನೋಡಿ ಈಗ ಕೆಳಮುಖವಾಗಿರುವ ಬಾಯಿಯ ಮೂಲಕ ಪಾರಾಗಿ ಹೋಯಿತು.

ಕಣಜದ ಹುಳಕ್ಕೆ ನೆನಪಿನ ಶಕ್ತಿಯೂ ಧಾರಾಳವಾಗಿರಬೇಕು. ಒಣ ಹುಲ್ಲಿನ ಪೊಳ್ಳು ದಂಟಿನೊಳಗೆ ಗೂಡು ಮಾಡಿ ತತ್ತಿಯಿಡುವ ಒಂದು ಜಾತಿಯ ಕಣಜವಿದೆ. ಹುಲ್ಲಿನ ಭಾರಿ ಬಣವೆಯಲ್ಲಿ ಒಂದು ದಂಟನ್ನಾರಿಸಿ ಅದು ತೂತು ಕೊರೆಯುತ್ತದೆ. ತನ್ನ ಭಾವೀ ತತ್ತಿಗಳ ಆಹಾರಕ್ಕಾಗಿ ವಿಶಿಷ್ಟ ಜಾತಿಯ ಜೇಡಗಳನ್ನು ಹಿಡಿತಂದು ಅದು ಸಾವಿರಗಟ್ಟಳೆ ಹುಲ್ಲು ದೇಟುಗಳ ಪೈಕಿ ತಪ್ಪದೇ ತನ್ನ ಗೂಡನ್ನೇ ಸೇರುವುದೆಂದರೆ ಅಗಾಧ ಜ್ಞಾಪಕ ಶಕ್ತಿಯಿಂದಲೇ ಇರಬೇಕಲ್ಲವೆ?

ಕಡಜೀರಿಗೆಗೆ ಬುದ್ಧಿಶಕ್ತಿಯೊಡನೆ ದೇಹದಾರ್ಢ್ಯವೂ ಧಾರಾಳವಾಗಿದೆ. ಸಿಕಾಡಾ ಕಡಜೀರಿಗೆ ತನಗಿಂತ ಎಷ್ಟೋ ಪಟ್ಟು ಭಾರವಾದ ಹೊರೆಯನ್ನು ಹೊತ್ತು ಹಾರಬಲ್ಲದು. ನೆಲದಿಂದಲೇ ಹೀಗೆ ಹಾರಲು ಸಾಧ್ಯವಿಲ್ಲೆಂದು ಅರಿತು ಅದು ಒಂದು ಮರದ ಕಾಂಡದ ಮೇಲೆ ತನ್ನ ಹೊರೆಯನ್ನೆಳೆದೊಯ್ದು ಪ್ಯಾರಾಚ್ಯೂಟಿನೊಡನೆ ಜಿಗಿಯುವವರ ಹಾಗೆ ಧುಮುಕಿ ರೆಕ್ಕೆ ಬಿಡಿಸಿ ಹಾರತೊಡಗುವುದು. ಗಿಡ ಕೊರೆಯುವ ಒಂದು ಜಾತಿಯ ಕಡಜೀರಿಗೆ ಹುಳು ಅತಿ ಗಟ್ಟಿಯಾದ ಮರದ ಕಾಂಡವನ್ನು ಕೊರೆದು ನುಂಗಿ ಪಲ್ಪು ತಯಾರಿಸಿ ಅದನ್ನು ಕಾಗದವಾಗಿ ಮಾರ್ಪಡಿಸಿ ಅದರಿಂದ ಗೂಡು ಕಟ್ಟುತ್ತದೆ.

ಕಡಜೀರಿಗೆ ಹುಳಗಳು ಹೊತ್ತು ಬಂದರೆ ಮಾನವನನ್ನು ಸಾವಿಗಟ್ಟಬಲ್ಲವಾದರೂ ಅವುಗಳನ್ನು ಪ್ರೀತಿಯಿಂದ ಪಳಗಿಸಲು ಸಾಧ್ಯವಿದೆಯೆಂದು ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾಲಯದ ಡಾ. ಜಾರ್ಜ್ ಶೇಫರ್ ತೋರಿಸಿಕೊಟ್ಟಿದ್ದಾರೆ. ಒಂದು ಕಡಜೀರಿಗ ಹುಳವನ್ನವರು ಎಷ್ಟರಮಟ್ಟಿಗೆ ಗೆಳೆಯನನ್ನಾಗಿ ಮಾಡಿಕೊಂಡರೆಂದರೆ ಅವರು ತೋರುಬೆರಳಿಗೆ ಜೇನು ಹಚ್ಚಿಕೊಂಡು ನಿಂತರೆ ಆ ಹುಳ ಅದರ ಮೇಲಿಳಿದು ತಿನ್ನುತ್ತಿತ್ತು. ಮುಂದೆ ಅವರು ಅದನ್ನು ಬಿಡುಗಡೆ ಮಾಡಿದರೆ ಕೆಲ ವಾರಗಳ ನಂತರ ಅದು ಆ ದಾರಿಯಲ್ಲಿ ಬರುತ್ತ ಅವರನ್ನು ಕಂಡ ಕೂಡಲೆ ಗುರುತು ಹಿಡಿಯಿತಲ್ಲದೆ ಅವರ ಅದೇ ಬೆರಳ ಮೇಲಿಳಿದು ಜೇನು ಉಂಟೇ ಎಂದು ಪರೀಕ್ಷಿಸತೊಡಗಿತಂತೆ!

ಕಣಜದ ವಿಷ ಹೇಗೆ ತನ್ನ ಅಸಾಧಾರಣ ಪರಿಣಾಮವನ್ನು ಮಾಡುತ್ತದೆಂಬುದು ಶರೀರ ವಿಜ್ಞಾನಿಗಳಿಗಿನ್ನೂ ಪೂರ್ಣ ತಿಳಿದಿಲ್ಲ. ಒಬ್ಬ ವಿದ್ವಾಂಸರ ಅಭಿಪ್ರಾಯದಲ್ಲಿ ಅದು ಯಾವುದೋ ರೀತಿಯಿಂದ ನರಗಳಿಗೂ ಸ್ನಾಯುಗಳಿಗೂ ಇರುವ ಸಂಬಂಧವನ್ನು ನಿಷ್ಕ್ರಿಯಗೊಳಿಸಿ ಬಿಡುತ್ತದೆ. ಆದ್ದರಿಂದಲೇ ನಿಶ್ಚೇಷ್ಟಾವಸ್ಥೆಯುಂಟಾಗುತ್ತದೆ; ಸಾವು ಕೂಡಲೇ ಬರುವುದಿಲ್ಲ. ಮನುಷ್ಯರಿಗೆ ಅದು ಕಡಿದಾಗಲೂ ಹಾಗೆಯೇ; ಕೆಲವರಿಗೆ ಮಾತ್ರ ಅದು ಭೀಕರ ದುಷ್ಪರಿಣಾಮ ಮಾಡುತ್ತದೆ. ಅವರಾದರೂ ಸಾಯುವುದಿಲ್ಲ. ಆದರೂ ಹೃದಯಸ್ಪಂದನ ಕೂಡ ನಿಂತುಹೋದಂತಾದ ಕಣಜದ ವಿಷಪೀಡಿತರನ್ನು ತನ್ನ ಮುಂದೆ ತಂದಾಗ ಎಂಥ ಡಾಕ್ಟರನೂ ಗಾಬರಿಯಾಗುತ್ತಾನೆ. ಡಾಕ್ಟರರು ಇಂಥ ಪ್ರಸಂಗಗಳಲ್ಲಿ ಆಂಟಿ-ಹಿಸ್ಟಮೈನ್, ಕ್ಯಾಲ್ಸಿಯಂ ಲ್ಯಾಕ್ಟೇಟ್ ಮತ್ತು ಉತ್ತೇಜಕ ಇಂಜಕ್ಶನ್‌ಗಳನ್ನಿತ್ತು ರೋಗಿಯನ್ನು ಚೈತನ್ಯಾವಸ್ಥೆಗೆ ತರುತ್ತಾರೆ. ಆದರೂ ಎರಡನೇ ಬಾರಿ ಕಣಜದ ಹುಳು ಕಡಿದವರ ಅವಸ್ಥೆ ಗಂಭೀರವಾಗುವ ಸಂಭವವಿಲ್ಲದಿಲ್ಲ.

ಪುಣ್ಯಕ್ಕೆ ಹೀಗಾಗುವವರ ಸಂಖ್ಯೆ ತೀರ ಕಡಿಮೆ. *



ಬ್ರಿಟಿಶ್ ಸಾಮ್ರಾಜ್ಯ ನಾಮಶೇಷವಾದರೂ
ಅದರ ಈ ಸಸ್ಯ ಸಾಮ್ರಾಜ್ಯ ಇನ್ನೂ
ಅದ್ವಿತೀಯವಾಗಿದೆ



# ಸಸ್ಯ ಸಾಮ್ರಾಜ್ಯ—ಕ್ಯೂ

ವಿವಿಧ ಮೂಲಗಳಿಂದ

ನೀಲಗಿರಿ ಬೆಟ್ಟದಲ್ಲಿ ಸಿಂಕೋನಾ ಮರ ಬೆಳೆದು ಭಾರತದ ಮಲೇರಿಯಾ ನಿವಾರಣೆಗೆ ನೆರವಾಗಿದ್ದರೆ ಅದಕ್ಕಾಗಿ ಕ್ಯೂ ಉದ್ಯಾನಗಳಿಗೆ ಕೃತಜ್ಞರಾಗಿರಿ. ಮಲಯಾದಲ್ಲಿ ರಬ್ಬರು ಬೆಳೆದು ಆ ದೇಶದ ಆರ್ಥಿಕ ಆಧಾರಸ್ತಂಭವಾಗಿದ್ದರೆ ಅದಕ್ಕೂ ಕ್ಯೂ ಉದ್ಯಾನದ ಉಪಕಾರ ಸ್ಮರಣೆ ಮಾಡಿರಿ. ನಿಮ್ಮ ಕೈತೋಟದಲ್ಲಿ ಈ ಮಳೆಗಾಲದಲ್ಲಿ ಬೆಳೆಯುತ್ತಿರುವ ನಾನಾತರದ ಪುಷ್ಪಗಳಲ್ಲಿ ಕ್ಯೂ ಉದ್ಯಾನದಿಂದ ಮೊಟ್ಟಮೊದಲು ಹಂಚಲ್ಪಟ್ಟವೆ ಹೆಚ್ಚು ಎಂಬುದನ್ನು ನೆನೆದುಕೊಳ್ಳಿರಿ.

ಕ್ಯೂ ಉದ್ಯಾನವೆಂದರೆ ಲಂಡನ್ನಿನ ಹೊರವಲಯದಲ್ಲಿ ಥೇಮ್ಸ್ ನದೀ ತೀರದಲ್ಲಿರುವ ೩೦೦ ಎಕರೆ ವಿಸ್ತಾರವಾದ ಉದ್ಯಾನ. ಅದರ ಅಧಿಕೃತ ಹೆಸರು "ರಾಯಲ್ ಬೊಟ್ಯಾನಿಕಲ್ ಗಾರ್ಡನ್ಸ್" ಎಂದಾದರೂ ಜನ ಅದನ್ನು "ಕ್ಯೂ ಗಾರ್ಡನ್" ಎಂದೇ ಕರೆಯುತ್ತಾರೆ. ಪ್ರತಿವರ್ಷ ಲಂಡನ್ನಿಗೆ ಬರುವ ಲಕ್ಷಾಂತರ ಸಂಚಾರಿಗಳಿಗೆ ಈ ಉ-

ದ್ಯಾನ ನೋಡಲೇ ಬೇಕಾದ ಆಕರ್ಷಣೆಯಾಗಿದೆ. ಲಂಡನ್ ನಿವಾಸಿಗಳಿಗೆ ಪ್ರತಿ ಬೇಸಿಗೆಯ ಆರಂಭದಲ್ಲಿ ನಿಸರ್ಗದ ವರ್ಣವೈವಿಧ್ಯಗಳ ಅದ್ಭುತ ಸಮ್ಮೇಳನವನ್ನು ಇಲ್ಲಿಯ ಪುಷ್ಪೋದ್ಯಾನಗಳು ತೋರುತ್ತವೆ.

ಇನ್ನೂರು ವರ್ಷಗಳ ಹಿಂದೆ ಮೂರನೇ ಜಾರ್ಜನ ತಾಯಿ ಅಗಸ್ಟಾಳು ಲಂಡನ್ ಹೊರ ವಲಯದಲ್ಲಿದ್ದ ತನ್ನ ಆಸ್ತಿಯಿಂದ ಆರ್ಥಿಕ ಮತ್ತು ಸಸ್ಯಶಾಸ್ತ್ರೀಯ ಮಹತ್ವದ ಸಸ್ಯಗಳನ್ನು ಬೆಳೆಸಲೆಂದು ಬೇರ್ಪಡಿಸಿ ಕೊಟ್ಟ ಒಂಭತ್ತೆಕರೆ ಭೂಮಿಯಲ್ಲಿ ಪ್ರಾರಂಭವಾದ ಈ ಉದ್ಯಾನವು ಇಂದು ಜಗತ್ತಿನ ಸಸ್ಯಗಳ ಅತಿ ದೊಡ್ಡ ಸಮ್ಮೇಳನವಾಗಿದೆ. ಈ ಉದ್ಯಾನದ ಪರವಾಗಿ ಸಾಹಸಿಗಳಾದ ಯಾತ್ರಿಕರು ಪ್ರಪಂಚದ ಮೂಲೆ ಮೂಲೆಗಳನ್ನು ಸುತ್ತಿ, ಜೀವನವನ್ನು ಪಣಕ್ಕೊಡ್ಡಿ ಬಗೆಬಗೆಯ ಗಿಡ, ಮರ, ಬಳ್ಳಿಗಳನ್ನಿಲ್ಲಿ ತಂದು ನಡುತ್ತ ಬಂದಿದ್ದಾರೆ. ಇಂದಲ್ಲಿ ೪೫,೦೦೦ ಜಾತಿಯ ಸಸ್ಯಗಳು ಬೆಳೆಸಲ್ಪಡುತ್ತಿವೆ. ಅದರ ವನಸ್ಪತಿ ಸಂಗ್ರಹಾಲಯದಲ್ಲಿ ೬೦,೦೦,೦೦೦ ಜಾತಿಯ ವನಸ್ಪತಿಗಳ ಒಣಗಿದ ಪತ್ರ-ಪುಷ್ಪಗಳು ಸಾವಿರಾರು ಸಂಪುಟಗಳನ್ನು ತುಂಬಿವೆ. ಪ್ರಪಂಚದಲ್ಲಿ ಮತ್ತೆಲ್ಲೂ ಇಷ್ಟು ವಿಧದ ಸಸ್ಯಗಳು ಇಲ್ಲಿ ಒತ್ತಟ್ಟಿಗೆ ಕಾಣಲು ಸಿಗವು.

ಸಸ್ಯ ಶಾಸ್ತ್ರಿಗಳಿಗೆ ಕಾಶಿಯಂತಿರುವ ಈ ಉದ್ಯಾನದಲ್ಲೇ ಪ್ರಪಂಚದ ಅಧಿಕತರ ಸಸ್ಯಗಳ ಜಾತಿನಿರ್ಣಯ ಮತ್ತು ವೈಜ್ಞಾನಿಕ ನಾಮಕರಣವಾಗಿದೆ. ಇದು ಸಸ್ಯ ಶಾಸ್ತ್ರಾಭ್ಯಾಸದಲ್ಲಿ ಅನಿವಾರ್ಯವಾದ ಅವಶ್ಯಾಂಶವಾಗಿದೆ. ಅದಕ್ಕೂ ಮಿಗಿಲಾಗಿ ಇಲ್ಲಿ ಕಲಿಹಾಕಿದ ಸಸ್ಯಗಳ ಬೀಜ, ಸಸಿಗಳು ಏನಿಲ್ಲೆಂದರೂ ಒಂದು ನೂರು ದೇಶಗಳಿಗೆ ಹಂಚಲ್ಪಟ್ಟಿವೆ. ಅಲ್ಲಿ ಅವು ಅನ್ನ ಔಷಧ ನಾರುಗಳ ರೂಪದಲ್ಲಿ ಕೋಟಿಗಟ್ಟಳೆ ರೂಪಾಯಿಯ ಪ್ರಯೋಜನವನ್ನು ನೀಡಿವೆ.

ರಾಜಮಾತೆ ಅಗಸ್ಟಾಳ ಕಾಲದಿಂದ ಇಂದಿನ ವರೆಗೆ ಬ್ರಿಟನ್ನಿನಲ್ಲಾಗಿ ಹೋದ ಶ್ರೇಷ್ಠತಮ ಸಸ್ಯಶಾಸ್ತ್ರಿಗಳಲ್ಲಿ ಕೆಲವರು ಕ್ಯೂ ಉದ್ಯಾನಕ್ಕಾಗಿ ದುಡಿದಿದ್ದಾರೆ. ಕೆಲ ಕಾಲ ಪ್ರಧಾನ ಮಂತ್ರಿಯಾಗಿ ಆಮೇಲೆ ಮೂರನೇ ಜಾರ್ಜನಿಂದ ಹೊರದೂಡಲ್ಪಟ್ಟ ಸಸ್ಯಪ್ರಿಯ ಬ್ಯೂಟನು ಅಗಸ್ಟಾಳಿಗೆ ಈ ಉದ್ಯಾನದ ಕುರಿತು ಅಮೂಲ್ಯ ಸಲಹೆಗಳನ್ನು ಕೊಟ್ಟನು. ಈತ ಕ್ಯೂ ಉದ್ಯಾನಕ್ಕಾಗಿ ಅಪೂರ್ವ ವನಸ್ಪತಿಯೊಂದನ್ನು ತರಲು ಹ್ಯಾಂಪ್‌ಶಾಯರಿನ ಒಂದು ಬೆಟ್ಟ ಹತ್ತುತ್ತಿದ್ದಾಗ ಕಾಲು ಜಾರಿ ಬಿದ್ದು ಸತ್ತನೆಂದು ಹೇಳಲಾಗಿದೆ. ಆದರೆ ದೀರ್ಘಕಾಲ ರಾಯಲ್ ಸೊಸೈಟಿಯ ಅಧ್ಯಕ್ಷನಾಗಿದ್ದ ಶ್ರೀಮಂತ ಸಸ್ಯಶಾಸ್ತ್ರಿ ಸರ್ ಜಾಸೆಫ್ ಬ್ಯಾಂಕ್ಸನೇ ಕ್ಯೂ ಉದ್ಯಾನವನ್ನು ಜಾಗತಿಕ ಸಸ್ಯ ಸಂದೋಹದ ರೂಪಕ್ಕೆ ತರಲು ತಳಹದಿ ಹಾಕಿದಾತ.

ಪ್ರಪ್ರಥಮವಾಗಿ ಪೃಥ್ವೀ ಪ್ರದಕ್ಷಿಣೆ ಮಾಡಿದ ಸಾಗರ ಸಂಚಾರಿ ಕ್ಯಾಪ್ಟನ್ ಕುಕ್ಕನೊಡನೆ ಇದ್ದ ಜಾಸೆಫ್ ಬ್ಯಾಂಕ್ಸನು ಮೂರನೇ ಜಾರ್ಜನನ್ನು ಮನವೊಲಿಸಿ ಎಲ್ಲೆಲ್ಲಿ ಅಪರೂಪ ಮತ್ತು ಉಪಯೋಗಿ ಸಸ್ಯಗಳು ಸಿಗಬಹುದೋ ಅಲ್ಲಿಗೆಲ್ಲ ದೂತರನ್ನಟ್ಟುವ ಯೋಜನೆ ಮಾಡಿದನು. ಅವರ ಸಾಹಸಗಳೂ ಯಶಸ್ಸೂ ಉಲ್ಲೇಖಾರ್ಹವಾಗಿವೆ. ಫ್ರಾನ್ಸಿಸ್ ಮೇಸನ್ ದಕ್ಷಿಣ ಆಫ್ರಿಕ ಮತ್ತು ಪಶ್ಚಿಮ ಇಂಡೀಸ್ ದ್ವೀಪಗಳನ್ನು ಅರಸಿದನು. ಇಂದು ಎಲ್ಲೆಲ್ಲಿಯೂ ಉದ್ಯಾನಗಳನ್ನು ಅಲಂಕರಿಸುವ ಮೋಹಕ ಕೆಂಬಣ್ಣದ ಹೂ 'ಜರೇನಿಯಂ'ನ್ನು ದಕ್ಷಿಣ ಆಫ್ರಿಕದಿಂದ ತಂದಾತ ಇವನೇ. ವಿಲಿಯಂ ಕರ್ ಚೀನಕ್ಕೆ ಹೋಗಿ ಅವನ ಹೆಸರಿಂದಲೇ ಈಗ ಹೆಸರಾದ ಕರಿಯಾ ಜಪೋನಿಕಾ ಮತ್ತು ಹುಲಿ ನೈದಿಲೆ (ಟೈಗರ್ ಲಿಲಿ) ಯನ್ನು ತಂದ. ಮೆನ್ಜಿಸ್ ಆಸ್ಟ್ರೇಲಿಯ, ದಕ್ಷಿಣ ಅಮೇರಿಕ, ಪಶ್ಚಿಮೋತ್ತರ ಅಮೇರಿಕಗಳಲ್ಲಿ ನಾಲ್ಕು ವರ್ಷ ಕಾಲ ಸುತ್ತಿದ. ಜಗತ್ತಿನ ಅತ್ಯಂತ ದೀರ್ಘಾಯು ವೃಕ್ಷಗಳಲ್ಲಿ ಹೆಸರಿಸತಕ್ಕ (ಅದರ ಆಯುಷ್ಯ ಮೂರು ಸಾವಿರ ವರ್ಷಕ್ಕೂ ಹೆಚ್ಚು) ಕೆಂಪು ಸಿಕೋಯಾ ವೃಕ್ಷ

ವನ್ನು ಕಂಡುಹಿಡಿದ ಕೀರ್ತಿ ಇವನಿಗೇ ಸಲ್ಲುತ್ತದೆ.

ಡೇವಿಡ್ ನೆಲ್ಸನ್ನನ ಸಸ್ಯಾನ್ವೇಷಣ ಯಾತ್ರೆ ಮನೋವೇಧಕವಾಗಿದೆ. ಅವನೂ ಕುಕ್ಕನೊಡನೆ ಅವನ ಮೂರನೇ ಮತ್ತು ಕೊನೆಯ ಯಾತ್ರೆಯಲ್ಲಿ ಭಾಗಿಯಾಗಿದ್ದಾತ. ಹವಾಯಿಯಲ್ಲಿ ಕುಕ್ಕನ ಕೊಲೆಯಾದ ಮೇಲೆ ಈತ ಪಾರಾಗಿ ಮರಳಿದ. ಅವನನ್ನು ಬ್ಯಾಂಕ್ಸ್ ಪಶ್ಚಿಮ ಇಂಡೀಸ್‌ನಲ್ಲಿ ನಡುವ ಸಲುವಾಗಿ ದಿವಿಹಲಸಿನ (ಬ್ರೆಡ್ ಫ್ರುಟ್) ಸಸಿಗಳನ್ನು ಸಂಪಾದಿಸಲು ಕಳಿಸಿದ. ಪಶ್ಚಿಮ ಇಂಡೀಸಿನ ಅನ್ನಾಭಾವವನ್ನು ನಿವಾರಿಸಲು ಈ ಮರವನ್ನು ಅಲ್ಲಿ ಹಚ್ಚುವುದು ಅಗತ್ಯವಾಗಿತ್ತು. ಪ್ರಸಿದ್ಧ "ಬೌಂಟಿ" ಹಡಗಿನಲ್ಲಿ ಆತ ಹೊರಟ. ಅದರ ಕಲಾಸಿಗಳು ಸಾಗರ ಮಧ್ಯದಲ್ಲಿ ದಂಗೆಯೆದ್ದು ಕಪ್ತಾನನನ್ನೂ ಅವನಿಗೆ ವಿಧೇಯರಾಗಿದ್ದವರನ್ನೂ ಒಂದು ದೋಣಿಯಲ್ಲಿ ಹಾಕಿ ತೇಲಬಿಟ್ಟಾಗ ನೆಲ್ಸನ್‌ಗೂ ಅದೇ ಗತಿಯಾಯಿತು. ಈ ದುರ್ಭಾಗ್ಯದ ಫಲವಾಗಿ ಆತ ತನ್ನ ಕಾರ್ಯದಲ್ಲಿ ವಿಫಲನಾಗಿ ಪ್ರಾಣ ಬಿಡಬೇಕಾಯಿತು. ಆದರೆ ಬ್ಯಾಂಕ್ಸ್ ಎದೆಗುಂದದೆ ಇನ್ನೊಬ್ಬ ಸಸ್ಯಾನ್ವೇಷಕ-ಕ್ರಿಸ್ಟೊಫರ್ ಸ್ಮಿತ್‌ನನ್ನು ಕಳಿಸಿ ಪಶ್ಚಿಮ ಇಂಡೀಸ್‌ನಲ್ಲಿ ದಿವಿಹಲಸಿನ ಸಸಿಯನ್ನು ನಡಿಸಿಯೇ ಬಿಟ್ಟ.

ಬ್ರಿಟಿಶ್ ಸಾಮ್ರಾಜ್ಯದ ವಿವಿಧ ದೇಶಗಳ ನೆಲ ನೀರುಗಾಳಿಗಳಿಗೆ ಹೊಂದಿಕೆಯಾಗುವ ಆರ್ಥಿಕ ಮಹತ್ವದ ಸಸ್ಯಗಳನ್ನು ಕ್ಯೂನಲ್ಲಿ ಪರೀಕ್ಷಿಸಿ ಆಯಾ ದೇಶಗಳಿಗೆ ಕಳಿಸುವುದು ಬ್ಯಾಂಕ್ಸ್‌ನ ಕಲ್ಪನೆಯೇ ಆಗಿತ್ತು. ಇದು ಇಂದಿಗೂ ಕ್ಯೂ ಉದ್ಯಾನದ ಮಹತ್ವದ ಕೆಲಸವಾಗಿದೆ. ಪಶ್ಚಿಮ ಆಫ್ರಿಕದ ಕೋಕೊ ಬೆಳೆಗೆ ಹೆಚ್ಚು ಅನುಕೂಲವಾದ ಜಾತಿಯ ಬೀಜಗಳನ್ನು ಹುಡುಕಿ ತೆಗೆದು ಕಳಿಸಿದ್ದು ಕ್ಯೂವೇ. ಅನೇಕ ಜಾತಿಯ ಒಳ್ಳೆಯ ತಳಿಗಳನ್ನು ಸಂಗ್ರಹಿಸಿ ಪಶ್ಚಿಮ ಇಂಡೀಸ್‌ನಲ್ಲಿ ಪ್ರಯೋಗ ಮಾಡಿ ಹೊಸ ಮತ್ತು ಲಾಭಕರ ಬಾಳೆ ಗಡ್ಡೆಗಳನ್ನು ಭಾರತಕ್ಕೂ ಪಶ್ಚಿಮ ಆಫ್ರಿಕಕ್ಕೂ ಕಳಿಸುವ ಏರ್ಪಾಡು ಮಾಡಿದ್ದೂ ಕ್ಯೂವೇ.

ದೇಶದೇಶಗಳ ನಡುವೆ ಈ ಬಗೆಯ ಸಸ್ಯ ವಿನಿಮಯ ಯಶಸ್ವಿಯಾಗಬೇಕಾದರೆ ತರಬೇತಾದ ಜನ ಬೇಕು. ಇದಕ್ಕಾಗಿ ಪ್ರತಿ ವರ್ಷ ಇಪ್ಪತ್ತು ವಿದ್ಯಾರ್ಥಿ ತೋಟಗಾರರನ್ನು ವಿವಿಧ ದೇಶಗಳಿಂದ ಸ್ವೀಕರಿಸಿ ತರಬೇತುಗೊಳಿಸುತ್ತದೆ. ಯಾವ ದೇಶದ ವಿದ್ಯಾರ್ಥಿಯೇ ಆದರೂ ತನ್ನ ನಾಡಿನ ಗಿಡ-ಮರಗಳ ಬಗ್ಗೆ ತನ್ನ ನಾಡಿನಲ್ಲಿ ಪಡೆಯಬಹುದಾದ್ದಕ್ಕಿಂತ ಹೆಚ್ಚು ಪರಿಜ್ಞಾನವನ್ನು ಕ್ಯೂನಲ್ಲಿ ಪಡೆಯಬಲ್ಲನೆಂಬಷ್ಟು ಸಮರ್ಥವಾಗಿದೆ ಅಲ್ಲಿನ ತರಬೇತಿ ವ್ಯವಸ್ಥೆ.

ಕ್ಯೂ ಉದ್ಯಾನದ ಒಂದು ಮಹತ್ವದ ಅಂಗ ಅದರ ಭಾರಿ 'ಗ್ರೀನ್ ಹೌಸ್' ಗಳು. ಬ್ಯಾಂಕ್ಸನು ಕ್ಯೂ ಉದ್ಯಾನದ ನಿರ್ದೇಶಕತ್ವವನ್ನು ವಹಿಸಿಕೊಂಡಾಗಲೇ ಇವು ಇದ್ದವು. ಗಾಜಿನ ಛತ್ತುಳ್ಳ ಈ ಬೆಚ್ಚನ್ನ 'ಮನೆ'ಗಳಲ್ಲಿ ಇಂಗ್ಲಂಡಿನ ಹವೆಯಲ್ಲಿಯೂ ಕಿತ್ತಳೆ ಮತ್ತು ಇತರ ಆಮ್ಲ ಫಲಗಳನ್ನು ಬೆಳೆಸಲಾಗುತ್ತಿತ್ತು. ಉಷ್ಣ ವಲಯದ ಹವಾಮಾನವನ್ನು ಅನುಕರಿಸುವಂತೆ ರಚಿಸಲಾದ ಈ 'ಮನೆ' ಗಳು ಉಷ್ಣ ವಲಯದ ಸಸ್ಯಗಳನ್ನು ಬೆಳೆಸಲು ಆದರ್ಶವಾಗಿದ್ದವು. 'ಮಹಾ ಸಿಗಡಿ' ಎಂಬ ಹೆಸರು ಪಡೆದ ಒಂದು ಗಾಜಿನ ಮನೆಯು ೧೧೪ ಅಡಿ ಉದ್ದವಾಗಿತ್ತು. ೧೮೪೧ ರಲ್ಲಿ ನಿರ್ದೇಶಕನಾಗಿ ಅಧಿಕಾರವಹಿಸಿಕೊಂಡ ಸರ್ ಜಾಸೆಫ್ ಹೂಕರ್ ೧೫ ಎಕರೆಯಷ್ಟಿದ್ದ ಕ್ಯೂ ಉದ್ಯಾನವನ್ನು ಇಂದಿನ ೩೦೦ ಎಕರೆ ಗಾತ್ರಕ್ಕೆ ಬೆಳೆಸಿದನಲ್ಲದೆ ಪ್ರಚಂಡ 'ಗ್ರೀನ್ ಹೌಸ್'ಗಳನ್ನು ನಿರ್ಮಿಸಿದನು. ಅವನು ಯೋಜಿಸಿದ, 'ಪಾಂ ಹೌಸ್' ಎಂದು ಪ್ರಸಿದ್ಧವಾಗಿರುವ, ಗಾಜು ಉಕ್ಕುಗಳಿಂದ ನಿರ್ಮಿತವಾದ, ಭಾರಿ 'ಗ್ರೀನ್ ಹೌಸ್' ಉಷ್ಣ ವಲಯದ ಹವಾಮಾನವನ್ನು ಅನುಕರಿಸುತ್ತದೆ. ಸಮಶೀತೋಷ್ಣ ವಲಯದ ಹವಾಮಾನವನ್ನು ಅನುಕರಿಸುವ 'ಗ್ರೀನ್ ಹೌಸ'ನ್ನೂ ಅವನೇ ಕಟ್ಟಿಸಿದನು. ಇಂದು ಇಂಥದೇ ಇನ್ನೊಂದು 'ಗ್ರೀನ್ ಹೌಸ್'

'ಆಸ್ಟ್ರೇಲಿಯನ್ ಹೌಸ್' ಎಂಬ ಹೆಸರಿಂದ ಕ್ಯೂ ನಲ್ಲಿ ವಿರಾಜಿಸುತ್ತಿದೆ.

ಈ ಗ್ರೀನ್ ಹೌಸ್‌ಗಳಲ್ಲಿ ನಾನಾ ದೇಶಗಳ ನಾನಾ ಋತುಗಳ ಯಾತ್ರೆಯನ್ನು ಕಾಣಬಹುದು. 'ಸಮಶೀತೋಷ್ಣ ಗೃಹ'ದಲ್ಲಿ ವರ್ಷಾರಂಭದಲ್ಲೇ ಪುಷ್ಪಿತವಾದ ತರುಗುಲ್ಮಲತೆಗಳು ಕಾಳಿದಾಸ ಹೇಳಿದ ಅಕಾಲ ವಸಂತದ ಭ್ರಮೆಯುಂಟು ಮಾಡುವವು. ಉಷ್ಣ ಗೃಹಗಳಲ್ಲಿರುವ ಕೆರೆಗಳಲ್ಲಿ ಮನೋಹರವಾದ ಕೆಂದಾವರೆಗಳೂ ಅವುಗಳ ಮಯಣಬಣ್ಣದ ಎಲೆಗಳೂ ಶೋಭಿಸುತ್ತವೆ. ಪ್ರತಿ ವರ್ಷ ಜಗತ್ತಿನಲ್ಲೇ ಅತಿ ದೊಡ್ಡ ಜಲ ಸಸ್ಯವಾದ ವಿಕ್ಟೋರಿಯಾ ಅಮೆಜೋನಿಯಾ ವನ್ನು ಇಲ್ಲಿನ ಕೆರೆಗಳಲ್ಲಿ ಬೆಳೆಸಲಾಗುತ್ತದೆ. ಇದರ ಎಲೆಗಳನ್ನು ಅಂಗುಲ, ಅಡಿಗಳಲ್ಲಲ್ಲ, ಗಜಗಳಲ್ಲಿ ಅಳೆಯಬೇಕಾಗುತ್ತದೆ!

ವಿಶ್ವದ ವಿವಿಧ ಭಾಗಗಳಿಂದ ತಂದ ಸಸ್ಯಗಳ ಅಗೆಗಳನ್ನು ದೇಶ-ವಿದೇಶಗಳಿಗೆ ಸಾಗಿಸುವುದ ಕ್ಕಾಗಿ ಕ್ಯೂ ಉದ್ಯಾನ ಸಂಚಾರಿ ಗ್ರೀನ್ ಹೌಸು ಗಳನ್ನು ಉಪಯೋಗಿಸುತ್ತದೆ. ಕಳೆದ ಶತಮಾ ನದ ಪೂರ್ವಾರ್ಧದಲ್ಲಿ ವಾರ್ಡ್ ಎಂಬ ವೈದ್ಯ-ಕೀಯ ವಿದ್ಯಾರ್ಥಿ ಆಕಸ್ಮಿಕವಾಗಿ ಕಂಡುಹಿಡಿದ ಈ ಪುಟ್ಟ ಗಾಜಿನ ಮನೆಗಳಲ್ಲಿ ಅಗೆಗಳನ್ನು ತಿಂಗಳುಗಟ್ಟಳೆ ಜೀವಂತವಾಗಿಡಬಹುದು. ಸಸಿ ಗಳನ್ನಿಟ್ಟ ಪಾತ್ರೆಗೆ ಗಪ್ಪಾಗಿ ಮುಚ್ಚಲು ಬರು ವಂತೆ ರಚಿಸಿದ ಈ ಸಂದುಕವು ಒಳಗಿನ ತೇವ ಹೊರಗೆ ಹೋಗದಂತೆ ತಡೆಯುವುದರಿಂದ ಒಳ ಗಿನ ಅಗೆ ಒಣಗುವಂತಿಲ್ಲ. ಈ ಸಂದುಕಗಳಲ್ಲಿ ಇಂದು ಪ್ರತಿ ದಿನವೆಂಬಂತೆ ಚಿಕ್ಕ ಸಸಿಗಳನ್ನಷ್ಟೇ ಅಲ್ಲ, ಚಿಕ್ಕ ಮರಗಳನ್ನು ಕೂಡ ಹಾಕಿ ದೇಶ ದೇಶಾಂತರಗಳಿಗೆ ಹಡಗುಗಳಲ್ಲಿ ಸಾಗಿಸಲಾಗು ತ್ತದೆ.

ಪೆರುವಿನಲ್ಲಿ ಮಾತ್ರ ಇದ್ದ ಸಿಂಕೋನಾವನ್ನು ಕ್ಯೂ ತಜ್ಞರ ಸಹಾಯ ದಿಂದ ಸಿಂಹಳ ಭಾರತ ಗಳಲ್ಲಿ ಬೆಳಸಿ ಲಾಭ ಗಳಿಸು ವುದಲ್ಲದೆ ಅಗ್ಗದಲ್ಲಿ ಕ್ವಿನೈನ್ ತಯಾರಿಸಲು ಸಾಧ್ಯವಾ ಯಿತು. ಚೀನದಲ್ಲಿ ಬೆಳೆಯು ತ್ತಿದ್ದ ಚಹಾ ಗಿಡವನ್ನು ಕ್ಯೂ ತಜ್ಞರು ಭಾರತದ ಅಸಾಂ ನಲ್ಲಿ ಬೆಳಸಲು ಸಾಧ್ಯವೆಂದು ಸೂಚಿಸಿದ್ದರಿಂದಲೇ ಭಾರತ ದಲ್ಲಿ ಇಂದು ಸಮೃದ್ಧ ವಿದೇಶ ವಿನಿಮಯ ಗಳಿಸುವ ಚಹಾ ತೋಟಗಳು ತಲೆಯೆತ್ತಿದವು.




ಆದರೆ ಕ್ಯೂ ಉದ್ಯಾನದ ಎಲ್ಲಕ್ಕೂ ಮಹಾ ಸಾಧನೆ ಯೆಂದರೆ ರಬ್ಬರ್ ಗಿಡದ ಪ್ರಸಾರ. ಇದಕ್ಕೆ ಭಾರತವ ನ್ನೊಳಗೊಂಡು ಅನೇಕ ದೇಶ ಗಳು ವಿಲಿಯಂ ಹೂಕರನ

ಅನಂತರ ಕ್ಯೂ ನಿರ್ದೇಶಕನಾದ ಸರ್ ಜಾಸೆಫ್ ಹೂಕರನಿಗೆ ಋಣಿಯಾಗಿರಬೇಕು. ತನ್ನ ಕಾಲದ ಶ್ರೇಷ್ಠತಮ ಸಸ್ಯಶಾಸ್ತ್ರಿಯಾದ ಈತನು ಭಾರತದ ಹಿಮಾಲಯ ಪ್ರದೇಶದ ದುರ್ಗಮ ಭಾಗಗಳಲ್ಲೆಲ್ಲ ಅಲೆದವನು. ಸಿಕ್ಕಿಮದಲ್ಲಿ ಬೆಳೆಯುವ ಅತ್ಯಂತ ಮನೋರಮವಾದ ರೆಡೋಡೆಂಡ್ರಾನ್ ಪುಷ್ಪ ಸಸ್ಯವನ್ನು ಪ್ರಪಂಚವೆಲ್ಲ ಪಸರಿಸುವಂತೆ ಮಾಡಿದವನು ಆತನೆ. ರಬ್ಬರಿಗಿರುವ ಉಜ್ವಲ ಭವಿಷ್ಯವನ್ನು ಆತ ಊಹಿಸಿದ್ದನು. ಆಗ ರಬ್ಬರ್ ಮರ ಬ್ರೇಜಿಲಿನ ಗುತ್ತಿಗೆಯಾಗಿತ್ತು. ಆ ಗುತ್ತಿಗೆಯನ್ನು ಆ ದೇಶವು ಅತ್ಯಂತ ಈರ್ಷೆಯಿಂದ ಕಾಪಾಡಿಕೊಳ್ಳುತ್ತಿತ್ತು. ಜಾಸೆಫ್ ಹೂಕರ್ ರಬ್ಬರಿನ ಪ್ರತಿ ಸಾವಿರ ಬೀಜಗಳಿಗೆ ೧೦ ಪೌಂಡು ಕೊಡುವುದಾಗಿ ಸಾರಿದನು. ಬ್ರೇಜಿಲ್ ಸರಕಾರ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಪರೀಕ್ಷಿಸುತ್ತಿದ್ದರೂ ಸಾಹಸಿಗಳು ಅದರ ಕಣ್ಣು ತಪ್ಪಿಸಿ ಸಾವಿರಗಟ್ಟಳೆ ಬೀಜಗಳನ್ನು ತಂದರು. ೧೮೭೫ ರಲ್ಲಿ ಜಾಸೆಫ್ ಹೂಕರ್ ಅದನ್ನು ತನ್ನ ಉಷ್ಣ ಗೃಹಗಳಲ್ಲಿ ಬಿತ್ತಿದನು. ಹೆಚ್ಚಿನ ಬೀಜಗಳು ಮೊಳೆಯಲೇ ಇಲ್ಲ. ಆದರೆ ಮೊಳೆತವುಗಳು ಸಾಕಾದವು.

ಭಾರತದ ಕೆಲ ಪ್ರದೇಶ, ಸಿಂಹಳ ಮತ್ತು ಮಲಯ ರಬ್ಬರು ಬೆಳೆಯಲು ಯೋಗ್ಯವೆಂದು ನಿರ್ಧರಿಸಿ ಹೂಕರ್ ಆಯಾ ಸರಕಾರಗಳಿಗೆ ಸೂಚನೆ ಕೊಟ್ಟ. ಭಾರತ ಅದನ್ನು ಅಲಕ್ಷಿಸಿ ಒಂದು ಅಪೂರ್ವ ಅವಕಾಶವನ್ನು ಕಳೆದುಕೊಂಡಿತು. ಮಲಯವು ಸೂಚನೆಯನ್ನು ಸ್ವೀಕರಿಸಿತು. ಅನಂತರ ಬೈಸಿಕಲ್, ಆ ಬಳಿಕ ಮೋಟಾರ್ ಉದ್ಯಮಗಳು ಹುಟ್ಟಿ ಅಗಾಧವಾಗಿ ಬೆಳೆದವು. ರಬ್ಬರಿಗೆ ಬೇಡಿಕೆ ಬಂತು. ಅಂದು ಕ್ಯೂ ನಿಂದ ತಂದು ನಟ್ಟ ೨,೦೦೦ ರಬ್ಬರ್ ಸಸಿಗಳಿಂದ ಬೆಳೆದುಬಂದ ಮಲಯದ ರಬ್ಬರ್ ತೋಟಗಳು ವರ್ಷಕ್ಕೆ ೧೫ ಕೋಟಿ ರೂಪಾಯಿಗಿಂತಲೂ ಹೆಚ್ಚು ಆದಾಯವನ್ನು ಮಲಯಕ್ಕೆ ಕೊಟ್ಟವು ಎಷ್ಟೋ ದಶಕಗಳ ನಂತರ ಭಾರತವೂ ಕೇರಳದಲ್ಲಿ ರಬ್ಬರ್ ಬೆಳೆಯುವ ಯತ್ನ ಕೈಕೊಂಡಿತಾದರೂ ಕಳೆದು ಹೋದ ಅವಕಾಶ ಅದಕ್ಕೆ ಮರಳಿ ದೊರೆಯಲಿಲ್ಲ.

ಸಸ್ಯ ಶಾಸ್ತ್ರಿಗಳಿಗೆ ಕ್ಯೂ ಉದ್ಯಾನವೊಂದು ಸರಸ್ವತೀ ಮಂದಿರವಾಗಿದೆ. ಅಲ್ಲಿರುವ ಸಸ್ಯಶಾಸ್ತ್ರೀಯ ಪುಸ್ತಕಾಲಯದಲ್ಲಿ ೫೦,೦೦೦ ಗ್ರಂಥಗಳಿವೆ. ಜಗತ್ತಿನ ಮೂಲೆಮೂಲೆಗಳಿಂದ ಸಸ್ಯಶಾಸ್ತ್ರದ ಸಮಸ್ಯೆಗಳ ಬಗ್ಗೆ, ಯಾವುದೊಂದು ಅಪೂರ್ವ ಎಲೆ ಬೀಜ ಕಟ್ಟಿಗೆ ತುಣುಕಿನ ರಹಸ್ಯ ವಿಶ್ಲೇಷಣದ ಬಗ್ಗೆ, ಬರುವ ಪ್ರಶ್ನೆಗಳಿಗೆ ಇಲ್ಲಿ ಉತ್ತರ ಕಂಡುಹಿಡಿಯಲಾಗುತ್ತಿದೆ. ಅದರ ಪ್ರಯೋಗಶಾಲೆಗಳಲ್ಲಿ ಖೂನಿ, ದರೋಡೆ ಪ್ರಕರಣಗಳಿಗೆ ಸಂಬಂಧಿಸಿದ ಕಗ್ಗಂಟುಗಳನ್ನೂ ಬಿಡಿಸಲಾಗುತ್ತಿದೆ. ಪ್ರಕರಣಗಳಿಗೆ ಸಂಬಂಧಪಟ್ಟ ಸೂಕ್ಷ್ಮ ಸಸ್ಯಜನ್ಯ ಪದಾರ್ಥಗಳ ಕಣಗಳನ್ನು ಗುರುತಿಸುವ ಮೂಲಕ ಈ ಕಾರ್ಯ ಮಾಡಲಾಗುತ್ತದೆ. *



ನಿತ್ಯದ ಬಟ್ಟೆಗಳು

# ಸನ್‌ಲೈಟ್‌ನಿಂದ

## ಎಷ್ಟು ಬೆಳ್ಳಗೆ! ಎಷ್ಟು ಉಜ್ಜ್ವಲ!




ಸುಂದರ ಮತ್ತು ನಿರ್ಮಲ! ಬೆಳ್ಳಗೆ ಮತ್ತು ಉಜ್ಜ್ವಲ!
ಇದೀಗ ಸನ್‌ಲೈಟ್ ಸೋಪಿನ ಪ್ರಭಾವ! ನಿಮ್ಮ ಬಟ್ಟೆಗಳೆಲ್ಲವನ್ನೂ
ಸನ್‌ಲೈಟ್‌ನಿಂದ ಮನೆಯಲ್ಲಿಯೇ ಒಗೆಯಿರಿ.

**ಸನ್‌ಲೈಟ್—ಉತ್ಕೃಷ್ಟ ನೊರೆಯ ಶುದ್ಧ ಸೋಪು!**

S.32 A-X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

ತೆಲುಗಿನ
ಕಥಾ ಸಮ್ರಾಟನ
ಒಂದು ಕಥೆ

# ಏನು ಸಂಬಂಧ




ಮೂಲ :
ವಿಶ್ವನಾಥ ಸತ್ಯನಾರಾಯಣ

ಕನ್ನಡಕ್ಕೆ:
ವೀರಭದ್ರ

ಆಗ ನನಗೆ ಹದಿನಾರು ವರ್ಷಗಳೋ, ಹದಿನೈದು ವರ್ಷಗಳೋ ನನಗೀಗ ಸರಿಯಾಗಿ ಜ್ಞಾಪಕವಿಲ್ಲ. ಯಾರೋ ಬಂಧುಗಳ ಮದುವೆಗೆಂದು ಆ ಊರಿಗೆ ಹೋಗಿದ್ದೆವು. ನಾವು ಗಂಡಿನ ಕಡೆಯವರು. ಒಂದು ಮನೆಯನ್ನು ಬಿಡದಿಗೆ ಕೊಟ್ಟರು. ಆ ಮನೆಯವರು ತಮ್ಮ ಮನೆಯಲ್ಲಿ ಸ್ವಲ್ಪ ಭಾಗವನ್ನು ತಮಗಾಗಿ ಉಳಿಸಿಕೊಂಡು, ಉಳಿದ ಭಾಗವನ್ನು ಬಿಡದಿಗೆ ಬಿಟ್ಟುಕೊಟ್ಟಿದ್ದರು. ಆದರೆ ಅದು ಹಳ್ಳಿ. ಐದು ದಿನಗಳ ಮದುವೆ. ಮದುವೆ ಮನೆಗೆ ಆ ಮನೆಯವರು ಕೂಡ ಎರಡು ಹೊತ್ತು ಊಟಕ್ಕೆ. ಒಂದೆರಡು ದಿನಗಳಾಗುತ್ತಲೇ ಅವರೂ ಇವರೂ ಕಲೆತು ಸಲಿಗೆಯಿಂದಿರತೊಡಗಿದರು.

ಮೂರನೆಯ ದಿನ ಮಧ್ಯಾಹ್ನವಿರಬೇಕು, ನಾನು ಆ ಮನೆಯ ಪಡಸಾಲೆಯಲ್ಲಿ ಮಲಗಿದ್ದೆ. ಆ ಮನೆಯ ಯಜಮಾನ ಸತ್ತುಹೋಗಿದ್ದ. ಆತನ ಹೆಂಡತಿ, ಮಗಳು ಆ ಮನೆಯಲ್ಲಿದ್ದರು. ಗಂಡುಹುಡುಗರಿದ್ದರೂ ಅವರು ವಿದ್ಯಾಭ್ಯಾಸಕ್ಕೆಂದು ಹೋಗಿದ್ದರೋ ಏನೋ, ಊರಲ್ಲಿರಲಿಲ್ಲ. ಈ ಎರಡು ದಿನಗಳಿಂದ ಹಿಡಿದು ನಾನಾರೋ ಅವರಿಗೆ ಗೊತ್ತುಂಟು. ನಾನು ಓದಿಕೊಳ್ಳುತ್ತಿರುವೆನೆಂತಲೂ ನಮ್ಮದು ಹೊಟ್ಟೆಗೆ ಬಟ್ಟೆಗೆ ತಕ್ಕಮಟ್ಟಿಗಿರುವ ಸಂಸಾರವೆಂತಲೂ ಆಕೆಗೆ ಗೊತ್ತಾಯಿತು. ತೆಲುಗು ಸಾಹಿತ್ಯದ ಪರಿಚಯ ಮಾಡಿಕೊಳ್ಳುವುದು, ದನಿಯೆತ್ತಿ ಪದ್ಯವನ್ನು ಸುಶ್ರಾವ್ಯವಾಗಿ ಓದುವುದು ನನಗೆ ಆ ಕಾಲಕ್ಕಾಗಲೇ ಇತ್ತು. ಸಾಮಾನ್ಯವಾಗಿ ನಮ್ಮ ಮನೆಗಳಲ್ಲಿ ಹೆಂಗಸರು—ತಮ್ಮ ಗಂಡಂದಿರು ಗತಿಸಿದ ಬಳಿಕ ಭಾರತವೋ, ಭಾಗವತವೋ, ಭಕ್ತ ವಿಜಯವೋ, ಅಂಥದೇ ಯಾವುದಾದರೂ ಗ್ರಂಥ ಪಠನದಲ್ಲಿ ಕಾಲ ಕಳೆಯುವುದು ಸಹಜವೇ. ಅವಳೂ ಅಂಥವಳೇ. ಆದ್ದರಿಂದ ನಾನೂ ತೆಲುಗು

ಪುಸ್ತಕಗಳೊಂದಿಗೆ ಪರಿಚಯವುಳ್ಳವನೆಂದು ತಿಳಿದು ನಾನೆಂದರೆ ಆ ಎರಡು ದಿನಗಳಲ್ಲಿ ಒಂದಿಷ್ಟು ಅಭಿಮಾನದಿಂದಿರತೊಡಗಿದಳು.

ಆ ಕಾಲಕ್ಕೆ ಆಕೆಯ ಮಗಳು ಹತ್ತು ವರುಷದ ಹುಡುಗಿ. ಉದ್ದನೆಯ ಕಾಲುಗಳು. 'ಬೇರ್ಪಡಿಸಿ ದೀಪಗಳನ್ನಿರಿಸಬಹುದು.' ತಾಯಿ ತುಂಬ ಭಾರೀ ಮನುಷ್ಯಳು. ಆ ಹುಡುಗಿ ಕೂಡ ದೊಡ್ಡವಳಾದರೆ ತಾಯಿಯಷ್ಟಾಗುವಂತಿದೆ. ಧಷ್ಟಪುಷ್ಟಳಾದ ಹುಡುಗಿ. ಕೈಗಳು ದುಂಡಗೆ ಗುತ್ತವಾಗಿವೆ. ಆ ಮುಖದಲ್ಲಿನ ಅಂದವನ್ನು ಹೇಳಲಸದಳ. ದೊಡ್ಡ ಕಣ್ಣುಗಳು. ಒತ್ತೊತ್ತಾಗಿ ಬೆಳೆದ ಕಪ್ಪನೆಯ ಹುಬ್ಬುಗಳು. ಭಗವಂತ— ಸೌಂದರ್ಯವೆಂದರೆ ಹೀಗಿರಬೇಕು— ಎಂದು ಮಾಡಿ ತೋರಿಸಿದಂತಿತ್ತು ಅವಳ ಮುಖ. ಆ ಹುಡುಗಿ ನಗುತ್ತಿದ್ದರೆ—ಈಗ ನೆನೆಸಿಕೊಂಡರೂ- ನಾನೆಷ್ಟು ಸಂತಸಪಟ್ಟಿದ್ದೆನೋ ಅನುಭವವಾಗುತ್ತದೆ. ಆದರೆ ಆ ಹುಡುಗಿಯನ್ನು ನೋಡಿ ನಾನೆಷ್ಟು ಸಂತೋಷಪಟ್ಟೆನೋ ಮನಸ್ಸಿನಲ್ಲಿ ಅಷ್ಟೇ ದಿಗಿಲೂ ಪಟ್ಟೆ. ನಮ್ಮ ತಂದೆಯವರು ನನ್ನ ಹತ್ತನೇ ವಯಸ್ಸಿನಲ್ಲೇ ನನಗೆ ಮದುವೆ ಮಾಡಿದ್ದರು.

ಆ ಹುಡುಗಿ ಎಷ್ಟು ಸುಂದರಿಯೋ ಅಷ್ಟೇ ತುಂಟಿ. ಆ ಹುಡುಗಿ ನನ್ನೊಂದಿಗೆ ಸರಾಗದಿಂದಿರತೊಡಗಿದಳು. ಆಗ ಇನ್ನೂ ಚಿಕ್ಕತನ; ವಿವೃತವಲ್ಲದ ಜೀವನದಲ್ಲಿರುವ ಮೋಹವೆಲ್ಲಾ ಸುಂದರವಾಗಿ ಭಾಸಿಸುವ ದಿನಗಳವು. ಆ ಹುಡುಗಿ ಸಮೀಪಕ್ಕೆ ಬಂದರೆ, ನನ್ನೊಂದಿಗೆ ಮಾತನಾಡಿದರೆ, ನಕ್ಕರೆ, ಹಾಸ್ಯ ಮಾಡಿದರೆ— ಆಗ ನನ್ನ ಶರೀರವೆಲ್ಲಾ ಪುಳಕಿತಗೊಳ್ಳುತ್ತಿತ್ತು. ನನ್ನ ಮನಸ್ಸೆಲ್ಲಾ ಆನಂದಧಾಮವಾಯಿತು. ಆ ಹುಡುಗಿಯ ಮೈಬಣ್ಣ ಪುಟವಿಟ್ಟ ಚಿನ್ನ. ಆ ಕಾಂತಿ ವ್ಯಾಪಿಸಿ ನನ್ನ ಶರೀರದಲ್ಲಿ ಹೊಕ್ಕು, ನಾನಾರೋ ಒಬ್ಬ ತೇಜೋಮೂರ್ತಿಯಾದಂತೆನಿಸಿತು

ಆ ದಿನ ಸದಸ್ಯವಾದ್ದರಿಂದ ಲಗ್ನದವರೆಲ್ಲರೂ ಮದುವೆಯ ಮನೆಯಲ್ಲಿಯೇ ಉಳಿದುಬಿಟ್ಟರು. ನಾವು ಮೂವರೇ ಬಿಡದಿಯಲ್ಲಿ. ಆ ಹುಡುಗಿ ಮಾಡಿದ ತುಂಟ ಕೆಲಸಗಳೆಲ್ಲಾ ಜ್ಞಾಪಕವಿಲ್ಲ. ಈ ಒಂದು ವಿಷಯವೇ ಜ್ಞಾಪಕದಲ್ಲಿದೆ—

ನಾನು ಚಿಕ್ಕಂದಿನಿಂದಲೂ ಪಟ್ಟಣದಲ್ಲಿ ಓದಿಕೊಳ್ಳುತ್ತಿದ್ದುದರ ದೆಸೆಯಿಂದ ನನಗೆ ತಿಳಿಯದಂಥ ಹಳ್ಳಿಯ ವಿಷಯಗಳು ಕೆಲವು ಉಳಿದುಬಿಟ್ಟಿದ್ದವು. ಎಷ್ಟೋ ಗಿಡಗಳನ್ನು ಬಲ್ಲೆ. ಎಷ್ಟೋ ಸಸಿಗಳನ್ನು ಬಲ್ಲೆ. ಸೀಮೆ ಮೆಣಸಿನ ಕಾಯನ್ನು ಮಾತ್ರ ನಾನರಿಯೆ. ಅದು ಸರಿಯಾಗಿ ಕಟ್ಟಿರುವೆಯಷ್ಟಿರುತ್ತದೆ. ಆ ಪ್ರಮಾಣದಲ್ಲೇ ಹಣ್ಣಾಗುತ್ತದೆ. ಆ ಹುಡುಗಿ ತಮ್ಮ ಹಿತ್ತಲಿಗೆ ಹೋಗಿ ಹಣ್ಣಾದ ಸೀಮೆ ಮೆಣಸಿನ ಕಾಯನ್ನು ತಂದು ನನಗೆ ಕೊಟ್ಟು, ಇದು ತುಂಬ ಸಿಹಿಯಾಗಿರುತ್ತೆ, ತಿನ್ನು—ಎಂದಳು. ಹಾಗೆ ಕೊಡುವಾಗ ಬುದ್ಧಿವಂತಿಕೆಯಿಂದ ತೊಟ್ಟು ತೆಗೆದು ತಂದುಕೊಟ್ಟಿದ್ದಳು. ತೊಂಡೆ

---

"ಕವಿ ಸಮ್ರಾಟ್" ವಿಶ್ವನಾಥ ಸತ್ಯನಾರಾಯಣರ ಹೆಸರು ಆಂಧ್ರದಲ್ಲಿ ಮನೆಮಾತು. ಸಾಹಿತ್ಯದಲ್ಲಿ ಇವರು ಕೈಯಾಡಿಸದ ಕ್ಷೇತ್ರವಿಲ್ಲ. ಇವರಂಥ ಪ್ರತಿಭಾನ್ವಿತ ಲೇಖಕ 'ನ ಭೂತೋ ನ ಭವಿಷ್ಯತಿ' ಎಂದು ಅನೇಕ ವಿಮರ್ಶಕರ ಅಭಿಪ್ರಾಯ. ಸಾವಿರಕ್ಕೂ ಮಿಕ್ಕ ಪುಟಗಳ ಕಾದಂಬರಿ 'ವೇಯಿಪಡಗಲು' ಅಲ್ಲದೆ 'ಚೆಲಿಯಲಿಕಟ್ಟ', 'ಏಕವೀರ', 'ತೆಱಚಿರಾಜ' ಇವು ಇವರ ಶ್ರೇಷ್ಠ ಕೃತಿಗಳೆಂದು ಪರಿಗಣಿಸಲ್ಪಟ್ಟಿವೆ. ಒಮ್ಮೊಮ್ಮೆ ಯಾವುದು ಅಲ್ಲವೆಂಬುದೇ ಗೊತ್ತಾಗುವುದಿಲ್ಲ ಎಂಬೊಂದು ಅಭಿಪ್ರಾಯವೂ ಇಲ್ಲದಿಲ್ಲ.

ಇವರು ತೆಲಂಗಾಣದಲ್ಲಿನ ಕರೀಂನಗರ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದು ನಿವೃತ್ತರಾಗಿರುವರು.

---

ಹಣ್ಣು ಮುಂತಾದವುಗಳನ್ನು ನಾನು ಬಲ್ಲವನಾದ್ದರಿಂದ, ಇದು ಸಹ ಅಂಥಾದ್ದೇನೋ ಎಂದು ಭಾವಿಸಿ ಬಾಯೊಳಗೆ ಹಾಕಿಕೊಂಡು ಕಚಕ್ಕನೆ ನಮಲಿದೆ. ಕೇಳಬೇಕೆ? ಬಾಯಿ ಉರಿದು ಹೋಯಿತು. ಆ ಖಾರದುರಿಯನ್ನು ತಾಳಿಕೊಳ್ಳುವುದು ಕಷ್ಟವಾಯಿತು. ಅತ್ತ ಓಡಿ ಹೋಗಿ ನೀರು ಮುಕ್ಕಳಿಸಿ ಉಗುಳಿ ಏನೆಲ್ಲ ಮಾಡಿದಾಗ್ಯೂ ಖಾರದುರಿ ಕಡಿಮೆಯಾಗಲೊಲ್ಲದು. ಕಣ್ಣುಗಳಿಂದ ನೀರು, ಹಾಯ್ ಹಾಯ್‌ಗುಟ್ಟುವುದು. ಬಾಯಿ ಸೇದುವುದು, ಕಿವಿಗಳಿಂದ ಹೊಗೆ ಬರುವುದು—ನಾನಿಷ್ಟೆಲ್ಲ ಬಾಧೆಪಡುತ್ತಿದ್ದರೆ ಆ ಹುಡುಗಿ ನಗುವುದು, ತಾಯಿ ಮುಗುಳುನಗೆಯಿಂದ ತೂಷ್ಣೀಭಾವವನ್ನು ವಹಿಸುವುದೆ?— ನನ್ನ ಬಗ್ಗೆ ಅವರಿಬ್ಬರಲ್ಲಿಯೂ ದ್ವೇಷವಿಲ್ಲ. ಇಬ್ಬರಿಗೂ ನಾನೆಂದರೆ ಅಭಿಮಾನವಿದೆ. ನಾನು ಬುದ್ಧಿ ಕಡಿಮೆಯಾಗಿ ಆ ಕಾಯಿಯನ್ನು ಏಕಾದಶೂ ನಮಲಿದೆನೋ? ನನ್ನ ಮನಸ್ಸಿನಲ್ಲಿ ಒಂದಿಷ್ಟು ನಾಚಿಕೆಯೂ ಉಂಟಾಯಿತು. ಆ ಹುಡುಗಿಯ ಬಗ್ಗ ನನ್ನಲ್ಲಿರುವ ಪ್ರೇಮವನ್ನು— ನನ್ನ ಸಣ್ಣ ವಯಸ್ಸಿನ ಮೂಢತನದಿಂದುಂಟಾದ ನಾಚಿಕೆ ಅಣಕಿಸಿತು. ನಾನು ಬಾಧೆಪಡುತ್ತಿರಲು ಆ ಹುಡುಗಿ ಸಂತೋಷಗೊಂಡದ್ದರಿಂದ ನನಗೆ ಕೋಪ ಬಂದಿತು. ಆದರೆ ಆ ನಾಚಿಕೆಯನ್ನೂ ಕೋಪವನ್ನೂ ಅಡಗಿಸಿಕೊಂಡು ನಾನು ಕೂಡ ಅದೆಲ್ಲಾ ಒಂದು ತಮಾಷೆಯೆಂಬಂತೆ ನಟಿಸಬೇಕಾಗಿ ಬಂತು

ನನಗೆ ಮದುವೆಯಾಗಿದೆ ಎಂದು ಯಾವುದೋ ಪ್ರಸಂಗದಲ್ಲಿ ನಮ್ಮ ತಾಯಿಯ ಮೂಲಕ ಆಕೆಗೆ ತಿಳಿಯಿತು. ಆಕೆ ನಗುತ್ತಾ, "ಅಯ್ಯೊ, ಹಾಗೋ! ನಮ್ಮ ಹುಡುಗಿಯನ್ನು ನೀವು ತಂದುಕೊಳ್ಳುತ್ತೀರೀಂತ ಅಂದುಕೊಂಡಿದ್ದೆನಲ್ಲಾ!" ಎಂದಳು. ಮದುವೆಯ ಐದನೆಯ ದಿನ ನಾವೆಲ್ಲಾ ನಮ್ಮ ದಾರಿ ಹಿಡಿದು ಬಂದುಬಿಟ್ಟೆವು. ಆ ಮೇಲೆ ವರ್ಷಕ್ಕೋ ಎರಡು ವರ್ಷಕ್ಕೋ ನನ್ನ ಹೆಂಡತಿ ನಮ್ಮ ಮನೆಗೆ ಸಂಸಾರಕ್ಕೆ ಬಂದಳು. ಆ ಹುಡುಗಿಯನ್ನು ಕುರಿತು ಐದಾರು ವರ್ಷಗಳ ವರೆಗೆ ನೆನೆಸಿಕೊಳ್ಳುತ್ತಲೇ ಇದ್ದೆ. ಕಡೆಗೆ ಪೂರ್ತಿಯಾಗಿ ಮರೆತೇ ಬಿಟ್ಟೆ.

೨

ಒಳ್ಳೇ ನಡು ಬೇಸಗೆ. ಬೆಳಗಿನಿಂದಲೂ ಊಟವಿಲ್ಲ. ಬೆಜವಾಡದಲ್ಲಿ ನಸುಕಿನಲ್ಲಿಯೇ ಆರು ಗಂಟೆಗೆ ಹತ್ತಿದರೆ ಸಾಯಂಕಾಲ ಐದೂವರೆಗೆ ಗುಂಟಕಲ್ಲಿಗೆ ಬಂದಿತು ರೈಲು. ನಾನು ಅನಂತಪುರಕ್ಕೆ ಹೋಗಬೇಕಾಗಿತ್ತು...... ಆ ದಿನ ಶುದ್ಧ ಸಪ್ತಮಿ ಎಂದು ಕಾಣುತ್ತದೆ. ಸಾಯಂಕಾಲದ ಬೆಳುದಿಂಗಳು ಹರಡಿಕೊಂಡಿದೆ. ಅನಂತಪುರದ ರೈಲು ಹೊರಟಿತು, ನಾಲಗೆ ಸೇದಿಕೊಳ್ಳುತ್ತಿದೆ; ಒಣಗಿ ಹೋಗಿದೆ. ಗಾಳಿ ಈ ಕಿವಿಯಲ್ಲಿ ತೂರಿ ಆ ಕಿವಿಯಿಂದ ಹೊರಟುಹೋಗುತ್ತಾ ಇದೆ. ಆ ಗಾಳಿ ಮುಖದ ಮೇಲೆ, ಕೈಗಳಿಗೆ ತಾಕಿದ ಕಡೆಯಲ್ಲೆಲ್ಲ ಬಿಸಿಬಿಸಿ. ಆ ರೈಲು ಇದ್ಯಾಕಾದರೂ ಬಂತಪ್ಪಾ ಎಂಬಂತೆ ನಡೆಯುತ್ತಿದೆ. ದೂರದಲ್ಲಿ ಸಣ್ಣ ಸಣ್ಣ ಗುಟ್ಟೆಗಳು—ಕತ್ತಲ ಮುದ್ದೆಗಳು ಬಿದ್ದಂತೆ ಕುಳಿತುಕೊಂಡಿವೆ. ಎತ್ತ ನೋಡಿದರೂ ಕಲ್ಲುಗಳೇ. ರೈಲು ಹಳ್ಳಕೊಳ್ಳಗಳ ಮೇಲೆ ಹಾದು ಹೋಗುತ್ತಿದೆ. ಹಳ್ಳದಲ್ಲಿನ ಮರಳು ಬೆಳದಿಂಗಳಲ್ಲಿ, ನೀರಿಲ್ಲದ್ದರಿಂದ ನಾಲಗೆ ಚಾಚಿದ್ದಂತೆ ಕಂಡುಬರುತ್ತಿದೆ. ರೈಲು ಬೋಗಿಗಳಲ್ಲಿ ನೀರಿಲ್ಲ. ಸ್ಟೇಷನ್ ಬರುತ್ತಲ್ಲಾ ಅಲ್ಲಿ ನೀರು ಸಿಕ್ಕಬಹುದೆಂದು ಎದುರುನೋಡಿದೆ. ಒಂದು ಸ್ಟೇಷನ್, ಎರಡು ಸ್ಟೇಷನ್‌ಗಳು— ಯಾವ ಸ್ಟೇಷನ್‌ನಲ್ಲಿಯೂ ನೀರಿಲ್ಲ, ಕುಡಿಯುವ ನೀರೆಂದು ಇಟ್ಟ ಡಬ್ಬಿಗಳಲ್ಲೂ ನೀರಿಲ್ಲ. ನನ್ನ ಪ್ರಾಣ ತಹತಹಗೊಳ್ಳುತ್ತಿದೆ. ಆಗಲೇ ಒಂಬತ್ತು ಗಂಟೆಯಾಗುತ್ತಿದೆ. ಪ್ರತಿ ಸ್ಟೇಷನ್‌ನಲ್ಲಿ ಕೆಳಗಿಳಿಯುವುದು, ಹರಡಿಕೊಂಡಿರುವ ಆ ಬೆಳುದಿಂಗಳ ರಾತ್ರಿಯಲ್ಲಿ ಪ್ಲಾಟ್‌ಫಾರಂಗಳ ಮೇಲೆ ನೀರಿಗಾಗಿ ಅಲೆದಾಡುವುದು.

ಒಂದು ಸ್ಟೇಷನ್‌ನಲ್ಲಿ ನಾನು ಬೋಗಿಯಿಂದ ಕೆಳಗಿಳಿದು ನೀರು ದೊರೆಯುತ್ತೇನೋ ನೋ-ಡೋಣವೆಂದು ಹೋಗುತ್ತಿರುವಾಗ ಹೆಂಗಸರ ಬೋಗಿಯಿಂದ ಒಬ್ಬ ಹೆಂಗಸು ನನ್ನನ್ನು ಕರೆದು —"ಏನ್ರೀ! ನಮ್ಮ ಹುಡುಗರ ನಾಲಗೆಗಳೆಲ್ಲಾ ಒಣಗಿ ಹೋಗಿವೆ. ಒಂದಿಷ್ಟು ನೀರು ತಂದು ಕೊಡ್ತೀರಾ?"— ಎಂದು ಕೇಳಿದಳು. ನಾನು ಕುಳಿತಿರುವ ಬೋಗಿಯೊಳಗಿನ ದೀಪ ಮಂದ ವಾಗಿ ಬೆಳಗುತ್ತಿದೆ. ಈ ಹೆಂಗಸರ ಬೋಗಿಯೊಳ ಗಿನ ದೀಪ ತುಂಬ ಪ್ರಕಾಶಮಾನವಾಗಿ ಉರಿ ಯುತ್ತಿದೆ. ಆದಾಗ್ಯೂ ಆಕೆ ಕಿಟಿಕಿಯಿಂದ ಹೊರ ಬಾಗಿ ನನ್ನ ಹತ್ತಿರ ಮಾತನಾಡುತ್ತಿದ್ದುದರ ದೆಸೆಯಿಂದ ಬೆಳಕು ಆಕೆಯ ಮುಖದ ಮೇಲೆ ಬೀಳುತ್ತಿಲ್ಲ. ಆಕೆಯ ಮುಖ ರೇಖೆಗಳು ನನಗೆ ಸ್ಪಷ್ಟವಾಗಿ ಕಂಡುಬರಲಿಲ್ಲ. ಸ್ಥೂಲವಾಗಿ ನೋಡಿದರೆ ತುಂಬ ಸುಂದರಿಯಾಗಿರುವಂತೆ ತೋರಿದಳು.

"ಹಾಗೇ ಆಗಲಿ. ನಾನು ಹೇಗೂ ನೀರಿಗಾ ಗಿಯೇ ಹೊರಟಿರುವೆ. ಸಿಕ್ಕರೆ ತರುತ್ತೇನೆ," ಎಂದೆ.

"ಇಗೋ ಈ ಚೆಂಬು ತೆಗೆದುಕೊಂಡು ಹೋಗಿ," ಎಂದು ಆಕೆ ಕೀಲುಚೆಂಬಿನ ತಿರುಗಣಿ ಮುಚ್ಚಳವನ್ನು ತೆಗೆದು ಚೆಂಬನ್ನು ನನ್ನ ಕೈಗೆ ಕೊಟ್ಟಳು. ಆ ದಾಹದ ಸ್ಥಿತಿಯಲ್ಲಿ ಸ್ತ್ರೀ-ಪುರುಷ ರೆಂಬ ಭೇದವಿರುವುದಿಲ್ಲ. ಪರಪುರುಷನೆಂಬ ಭೇದ ವಿಲ್ಲ. ಆಕೆಯ ಕೈ ನನಗೆ ತಾಕಿತು. ಇನ್ನೊಂದು ಗಂಟೆಯೊಳಗೇನಾದರೂ ನೀರು ದೊರಕದೇ ಹೋದ ಪಕ್ಷಕ್ಕೆ ಶಾಖಕ್ಕೆ ಸಾಯಬೇಕಾದದ್ದೇ. ಮೃತ್ಯುವಿಗೆ ಗಂಟೆ ದೂರದಲ್ಲಿರುವ ಆ ಸಮಯ ದಲ್ಲಿ ಆಕೆಯ ಕೈ ನನಗೆ ತಾಕಿ ನಾನು ಸಂತೋ ಷಿಸುವುದು ಅಧರ್ಮ ಲಕ್ಷಣವೇ? ಪಶು ಲಕ್ಷ-ಣವೆ?

ಆ ಸ್ಟೇಷನ್‌ನಲ್ಲಿ ನೀರು ದೊರೆಯಿತು. ನಾನು ಹೊಟ್ಟೆ ತುಂಬ ಕುಡಿದೆ. ▪ ಚೆಂಬು ತುಂಬ ಹಿಡಿದುಕೊಂಡೆ. ನನ್ನ ಜೀವವುಳಿಯಿತು, ನಾನು ಬದುಕಿದೆ ಎಂಬ ಸಂತೋಷಕ್ಕಿಂತ— ಆ ಹೆಂಗ ಸಿಗೆ ಚೆಂಬು ತುಂಬ ನೀರು ಹಿಡಿದುಕೊಂಡು ಹೋಗಿ ಕೊಡಲು ಸಾಧ್ಯವಾಯಿತಲ್ಲಾ ಎಂಬ ಸಂತೋಷವೇ ಹೆಚ್ಚಾಯಿತು. ನಾನು ಆಕೆಗೆ ಮಹೋಪಕಾರ ಮಾಡುತ್ತಿರುವೆನೆ? ಈ ಉಪ ಕಾರಕ್ಕೆ ಪ್ರತ್ಯುಪಕಾರವಾಗಿ ಆಕೆ ನನ್ನ ಬಗ್ಗೆ ಪ್ರಸನ್ನಳಾಗುತ್ತಾಳೆಂದೇ? ನೀರು ತೆಗೆದುಕೊಂ ಡುಹೋಗಿ ಕೊಟ್ಟೆ. ಆಕೆ ಚೆಂಬು ಇಸಿದುಕೊಳ್ಳು ವಾಗ ಈ ಸಾರಿ ತನ್ನ ಕೈ ನನ್ನ ಕೈಗೆ ತಾಕದಂ ತೆಯೇ ಇಸಿದುಕೊಂಡಳು. ಹುಡುಗರಿಗೆ ಕೊಟ್ಟಳು. ತಾನೊಂದಿಷ್ಟು ಕುಡಿದಳು. ನಾನಾಗ ಹೊರಟು ಹೋಗಬಹುದಿತ್ತಲ್ಲಾ! ಹೊರಟು ಹೋಗಲಿಲ್ಲ. "ಸಾಕೇ? ಇನ್ನೊಂದು ಚೆಂಬು ತರಲೆ?"– ಎಂದು ಕೇಳುತ್ತ ಅಲ್ಲಿಯೇ ನಿಂತೆ. ಆಕೆ, "ಇನ್ನು ಬೇಡಾರೀ," ಎಂದಳು. ನಾನು ನೀರು ತಂದುಕೊಟ್ಟದ್ದಕ್ಕಾಗಿ ಆಕೆಯ ಮುಖದಲ್ಲಿ ಕೃತಜ್ಞತೆಯಿದೆ. ಆದರೆ "ನಾನು ಕೃತಜ್ಞಳು, ವಂದನೆಗಳು" ಮುಂತಾದ ನಾಗ ರಿಕ ಮಾತುಗಳು ಇಂಗ್ಲಿಷ್ ಭಾಷೆ ಅರಿಯದವ ರಿಗೆ ಗೊತ್ತಿಲ್ಲ. ಆದ್ದರಿಂದ ಆಕೆ ನನ್ನೊಂದಿಗೆ ಆಡಲಿಲ್ಲ. ಆದರೆ, ಮುಖದಲ್ಲಿ ಆ ಕೃತಜ್ಞತೆಯ ಮಾತುಗಳೆಲ್ಲಾ ಎರಡರಷ್ಟು ಕಾಣಿಸುತ್ತಿವೆ.

ಆ ಹುಡುಗರಿಗೆ ನೀರು ಕೊಡುವುದಕ್ಕಾಗಿ ಆಕೆ ಆ ಕಡೆ ಈ ಕಡೆ ಚಲಿಸಿದ್ದರಿಂದ ಆ ಹೊಳಪು ಪ್ರಕಾಶದಲ್ಲಿ ಆಕೆಯ ಮುಖ ನನಗೆ ಚೆನ್ನಾಗಿ ಕಾಣಿಸಿತು. ಮೊದಲು ಆಕೆಯ ಸೌಂದರ್ಯವೇ ನನ್ನನ್ನು ದಂಗುಬಡಿಸಿತು. ಅನಂತರ ಆಕೆಯ ಮುಖವನ್ನು ಅದೆಲ್ಲಿಯೋ ನೋಡಿದಂತೆ ಭಾಸ ವಾಯಿತು. ನನ್ನನ್ನು ಈ ಮೊದಲೊಮ್ಮೆ ನೋಡಿ ರುವಂತೆ ಅವಳ ಮುಖದಲ್ಲಿಲ್ಲ. ನಾನು ಈ ಮೊದ ಲೊಮ್ಮೆ ಆಕೆಯನ್ನು ನೋಡಿದ್ದ ಪಕ್ಷಕ್ಕೆ ಅವಳೂ ನನ್ನನ್ನು ನೋಡಿಯೇ ಇರಬೇಕಲ್ಲ. ಅದೂ ಅಲ್ಲದೆ ಕೆಲವರನ್ನು ನೋಡಿದಾಗ ಅವರನ್ನು ನಾವು ಈ ಮೊದಲೊಮ್ಮೆ ನೋಡಿಯೇ ಇರದಿದ್ದರೂ ನೋಡಿ ದಂತೆಯೇ ಭಾಸವಾಗುತ್ತದೆ. ಅಂಥ ಮುಖ

ಲಕ್ಷಣಗಳುಳ್ಳ ಯಾವುದೋ ವ್ಯಕ್ತಿಯನ್ನು ನೋಡಿರಬಹುದು. ಆ ಲಕ್ಷಣಸಾಮ್ಯದಿಂದಾಗಿ ಪ್ರಸ್ತುತದವರನ್ನೂ ನೋಡಿದಂತಿರುತ್ತದೆ. ನಿಮ್ಮದು ಯಾವೂರು? ಎಲ್ಲಿಗೆ ಹೋಗುತ್ತಿರುವಿರಿ? ಮುಂತಾದ ಪ್ರಶ್ನೆಗಳನ್ನು ಕೇಳಿದ್ದರೆ ಚೆನ್ನಾಗಿ-ತ್ತೇನೋ? ಆದರೆ ಆಕೆಯ ಮುಖವನ್ನು ನೋಡಿದರೆ ಕೃಷ್ಣಾ-ಗೋದಾವರಿ ಜಿಲ್ಲೆಗಳ ಹೆಂಗಸಿನಂತಿರುವಳಾಗಲಿ, ದತ್ತಮಂಡಲದ ಹೆಂಗಸಿನಂತಲ್ಲ. ಕೇಳೋಣವೆಂದುಕೊಂಡವನು ಕೇಳದೆಯೇ ನನ್ನ ಬೋಗಿಗೆ ಹೊರಟುಹೋದೆ. ಆದರೆ ಆಕೆಯ ಸುಂದರವಾದ ಮುಖ ನನ್ನ ಮನಸ್ಸಿನಲ್ಲಿ ಮುದ್ರಿತವಾಗಿಯೇ ಇದೆ.

೨

ಅನಂತರ ಎರಡು ವರ್ಷಗಳಿಗೆ ಆ ಊರಿನಲ್ಲಿ ನನಗೆ ಕೆಲಸ ಸಿಕ್ಕಿತು. ಅಲ್ಲಿಗೆ ಹೋದೆ. ಬಾಡಿಗೆ ಮನೆಗಾಗಿ ತಿರುಗಿದೆ. ಕೊನೆಗೊಂದು ಮನೆಯಲ್ಲಿ ಒಂದು ಭಾಗ ಕುದುರಿತು. ಕುದುರಿದ ದಿನ ಸಂಜೆಯೇ ನಮ್ಮ ಮನೆಯವರು ಬಂದರು. ಈ ನಾಲ್ಕೂ ದಿನಗಳಿಂದ ನಮ್ಮ ಪಕ್ಕದ ಭಾಗದ ಮನೆಗೆ ಯಾವಾಗಲೂ ಬೀಗ ಹಾಕಿಯೇ ಇದೆ. ಮನೆ ಬಾಡಿಗೆಗೆ ಕೊಟ್ಟಾತ ಬೇರೆ ಮನೆಯಲ್ಲಿದ್ದಾನೆ ಆ ಭಾಗದಲ್ಲಿ ಯಾರಿದ್ದಾರೆ ಎಂದು ಆತನನ್ನು ಕೇಳಿದೆ. ಆ ಭಾಗದಲ್ಲಿರುವಾತ ಕಲೆಕ್ಟರ ಆಫೀಸಿನಲ್ಲಿ ಗುಮಾಸ್ತನೆಂದೂ ಆತನ ಹೆಂಡತಿ ಹೆರಿಗೆಗಾಗಿ ತವರುಮನೆಗೆ ಹೋಗಿರುವಳೆಂದೂ ಆತನೊಬ್ಬನೇ ಇದ್ದಾನೆಂದೂ ಈ ನಾಲ್ಕು ದಿನಗಳಿಂದ ರಜೆಹಾಕಿ ಊರಿಗೆ ಹೋಗಿರುವನೆಂದೂ ತಿಳಿಸಿದ. ಐದನೆಯ ದಿನ ಆತ ಊರಿನಿಂದ ಬಂದ. ಆತ ಸಬ್ ಮ್ಯಾಜಿಸ್ಟ್ರೇಟ್ ಕೆಲಸಮಾಡಿ ಪುನಃ ಕಲೆಕ್ಟರ್ ಆಫೀಸಿಗೆ ಒಬ್ಬ ದೊಡ್ಡ ಗುಮಾಸ್ತನಾಗಿ ಬಂದಿದ್ದನಂತೆ. ಆತ ರಾತ್ರಿ ಯಾವಾಗಲೋ ಹತ್ತು ಗಂಟೆಯ ಸುಮಾರಿಗೆ ಬರುತ್ತಿದ್ದ. ಬೆಳಿಗ್ಗೆ ಒಂಬತ್ತು ಗಂಟೆಗೇ ಹೊರಟು ಬಿಡುತ್ತಿದ್ದ. ನಾನು ಬೆಳಿಗ್ಗೆ ಏಳುವುದಕ್ಕೇನೇ ಏಳೂ-ವರೆಯಾಗುತ್ತದೆ. ನಾವಿಬ್ಬರೂ ಭೇಟಿಯಾಗಿ ಮಾತನಾಡಲು ಆಗುವುದೇ ಇಲ್ಲ. ಅದೂ ಅಲ್ಲದೆ ಆತ ಕೊಂಚ ಮ್ಯಾಜಿಸ್ಟ್ರೇಟ್‌ಗಿರಿಯಲ್ಲಿದ್ದು ಬಂದವನಾದ್ದರಿಂದ ಸ್ವಲ್ಪ ಠೇಂಕಾರವೂ ಇತ್ತು. ನಾಲ್ಕಾರು ತಿಂಗಳು ಆ ಮನೆಯಲ್ಲಿ ಜಂಟಿ ಸಂಸಾರ ಸಾಗಿಸುತ್ತಿದ್ದರೂ ಆತ-ನಾನು ಭೆಟ್ಟಿಯಾಗಿ ಮಾತನಾಡಲಾಗಲೇ ಇಲ್ಲ. ಆತನಾರೋ? ನಾನಾರೋ? ಹೀಗೆಯೇ ಮತ್ತೊಂದು ತಿಂಗಳು ಕಳೆಯಿತು.

ಒಂದುದಿನ ಸಾಯಂಕಾಲ ಬಾಗಿಲಲ್ಲಿ ಕುದುರೆ ಗಾಡಿ ಬಂದು ನಿಂತಿತು. ಅದರೊಳಗಿನಿಂದ ಮೂರು ಜನ ಹುಡುಗರು, ಕೈಗೂಸಿನೊಂದಿಗಿ-ರುವ ತಾಯಿ— ಇಷ್ಟು ಜನ ಇಳಿದರು. ನಾನು ಬಾಗಿಲ ಬಳಿ ಕುಳಿತುಕೊಂಡು ಏನನ್ನೋ ಬರೆಯುತ್ತಾ ಇದ್ದೆ. ತಲೆಯೆತ್ತಿ ನೋಡಿದರೆ ಅವಳು. ತಟಕ್ಕನೆ ಹೋಲಿಸಿಕೊಳ್ಳಲಾಗಲಿಲ್ಲ. ಎರಡು ವರ್ಷಗಳ ಕೆಳಗೆ, ರಾತ್ರಿಯ ಹೊತ್ತಿನಲ್ಲಿ ಬೋಗಿಯಲ್ಲಿನ ಬೆಳಕಿನಲ್ಲಿ ನೋಡಿದ ಮುಖವಲ್ಲವೇ? ಆ ಕಣ್ಣುಗಳು, ಆ ಹುಬ್ಬುಗಳು 'ನಾನೇ' ಎಂದವು. ಆಕೆ ಗಾಡಿಯಿಂದಿಳಿಯುತ್ತಲೇ— ತಲೆ ಎತ್ತಿ ಆಚೆ ಈಚೆ ನೋಡದಂತೆಯೇ ಮನೆಯೊಳಗೆ ಹೊರಟುಹೋದಳು. ಪಕ್ಕದ ಭಾಗದಲ್ಲಿ ಯಾರೋ ಇದ್ದಾರೆ, ನಮಗೇಕೆ ಎಂದುಕೊಂಡಳೊ? ಯಾರೋ ಪಕ್ಕದ ಭಾಗಕ್ಕೆ ಬಂದಿದ್ದಾರೆ ಎಂದು ಗಂಡ ತಿಳಿಸಿದ್ದನೋ? ಏನೆಂದರೂ ಪಕ್ಕದಲ್ಲಿ ಒಬ್ಬ ಮನುಷ್ಯನಿದ್ದರೆ ತಲೆಯೆತ್ತಿ ನೋಡುವುದು ಮಾನವಸಹಜ. ತಾನು ಮ್ಯಾಜಿಸ್ಟ್ರೇಟ್ ಹೆಂಡತಿ ನಾಳೆ ಬೆಳಿಗ್ಗೆ ಗಂಡ ತಹಸೀಲ್ದಾರನಾಗುತ್ತಾನೆ. ಮನಸ್ಸಿನಲ್ಲಿ ಈ ಅಹಂಕಾರವಿ-ದ್ದರೂ ಇರಬಹುದು.

ಆದರೆ ಆಕೆ ಗಾಡಿಯಿಂದ ಇಳಿದು ಮನೆಯೊಳಗೆ ಹೊರಟು ಹೋಗುವ ವರೆಗೂ ನಾನು ಆಕೆಯ ಕಡೆಗೇನೇ ನೋಡುತ್ತಿರುವೆ. ಗಂಡನೂ ಹಿಂದೆಯೇ ಇದ್ದಾನೆ. ನಾನು ತನ್ನ ಹೆಂಡ-ತಿಯ ಕಡೆಗೇ ನೋಡುತ್ತಿದ್ದೇನೆಂಬುದು ಆತನಿಗೆ ಗೊತ್ತು. ನನ್ನನ್ನು ಮರ್ಯಾದೆಯನ್ನರಿಯದವ

ನೆಂದುಕೊಳ್ಳಬೇಕಾದದ್ದೇ ಆಗಲಿ ನನ್ನನ್ನು ಗದರಿಸಲು ಸಾಧ್ಯವಿಲ್ಲ. ಅಭಿಯೋಗವನ್ನು ತರುವುದಕ್ಕೂ ಸಾಧ್ಯವಿಲ್ಲ. ಆತನ ನಡಿಗೆಯಲ್ಲಿ, ನೋಟದಲ್ಲಿ ಒಂದು ತೆರನಾದ ತಿರಸ್ಕಾರ, ನಿರಾದರಣೆ ಕಂಡುಬಂದರೂ ಮೇಲೆ ಉಕ್ಕಲಿಲ್ಲ.

ಇಷ್ಟಕ್ಕೂ ಆ ಹೊತ್ತು, ಆ ದಿನ ಬಿಸಿಲ ಹೊಡೆತ ತಿಂದರೂ ಆಕೆಯ ಶರೀರ, ಮುಖ ಪುಷ್ಟಿಯಾಗಿಯೇ ಕಂಡುಬಂದಿದ್ದವು. ಆದರೆ ಈ ದಿನ ಆಕೆ ತುಂಬ ಸೊರಗಿರುವಳು. ಆ ದಿನದ ಶರೀರಸೌಷ್ಠವವಿಲ್ಲ. ಕೆನ್ನೆಗಳು ಬತ್ತಿಹೋಗಿವೆ. ಕಣ್ಣುಗಳು ಕೊಂಚ ಗುಳಿಬಿದ್ದಿವೆ. ಹೆರಿಗೆ ತುಂಬ ಕಷ್ಟದ್ದಾಗಿತ್ತೋ ಏನೊ? ಪಾಪ ಇನ್ನೂ ತೇಲಿಕೊಂಡಿಲ್ಲವೆಂದುಕೊಂಡೆ.

ಹತ್ತು ದಿನಗಳಾದವು.

ನಮ್ಮ ತಾಯಿಯವರು ಹೇಳಿದರು: "ಅಬ್ಬೊ! ಅವರಿಗೆ ತುಂಬ ಜಂಬ ಕಣೋ! ಮಾತಾಡಿಸಿದರೂ ಮಾತಾಡೋಲ್ಲ."

"ಹೋಗಲಿ ಬಿಡಮ್ಮಾ"— ಎಂದೆ.

ಆ ಊರಲ್ಲಿ ಬಾವಿಗಳು ಪಾತಾಳಗಂಗೆಗಳು. ಒಂದು ದಿನ ಅವರ ಕೆಲಸದವಳು ಬರಲಿಲ್ಲ. ಸ್ನಾನಕ್ಕೂ ಪಾನಕ್ಕೂ ಮತ್ತೆಲ್ಲದಕ್ಕೂ ಆಕೆಯೇ ನೀರು ಸೇದಬೇಕಾಗಿ ಬಂದಿತು. ಪಾಪ, ನಿತ್ರಾಣ ಸ್ಥಿತಿಯಲ್ಲಿರುವವಳು, ಒಂಬತ್ತೂವರೆಗೆ ಊಟಕ್ಕೆ ಬಡಿಸದಿದ್ದರೆ ಆ ಗಂಡ ಆಕೆಯ ಮೇಲೂ ಮ್ಯಾಜಿಸ್ಟ್ರೇಟ್‌ಗಿರಿ ಚಲಾಯಿಸುತ್ತಾನೆ. ರಾತ್ರಿಗೆ-ಹೊತ್ತಿಗೆ ಮುಂಜೆಯ ಅಡುಗೆಯಾಗಬೇಕು. ಊಟಮಾಡಿ ಆಫೀಸಿಗೆ ಹೋಗಬೇಕಾಗಿದೆಯೆಂದು ಹೇಳಿದನಂತೆ ಸಾಯಂಕಾಲ. ನಾನು ಐದು ಗಂಟೆಯ ಸುಮಾರಿಗೆ ಮನೆಗೆ ಬಂದಾಗ ಆಕೆ ಬಾವಿಯಿಂದ ನೀರು ಸೇದುತ್ತಿರುವುದು ಕಂಡುಬಂದಿತು. ಒಂದು ಬಕೀಟು ಮೇಲೆ ಬರುವಷ್ಟರೊಳಗೆ ಆಕೆಯ ಪ್ರಾಣ ಸೋತು ಹೋಗುತ್ತದೆ. ಅಲ್ಲಿ ಎರಡು ಕೊಡಗಳನ್ನಿಟ್ಟಿದ್ದಳು. ಆ ಎರಡು ಕೊಡಗಳ ತುಂಬ ನೀರು ಬೇಕು. ನಾಲ್ಕು ಬಕೀಟುಗಳಾದರೇನೇ ಒಂದು ಕೊಡ ತುಂಬುವುದಿಲ್ಲ. ನಾನು, "ಸ್ವಲ್ಪ ಕಾಲು ತೊಳೆದುಕೋಬೇಕು, ಬಕೀಟು ಕೊಡ್ತೀರಾ?"— ಎಂದೆ. ಆಕೆ ಬಕೀಟು ಬಿಟ್ಟು ಮನೆಯೊಳಗೆ ಹೊರಟು ಹೋದಳು. ನಾನು ಕಾಲುಗಳನ್ನು ತೊಳೆದುಕೊಂಡು ಆ ಎರಡು ಕೊಡಗಳ ತುಂಬ ನೀರು ಸೇದಿ ಹಾಕಿ ಮನೆಯೊಳಗೆ ಹೋದೆ.

ಮೂರು ದಿನಗಳಾದ ಮೇಲೆ ಒಂದು ಸಾಯಂಕಾಲ ನಾನು ಮನೆಯೊಳಗೆ ಹೋಗುತ್ತಿದ್ದಾಗ ಆಕೆ ಮನೆಯೊಳಗಿನಿಂದ ಎದುರಿಗೆ ಬರುತ್ತಿದ್ದಳು. ನನ್ನ ಮೇಲೆ ಕಣ್ಣುಗಳನ್ನು ನಿಲ್ಲಿಸಿ ನೋಡಿದಳು. ಆ ಕಣ್ಣುಗಳೊಳಗೆ ಏನೋ ಗುರುತು ತಾಕಿದಂತೆ ತೋಚಿತು.

ಆ ನೀರು ಸೇದಿಟ್ಟದ್ದರಿಂದ ಪ್ರಸನ್ನಳಾದಳೋ, ಆ ರೈಲು ಗಾಡಿಯಲ್ಲಿ ನೀರು ತಂದು ಕೊಟ್ಟ ಆ ದಿನದ ಗುರುತು ಹತ್ತಿತೋ, ಅಂತೂ ನಮ್ಮಮ್ಮನೊಂದಿಗೆ, ನನ್ನವಳೊಂದಿಗೆ ಪರಿಚಯವಾಗಿ ಮಾತನಾಡಿಸಲಾರಂಭಿಸಿದಳಂತೆ.

ಚಿಕ್ಕಂದಿನಲ್ಲಿದ್ದರಾಗಚ್ಛಾಯವಾಗಿ ಪದ್ಯವನ್ನೋದುವ ಯೋಗ್ಯತೆ ನನ್ನಲ್ಲಿ ಬೆಳೆಯುತ್ತಾ ಬಂದಿತ್ತು. ಆಗ ದನಿಯೆತ್ತಿ ಹತ್ತು ಹದಿನೈದು ರಾಗಗಳನ್ನು ಪದ್ಯಗಳಿಗೆ ಅಳವಡಿಸಿಕೊಂಡು ಹಾಡುವುದು—-ಪರವಾಗಿಲ್ಲ, ಚೆನ್ನಾಗಿಯೆ ಇದೆ ಎಂದು ಕೇಳುಗರು ಹೇಳಿಕೊಳ್ಳುವುದು— ಹೀಗೆಯೆ ನಡೆದಿತ್ತು. ವಾರಕ್ಕೋ, ಹತ್ತು ದಿನಗಳಿಗೋ ಒಮ್ಮೆ—ರಾತ್ರಿ ಊಟ ಮುಗಿಸಿಕೊಂಡು ಹಾಗೆಯೇ ಅಡ್ಡಾಗಿ ರಾಗ ತೆಗೆಯುವುದು ನನಗೆ ಅಭ್ಯಾಸ. ಒಂದು ದಿನ ರಾತ್ರಿ ನಾನು ಹಾಗೆ ರಾಗ ತೆಗೆದೆ. ಮರುದಿನ, "ನಿಮ್ಮ ಮಗನಿಗೆ ಸಂಗೀತಾನೂ ಬರುತ್ತೈ!" — ಎಂದು ನಮ್ಮಮ್ಮನೊಂದಿಗೆ ಅಂದಳಂತೆ.

ಅನಂತರ ಒಂದು ದಿನ ನಮ್ಮ ತಾಯಿಯವರು ಹೇಳಿದರು.

"ಆಕೆ ಯಾರು ಗೊತ್ತೇನು ಕಣೋ? ನಿನ್ನ ಚಿಕ್ಕಂದಿನಲ್ಲಿ ನಾವೆಲ್ಲಾ ಆ ಊರಿಗೆ ಮದುವೆಗೆ

ಹೋದಾಗ ನಿನಗೆ ಸೀಮೆ ಮೆಣಸಿನಕಾಯನ್ನು ತಿನ್ನಿಸಿದ್ದಳಲ್ಲಾ ಅವಳೇ ಕಣೋ! ಮೊನ್ನೆ ನಾನು ಆಕೆಯನ್ನು ಕುಳ್ಳಿರಿಸಿಕೊಂಡು ಆಮಾತು ಈಮಾತಾಡ್ತಾ ಆಕೆಯ ಪೂರ್ವೋತ್ತರಗಳನ್ನೆಲ್ಲಾ ಕೇಳಿ ತಿಳಿದುಕೊಂಡೆ. ಆಕೆಯ ತಮ್ಮನೀಗ ನಮ್ಮೂರಲ್ಲಿ ಕೆಲಸದಲ್ಲಿದ್ದಾನಂತೆ. ನಮ್ಮನೆ ಪಕ್ಕದಲ್ಲಿ, ಎರಡು ಮನೆಗಳಾಚೆ ಇಲ್ವೇನೋ ಆ ರಾಮರಾಯರ ಮನೆ, ಆ ಮನೇಲಿ ಬಾಡಿಗೆಗಿದಾರಂತೆ. ಅವರ ತಾಯಿಯವರು ನನ್ನ ಹಾಗೆ ತುಂಬ ಮುದುಕಿಯಾಗಿರುವಳಂತೆ. ನಿನ್ನನ್ನೆಲ್ಲಿಯೋ ನೋಡಿದಂತೆ ಆಕೆಗೆ ಅನ್ನಿಸಿತ್ತಂತೆ. ನೀನು ಹಾಡಿದ ಮೇಲೆ ಆಕೆಗೆ ಸರಿಯಾಗಿ ಗೊತ್ತಾಯ್ತಂತೆ. ಆಗ ನೀನು ಚಿಕ್ಕಂದಿನಲ್ಲಿ ಹಾಡಿದ ಪದ್ಯವನ್ನೇ ಸರಿಯಾಗಿ, ಹಾಗೇಯೇ ಹಾಡಿದೆಯಂತೆ. ಆಗ ತಟಕ್ಕನೆ ಆಕೆಯ ನೆನಪಿಗೆ ಬಂತಂತೆ"—ಎಂದು ತಿಳಿಸಿದರು.

ಆಕೆಯ ಗಂಡನಿಗೆ ತಹಸಿಲ್ದಾರ್‌ಗಿರಿ ಬಂದಿತು. ನಮ್ಮ ತಾಯಿಯವರು ಈ ವಿಷಯವನ್ನು ತಿಳಿಸಿದ ಮರುದಿನವೇ ಅವರು ಮನೆ ಖಾಲಿ ಮಾಡಿ ಹೊರಟುಹೋಗಿಬಿಟ್ಟರು.

ಆ ದಿನ ನಾನು ಊರಲ್ಲಿರಲಿಲ್ಲ.

೪

ಆ ಮೇಲೆ ಮೂರು ವರ್ಷಗಳ ಬಳಿಕ ನಾನು ಆ ಉದ್ಯೋಗವನ್ನು ತೊರೆದು ನಮ್ಮೂರಿಗೆ ಸೇರಿಕೊಂಡೆ. ಆಕೆಯ ತಮ್ಮ, ಆತನ ಕುಟುಂಬ ಆ ರಾಮರಾಯರ ಮನೆಯಲ್ಲಿಯೇ ಬಾಡಿಗೆಗಿದ್ದಾರೆ. ಅವರ ವಿಷಯವನ್ನು ದಿನವೂ ಮಾತನಾಡಿಕೊಳ್ಳುತ್ತಲೇ ಇರುತ್ತೇವೆ. ತಿಳಿದು ಬಂದದ್ದೇನೆಂದರೆ—ಆಕೆ ಪುನಃ ಗರ್ಭಿಣಿಯಾಗಿರುವಳೆಂತಲೂ ತಮ್ಮ ಅಕ್ಕನನ್ನು ಹೆರಿಗೆಗೆ ಮನೆಗೆ ಕರೆದುಕೊಂಡು ಬರುತ್ತಾನೆಂತಲೂ. ಐದನೆಯ ತಿಂಗಳಲ್ಲಿ ಸಾಧ್ಯವಾಗಲಿಲ್ಲ. ಏಳನೆಯ ತಿಂಗಳಿಗೆ ಕರೆತರಲಿಲ್ಲ. ಒಂಬತ್ತನೆಯ ತಿಂಗಳು ತಾಯಿಯ ಕಾಟ ತಾಳಲಾರದೆ ಕರೆದುಕೊಂಡು ಬಂದನಂತೆ. ಆಕೆಗೆ 'ದಿನ'ದಲ್ಲಿತ್ತಂತೆ. ಮೂರನೆಯ ದಿನ ರಾತ್ರಿ ಆಕೆಗೆ ಬೇನೆ ಕಾಣಿಸಿಕೊಂಡಿತ್ತಂತೆ. ಡಾಕ್ಟರನ್ನು ಕರೆದುಕೊಂಡು ಬಂದು ಆ ರಾತ್ರಿ ಹೇಗೋ ಕಳೆಯಿತಂತೆ.

ಆ ಮೇಲೆ ಎರಡು ದಿನಗಳ ವರೆಗೆ ಆಕೆಯ ಸ್ಥಿತಿ 'ತೇಲುಗಣ್ಣು ಮೇಲುಗಣ್ಣು' ಎಂಬಂತಿತ್ತು. ಹೆರಿಗೆ ಸಂಬಂಧವಾದ ವ್ಯಾಧಿಯಲ್ಲ. ಬೇರೆಯೇ ಯಾವುದೋ ವ್ಯಾಧಿ. ಅಕ್ಕಪಕ್ಕದ ಮನೆಗಳವರೆಲ್ಲರೂ ನೋಡಿಕೊಂಡು ಬರಲು ಹೋದರು. ನಾನೂ ಹೋದೆ. ಹೋದ ನಿಮಿಷದಲ್ಲಿಯೇ ಆಕೆಯ ಪ್ರಾಣೋತ್ಕ್ರಮಣ ಸಮಯವಾಯಿತು. ಕಳಗಿಳಿಸಲು ಯಾರೂ ಇಲ್ಲ. ಗಂಡನಿಗೆ ಟೆಲಿಗ್ರಾಂ ಕೊಟ್ಟರು. ಬರಲಿಲ್ಲ. ನಾನೂ ಆಕೆಯ ತಮ್ಮನೂ ಹಿಡಿದುಕೊಂಡು ಕೆಳಗಿಳಿಸಿದೆವು.

ಮರುದಿನ ಹೊರಲು ಯಾರೂ ಬರಲಿಲ್ಲ, ಎರಡು ಜೀವ. ಎಲ್ಲರಿಗೂ ಅಶುಭವೇ. ನಾನು ಸಹ ವಾಹಕರಲ್ಲೊಬ್ಬನಾದೆ. ಸಂಜೆ ನಕ್ಷತ್ರ ದರ್ಶನಮಾಡಿ ಊಟಮಾಡಿದೆ.

೫

ಆ ರಾತ್ರಿ ಒಂದು ಕನಸು ಬಿತ್ತು. ಆಕೆ ಹತ್ತು ವರ್ಷದ ಹುಡುಗಿ. ನಾನು ಹದಿನಾರರ ಹುಡುಗ. ಅವರ ಮನೆಯಲ್ಲಿ ನಾನು ಪದ್ಯಗಳನ್ನು ಓದಿದೆ. ಆ ಹುಡುಗಿ ಸೀಮೆ ಮೆಣಸಿನಕಾಯನ್ನು ತಂದುಕೊಟ್ಟು ತಿನ್ನು ಎಂದಳು. ತಿಂದೆ. ಬಾಯೆಲ್ಲ ಉರಿಯಿತು. ಅಳುತ್ತಾ ನಿದ್ದೆಯಿಂದೆದ್ದೆ. ನಿದ್ದೆಯಲ್ಲಿ ಗೊರಕೆ ಹೊಡೆಯುತ್ತ ಬಾಯ್ತೆರೆದುಕೊಂಡು ಮಲಗಿದ್ದೆನೋ ಏನೋ? ದೀಪದ ಹುಳ ನಾಲಗೆಯ ತುದಿಗೆ ಎರಗಿತ್ತು. ಭುಗ್ಗೆಂದು ಉರಿಯಿತು. ನಿದ್ದೆಯಿಂದೆಚ್ಚರವಾಗುತ್ತಲೇ ತಿಳಿಯಿತು, ನಾಲಗೆಯ ತುದಿಯಲ್ಲೇ ಅಲ್ಲದೆ ತುಟಿಯ ಮೇಲೆ ಕೂಡಾ ಹುಣ್ಣಾಗಿದೆ. ಆ ಹುಣ್ಣು ಸರಿಯಾಗಿ ಹತ್ತು-ಹನ್ನೆರಡು ದಿನಗಳ ತನಕ ಮಾಯಲಿಲ್ಲ. ಅನ್ನವನ್ನುಣ್ಣಗೊಡಲಿಲ್ಲ.

*

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ಹೊಲಬು
(ಅ) ಹೊಲಸು ಕೇರಿ (ಆ) ಕೃಷಿ (ಇ) ಕೆಟ್ಟಮಾತು (ಈ) ಸ್ಥಿತಿ

೨. ಸಂಮಾರ್ಜನ
(ಅ) ಗುಡಿಸುವಿಕೆ (ಆ) ಚಿಮುಕಿಸುವಿಕೆ (ಇ) ಗೌರವ (ಈ) ಒತ್ತೊತ್ತಾಗಿ ಸೇರಿಸು

೩. ಅವ್ಯಕ್ತ
(ಅ) ಮೌನ (ಆ) ಅಸ್ಪಷ್ಟ (ಇ) ಹೇಳಲಾರದ್ದು (ಈ) ಸುಲಭ

೪. ನಮಲು
(ಅ) ಹೊರಳು (ಆ) ನಮಸ್ಕರಿಸು (ಇ) ಜಗಿ (ಈ) ಬಗ್ಗಿಸು

೫. ಮರೀಚಿಕೆ
(ಅ) ಮೆಣಸು (ಆ) ಬಿಸಿಲುಗುದುರೆ (ಇ) ಸಣ್ಣ ಪ್ರಾಣಿ (ಈ) ಮಿಕ

೬. ಭವಿತವ್ಯತೆ
(ಅ) ಸಂಸಾರ (ಆ) ಅದೃಷ್ಟ (ಇ) ಸುಂದರವಾದದು (ಈ) ತಿಳಿವಳಿಕೆ

೭. ಪ್ರೋಕ್ಷಣೆ
(ಅ) ಕಳಿಸುವಿಕೆ (ಆ) ಮುನ್ನೋಟ (ಇ) ಸಿಂಪಡಿಸುವುದು (ಈ) ಕುಡಿಯುವುದು

೮. ಪ್ರಸಾಧನ
(ಅ) ಅಲಂಕಾರ (ಆ) ಕೊಲೆ (ಇ) ದೇವರಿಗಿಟ್ಟ ಎಡೆ (ಈ) ಸಂತೋಷ

೯. ಅಂಜಲಿ
(ಅ) ಹೇಡಿ (ಆ) ಸ್ನಾನ (ಇ) ಕಾಡಿಗೆ (ಈ) ಬೊಗಸೆ

೧೦. ಅಪದೇಶ
(ಅ) ದುರುಪದೇಶ (ಆ) ಕೊಡುವಿಕೆ (ಇ) ಕಲಿಹಾಕುವಿಕೆ (ಈ) ನೆವ

೧೧. ಉಪೇತ
(ಅ) ಒಡಗೂಡಿದ (ಆ) ದೂರಸರಿಯುವಿಕೆ (ಇ) ಜನಿವಾರ (ಈ) ಸಿಕ್ಕಿದ

೧೨. ಸಮಸ್ಕಂಧ
(ಅ) ಒಂದು ದೇಶ (ಆ) ಒಗಟು (ಇ) ಒಂದೇ ಯೋಗ್ಯತೆಯು (ಈ) ಒಗ್ಗಟ್ಟು

# ' ಶಬ್ದಭಾಂಡಾರ ' ದ ಸರಿಯಾದ ಅರ್ಥಗಳು

೧. **ಹೊಲಬು** (ಈ) ಸ್ಥಿತಿ, ಪರಿಸ್ಥಿತಿ, ಅವಸ್ಥೆ; ರೀತಿ, ಕ್ರಮ; ಯೋಗ್ಯರೀತಿ. ಉದಾ— ಹೊಲಬನ್ನೆಲ್ಲ ಹೇಳಿಕೊಂಡ; ಹೊಲಬನ್ನರಿಯದೆ ಹೇಳಿದ ಉಪದೇಶ ವ್ಯರ್ಥ. ಹೊಲಬುಗೆಡುವುದು ಎಂದರೆ ದಿಕ್ಕುತಪ್ಪಿ ಗಾಬರಿಗೊಳ್ಳುವುದು. [ಕನ್ನಡ]

೨. **ಸಂಮಾರ್ಜನ** (ಅ) ಗುಡಿಸುವಿಕೆ, ಉಡುಗುವುದು, ಸ್ವಚ್ಛವಾಗಿಸುವಿಕೆ, ಉಜ್ಜುವಿಕೆ, ತೊಡೆದು ಹಾಕುವುದು; ಮೂರ್ತಿಗಳ ಅಭಿಷೇಕ. [ಸಂ. ಸಂ= ಸುತ್ತಲೂ, ಮಾರ್ಜನ= ತೊಳೆಯುವುದು]

೩. **ಅವ್ಯಕ್ತ** (ಅ) ಅಸ್ಪಷ್ಟ, ಸ್ಪಷ್ಟವಾಗಿ ಕಾಣದ, ಕೇಳದ, ಅಥವಾ ತಿಳಿಯದ. ಉದಾ:— ಅವ್ಯಕ್ತ ನಾದವೊಂದು ಅವನನ್ನು ವಿಚಲಿತಗೊಳಿಸಿತು. [ಸಂ. ಅ= ಇಲ್ಲ, ವ್ಯಕ್ತ = ಸ್ಪಷ್ಟ]

೪. **ನಮಲು** (ಇ) ಜಗಿ, ಅಗಿ, ಮೆಲುಕಾಡಿಸು. [ಕನ್ನಡ]

೫. **ಮರೀಚಿಕೆ** (ಅ) ಬಿಸಿಲುಗುದುರೆ, ಮೃಗತೃಷ್ಣೆ, ಮರುಭೂಮಿಯಲ್ಲಿ ಸಾಗುವಾಗ ಎದುರಲ್ಲಿ ನೀರು ಕಂಡಂತೆ ಆಗುವ ಭ್ರಮೆ. [ಸಂ]

೬. **ಭವಿತವ್ಯತೆ** (ಅ) ಅದೃಷ್ಟ, ಆಗಲೇಬೇಕಾದ್ದು. ಉದಾ:—ಭವಿತವ್ಯತೆಯೇ, ತಥಾಸ್ತು ಎನ್ನು (ಬೇಂದ್ರೆ) [ಸಂ.]

೭. **ಪ್ರೋಕ್ಷಣೆ** (ಇ) ಸಿಂಪಡಿಸುವುದು, ಮಂತ್ರದೊಡನೆ ನೀರು ಚಿಮುಕಿಸಿ ಶುದ್ಧಿ ಮಾಡುವುದು; ಬಲಿಕೊಡುವಿಕೆ [ಸಂ. ಪ್ರ = ಹೆಚ್ಚಾಗಿ, ಉಕ್ಷಣೆ = ಒದ್ದೆ ಮಾಡುವಿಕೆ]

೮. **ಪ್ರಸಾಧನ** (ಅ) ಅಲಂಕಾರ, ಸಿಂಗರಿಸಿಕೊಳ್ಳುವಿಕೆ; ವ್ಯವಸ್ಥೆ ಮಾಡಿಕೊಳ್ಳುವುದು; ಶೃಂಗಾರಸಾಮಗ್ರಿ. [ಸಂ. ಪ್ರ = ಹೆಚ್ಚಿನ, ಸಾಧನ = ವ್ಯವಸ್ಥೆ]

೯. **ಅಂಜಲಿ** (ಈ) ಬೊಗಸೆ, ಕೈ ಜೋಡಿಸಿ ಹಣೆಗೆತ್ತಿದ ಸ್ಥಿತಿ. ಉದಾ:— ಅಂಜಲಿಬದ್ಧನಾಗಿ ನಿಂತನು ಅಂದರೆ ಕೈಮುಗಿದು ನಿಂತನು. [ಸಂ.]

೧೦. **ಅಪದೇಶ** (ಈ) ನೆವ; ಗುರಿ ಹೊಡೆಯಲು ಒಂದು ಗುರುತು; ಕೀರ್ತಿ; ಕಾರಣಗಳ ವಿವರಣೆ. ಉದಾ:— ಅವಳನ್ನು ಅಪದೇಶವಾಗಿಟ್ಟುಕೊಂಡು ಇವಳಿಗೆ ತಾಕುವಂತೆ ಮಾತಾಡಿದ. [ಸಂ]

೧೧. **ಉಪೇತ** (ಅ) ಒಡಗೂಡಿದ, ಹತ್ತಿರ ಬಂದ, ಇರುವ. ಉದಾ:— ಸಕಲ ಗುಣೋಪೇತನಾದವನು ದೇವರೊಬ್ಬನೇ. [ಸಂ. ಉಪ = ಹತ್ತಿರ, ಇತ = ಬಂದ]

೧೨. **ಸಮಸ್ಕಂಧ** (ಇ) ಒಂದೇ ಯೋಗ್ಯತೆಯ, ಸಮಾನ ಸಾಮರ್ಥ್ಯದ, ಓರಗೆಯ. ಉದಾ— ಈ ಕಾಳಗ ಇಬ್ಬರು ಸಮಸ್ಕಂಧರೊಳಗಾಯಿತು. [ಸಂ. ಸಮ, ಸ್ಕಂಧ = ಹೆಗಲು]

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ | ಸರಿಯಿದ್ದರೆ | ... ಸಾಧಾರಣ |
| ೯—೧೦ | ” | ... ಉತ್ತಮ |
| ೧೧—೧೨ | ” | ... ಅತ್ಯುತ್ತಮ |



ಇಟಲಿಯ ವಿಜ್ಞಾನಿಯ
ನಂಬಲಸಾಧ್ಯವಾದ ಸಾಧನೆ

# ಪ್ರಯೋಗ ನಳಿಕೆಯಲ್ಲಿ ಶಿಶು

ಮುರಲೀಧರ

ಭಾರದ್ವಾಜ ಋಷಿ ಆಶ್ರಮದ ಹೊರಗೆ ನಿಂತು ಗಗನವನ್ನು ನೋಡುತ್ತಿದ್ದ. ಒಮ್ಮೆಲೆ ಅವನ ಕಣ್ಣಳವಿನಲ್ಲಿ ಒಂದು ಅನುಪಮ ವಸ್ತು ಬಂತು. ಹೌದು, ಹೆಂಗಸು. ಲೋಕೋತ್ತರ ಸುಂದರಿ. ಆಕಾಶಮಾರ್ಗದಲ್ಲಿ ಸಾಗುತ್ತಿದ್ದಾಳೆ. ಅವಳೊಬ್ಬ ಅಪ್ಸರೆ. ಹೆಸರು ಘೃತಾಚಿ. ಅವಳು ಹತ್ತಿರವೇ ತಲೆಯ ಮೇಲಿಂದ ಹಾಯ್ದು ಹೋಗುತ್ತಿದ್ದಾಗ ಸುದೀರ್ಘ ತಪಸ್ಸಿನಿಂದ ಇಂದ್ರಿಯಗಳನ್ನು ಗೆದ್ದಿದ್ದೇನೆಂದು ಭಾವಿಸಿಕೊಂಡಿದ್ದ ಋಷಿಯ ಮನಸ್ಸು ಚಂಚಲವಾಗಿ ವೀರ್ಯಪಾತವಾಯಿತು. ಭಾರದ್ವಾಜ ತನ್ನ ಸ್ಖಲಿತ ವೀರ್ಯಬಿಂದುವನ್ನು ಲಗುಬಗೆಯಿಂದ ಒಂದು ದೊನ್ನೆಯಲ್ಲಿ ಹಿಡಿದ. ಭಾರದ್ವಾಜ ವಂಶಜರು ಮಹಾ ವೈದ್ಯವಿದ್ಯಾವಿಶಾರದರು. ಯಾವುದೋ ತಂತ್ರದಿಂದ ದೊನ್ನೆಯಲ್ಲಿ ಹಿಡಿದ ವೀರ್ಯವನ್ನಾತ ಜೀವಂತವಾಗಿಟ್ಟ. ಕಾಲಕ್ರಮದಲ್ಲಿ ಅದರಲ್ಲೊಂದು ಭ್ರೂಣೋತ್ಪತ್ತಿಯಾಗಿ ಬೆಳೆಯತೊಡಗಿತು. ಬೆಳೆದು ಗಂಡು ಮಗುವಾಯಿತು. ಅತನೇ ದ್ರೋಣಾಚಾರ್ಯ, ಮುಂದೆ ಪಾಂಡವ ಕೌರವರಿಗೆ ಧನುರ್ವಿದ್ಯಾಚಾರ್ಯನಾದ ಬ್ರಾಹ್ಮಣ.

ಕಥೆ ಬಲು ಸೋಜಿಗವಾಗಿ, ಅಸಾಧ್ಯವಾಗಿ ಕಾಣುತ್ತದೆ. ಆದರೆ ಈಗ ಕೆಲ ವರ್ಷಗಳಿಂದ ಇಟಲಿಯ ವಿಜ್ಞಾನಿ ಪೆಟ್ರುಚಿಯ ಪ್ರಯೋಗಶಾಲೆಯಲ್ಲಿ ಇಂಥದೇ ಸೋಜಿಗವೊಂದು ಪುನಃ ಪುನಃ ಕೃತಿಯಲ್ಲಿ ಇಳಿಯುತ್ತಿದೆ. ಆತ ದೊನ್ನೆಯಲ್ಲಲ್ಲದಿದ್ದರೆ ಅದಕ್ಕಾಗಿಯೆ ತಯಾರಿಸಿಕೊಂಡ ಪ್ರಯೋಗನಳಿಕೆಯಲ್ಲಿ ಮಾನವ ಭ್ರೂಣಗಳನ್ನು ಬೆಳೆಸುತ್ತಿದ್ದಾರೆ. ಕಳೆದ ವರ್ಷ ಅವರು ಒಂದು ಭ್ರೂಣವನ್ನು ೫೮ ದಿವಸಗಳ ವರೆಗೆ ಬೆಳೆಸಿದರು. ಆ ಭ್ರೂಣದ 'ಗರ್ಭಾಧಾನ ಕ್ರಿಯೆ' ಅದೇ ಪ್ರಯೋಗ ನಳಿಕೆಯಲ್ಲಾಯಿತು; ಅದು ಅಲ್ಲೇ ಬೆಳೆಯುತ್ತ ಬಂತು; ಒಂದು ಅದೃಶ್ಯ ಬಿಂದುವೆನಿಸಿದ್ದ ತನ್ನ ಮೂಲ ರೂಪದಿಂದ ಮುಖ್ಯ ಮುಖ್ಯ ಮಾನುಷ ಅಂಗಾಂಗಗಳ ರೂಪರೇಖೆಗಳನ್ನು ರಚಿಸಿಕೊಳ್ಳುತ್ತ ಸುಮಾರು ಎರಡು ತಿಂಗಳಲ್ಲಿ ಭ್ರೂಣವು ಮಾನವ ತಾಯಿಯ ಗರ್ಭಕೋಶದಲ್ಲಾದರೆ ಹೇಗಿರಬಹುದಿತ್ತೋ ಅದೇ ಗಾತ್ರ, ಅದೇ ರೂಪವನ್ನು ಪಡೆಯಿತು. ಡಾ. ಪೆಟ್ರುಚಿಯವರಿಗೆ ಬೇಕಾಗಿದ್ದರೆ ಅವರು ಅದನ್ನು ಇನ್ನೂ ಬೆಳೆಸಿಕೊಳ್ಳಬಹುದಿತ್ತೇನೋ.

ಒಂದು ಮಾತಿನಲ್ಲಿ, ಸಾಕಷ್ಟು ಅನುಕೂಲತೆ ಇದ್ದರೆ, ತಾಯಿಯ ಗರ್ಭದ ಬದಲು ಪ್ರಯೋಗಶಾಲೆಯಲ್ಲಿ ಮಾನವ ಭ್ರೂಣಗಳನ್ನು ಬೆಳೆಸಲು ಸಾಧ್ಯವಿದೆ ಎಂಬ ಮಾತನ್ನು ಡಾ. ಪೆಟ್ರುಚಿ ಸಿದ್ಧಮಾಡಿ ತೋರಿಸಿದ್ದಾರೆ.

ಡಾ. ಡೇನಿಯಲ್ ಪೆಟ್ರುಚಿ ಇಟಲಿಯ ಪ್ರಮುಖ ಸರ್ಜನ್- ವಿಜ್ಞಾನಿಗಳಲ್ಲೊಬ್ಬರು. ಬೊಲೋನಾ ನಗರದ ಈ ೪೦ ವಯಸ್ಸಿನ ವಿಜ್ಞಾನಿ ಇಂದು ನಿರೋಧ ಶಾಸ್ತ್ರ (immunology) ದಲ್ಲಿ ಪ್ರಮುಖ ಸಂಶೋಧಕರೆಂದು ಹೆಸರಾಂತಿದ್ದಾರೆ. ವಾಸ್ತವಿಕವಾಗಿ ನಿರೋಧ ಶಾಸ್ತ್ರದ ಒಂದು ಮುಖ್ಯ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವುದಕ್ಕಾಗಿಯೆ ಡಾ. ಪೆಟ್ರುಚಿ ಈ "ಟೆಸ್ಟ್ ಟ್ಯೂಬ್ ಬೇಬಿ" ಪ್ರಯೋಗಕ್ಕಿಳಿದರು.

ಜೀವಂತ ಮಾನವ ಶರೀರದ ಒಂದು ಗುಣವೆಂದರೆ ಅದು ತನ್ನದಲ್ಲದ ಯಾವುದೇ ಪದಾರ್ಥ ತನ್ನಲ್ಲಿ ಪ್ರವೇಶ ಪಡೆದರೆ ತತ್‌ಕ್ಷಣ ತನ್ನ ಶಕ್ತಿಯನ್ನೆಲ್ಲ ಕೇಂದ್ರೀಕರಿಸಿ ಆ ಆಗಂತುಕ ಪದಾರ್ಥವನ್ನು ನಿರ್ನಾಮ ಮಾಡಲು ಅಣಿಯಾಗುತ್ತದೆ. ಶರೀರವು ತನ್ನದಲ್ಲದ ಪದಾರ್ಥವನ್ನು ತತ್‌ಕ್ಷಣ ಗುರುತಿಸಿ ಅದನ್ನು ಧ್ವಂಸ ಮಾಡಲು ನಿರೋಧಕ ರಾಸಾಯನಿಕಗಳನ್ನು ರಕ್ತದಲ್ಲಿ ಹರಿಯಬಿಡುವುದರಿಂದ ಯಾವ ಹೊರಗಿನ ಪದಾರ್ಥವೂ ಹೋರಾಟವಿಲ್ಲದೆ ನಮ್ಮ ಶರೀರದಲ್ಲಿ ನೆಲೆ ಪಡೆಯಲಾರದು. ಇದು ಶರೀರದ ರಕ್ಷಣೆಗೆ ಅತ್ಯವಶ್ಯಕವಾದ ಗುಣ. ಅದರ ಬಲದಿಂದಲೇ ಶರೀರವು ಹೊರಗಿಂದ ನುಗ್ಗುವ ರೋಗಜಂತುಗಳನ್ನು ಎದುರಿಸಿ ಬಹುತರವಾಗಿ ಗೆಲ್ಲುವುದು. ಅದಿಲ್ಲದಿದ್ದರೆ ನಾವು ರೋಗಾಣುಮಯವಾದ ಈ ಪ್ರಪಂಚದಲ್ಲಿ ಹುಟ್ಟಿದ ಕೆಲ ತಾಸುಗಳಲ್ಲೇ ಸತ್ತು ಹೋದೇವು.

ಆದರೆ ಸರ್ಜನ್ನರಿಗೆ ಮಾತ್ರ ಇದು ದೊಡ್ಡ ತೊಡಕನ್ನು ಉಂಟುಮಾಡಿದೆ. ಶಸ್ತ್ರಚಿಕಿತ್ಸಾ ಶಾಸ್ತ್ರವು ಇಂದು ತುಂಬ ಪ್ರಗತಿ ಹೊಂದಿದೆ; ಮಾನವ ಪ್ರಾಣಿಗಳಲ್ಲಿ ಒಬ್ಬರ ಅಂಗಗಳನ್ನು, ಅವೆಷ್ಟೇ ಸೂಕ್ಷ್ಮವಾಗಿದ್ದರೂ ಇನ್ನೊಬ್ಬರಿಗೆ ಕಸಿ ಮಾಡಬಲ್ಲಷ್ಟು ತಾಂತ್ರಿಕ ಕೌಶಲ್ಯವನ್ನು ಸಂಪಾದಿಸಿದೆ. ಆದರೆ ಶರೀರದ ನಿರೋಧಶಕ್ತಿ ಇದೊಂದನ್ನೂ ಸಫಲವಾಗದಂತೆ ಮಾಡುತ್ತದೆ. ಹೊರಗಿಂದ ತಂದು ಕಸಿ ಮಾಡಿದ ಈ ಅಂಗವನ್ನದು ಶತ್ರುವೆಂದು ಬಗೆದು ಅದನ್ನು ನಾಶ ಮಾಡಿಬಿಡುತ್ತದೆ. ಕಣ್ಣೊಂದನ್ನು ಬಿಟ್ಟರೆ ಉಳಿದ ಯಾವ ಅವಯವವೂ—ಚರ್ಮ ಸಹಿತ—ಒಬ್ಬರ ಶರೀರದ್ದು ಇನ್ನೊಬ್ಬರ ಶರೀರದಲ್ಲಿ (ಆ ಇನ್ನೊಬ್ಬ ಇವನ ಏಕರೂಪ ಅವಳಿ ಅಣ್ಣ ಅಥವಾ ತಮ್ಮನಾಗಿದ್ದ ಹೊರತು) ಬೇರೂರುವುದಿಲ್ಲ. ಇದೊಂದಲ್ಲದಿದ್ದರೆ, ಕೆಟ್ಟುಹೋದ ಹೃದಯ, ಮೂತ್ರಪಿಂಡ, ಯಕೃತ್ ಮೊದಲಾದ ಅವಯವಗಳಿಂದ ಬಳಲುವವರಿಗೆ ಬೇರೆ ಕಾರಣಗಳಿಂದ ಸತ್ತವರ ಸುಸ್ವಸ್ಥ ಹೃದಯಾದಿಗಳನ್ನು ತೆಗೆದು ಕಸಿ ಮಾಡುವ ಮೂಲಕ ಸಾವಿರಾರು ಜೀವಗಳನ್ನುಳಿಸಬಹುದು. ಪ್ಲಾಸ್ಟಿಕ್ ಸರ್ಜರಿಯಲ್ಲಿ—ಅಂದರೆ ಮೈ-ಮುಖಗಳ ಚರ್ಮದ ಮೇಲಿರುವ ವಿಕಾರ ಅಥವಾ ಕಲೆ ಬಿದ್ದ ಭಾಗಗಳನ್ನು ತೆಗೆದು ಸರಿಪಡಿಸುವುದರಲ್ಲಂತೂ ಅದ್ಭುತಗಳನ್ನು ಸಾಧಿಸಬಹುದಿತ್ತು. ಈಗಾದರೆ ಯಾರ ಚರ್ಮದ ವಿಕಾರಗಳನ್ನು ತೆಗೆಯಬೇಕೋ ಅವನ ಮೈಯ ಇತರ ಭಾಗಗಳಿಂದಲೇ ಚರ್ಮವನ್ನು ತೆಗೆದುಕೊಳ್ಳಬೇಕಾಗುವುದಲ್ಲದೆ ಇತರರ ಚರ್ಮ ಹಚ್ಚಿದರೆ ಅದು ಒಣಗಿ ಸತ್ತು ಹೋಗುತ್ತದೆ.

ಆದರೆ ಮಾನವ-ಮಾನವರೊಳಗಿನ ಈ ಅವಯವಾಂತರ ನಿರೋಧ ಯಾವಾಗ ಪ್ರಾರಂಭವಾಗುತ್ತದೆ? ಆದಿಯಿಂದಲೇ ಅಲ್ಲ. ಹಾಗಿದ್ದರೆ ನಾವಾರೂ ಹುಟ್ಟುತ್ತಲೇ ಇರಲಿಲ್ಲ. ಏಕೆಂದರೆ ತಾಯ ಗರ್ಭದಲ್ಲಿ ಹುಟ್ಟಿ ಬೆಳೆಯುತ್ತಿರುವ ಶಿಶುವು ತಾಯಿಯ ಮಟ್ಟಿಗೆ (ಅದರಲ್ಲಿ ತಂದೆಯ ಅರ್ಧಾಂಶ ಇರುವುದರಿಂದ) ಆಗಂತುಕ ಪದಾರ್ಥವೇ ತಾನೆ? ಹಾಗಿದ್ದರೂ ತಾಯಿಯ ಶರೀರ ಅದನ್ನು ನಾಶಪಡಿಸುವುದಿಲ್ಲ. ಈ ವಿಸಂಗತಿಯನ್ನು ಯೋಚಿಸಿ ವಿಜ್ಞಾನಿಗಳು, ಹೊಟ್ಟೆಯಲ್ಲಿ ಬೆಳೆಯುವ ಭ್ರೂಣವನ್ನು ತಾಯಿಯ ಶರೀರವು ಆಗಂತುಕವೆಂದು ಭಾವಿಸದಂಥ ಯಾವುದೋ ಗುಣ ಅದರಲ್ಲಿರಬೇಕೆಂದು ತರ್ಕಿಸಿದರು. ಭ್ರೂಣವು ತಾಯಿಗೆ ಆಗಂತುಕವಲ್ಲ

ದಿದ್ದರೆ ಇತರರಿಗೂ ಆಗಂತುಕವಾಗಿರಲಿಕ್ಕಿಲ್ಲ ಎಂಬ ಊಹೆ ಅನಿವಾರ್ಯವಾಯಿತು.

ಡಾ. ಪೆಟ್ರುಚಿಯವರು ಈ ಊಹೆಯನ್ನನುಸರಿಸಿ ಕೈಕೊಂಡ ಶಸ್ತ್ರಕ್ರಿಯೆಗಳು ಅತ್ಯಂತ ಯಶಸ್ವಿಯಾಗಿವೆ. ಪಿಚುಟರಿ ಗ್ರಂಥಿಯ ವ್ಯಾಧಿಯಿಂದ ಸೊರಗಿ ಕಡ್ಡಿಯಾಗಿ ಹಲ್ಲು ಕೂದಲುಗಳನ್ನೆಲ್ಲ ಕಳೆದುಕೊಂಡವಳೊಬ್ಬಳಿಗೆ ಭ್ರೂಣದ ಪಿಚುಟರಿ ಗ್ರಂಥಿಯನ್ನು ಕಸಿ ಮಾಡಿದಾಗ ಅದು ತನ್ನ ಹೊಸ ಸ್ಥಾನದಲ್ಲಿ ಬೇರೂರಿ ಅವಳು ಚೇತರಿಸಿಕೊಂಡಳು. ಸ್ವತಃ ಪೆಟ್ರುಚಿಯವರು ತಮ್ಮ ಹಿಂಗೈಯ ಚರ್ಮಕ್ಕೆ ಭ್ರೂಣದ ಚರ್ಮವನ್ನು ಕಸಿ ಮಾಡಿಕೊಂಡು ತಮ್ಮ ಯಶಸ್ಸಿನ ಜೀವಂತ ಚಿಹ್ನವನ್ನು ಶರೀರದಲ್ಲೇ ಹೊತ್ತಿದ್ದಾರೆ.

ತಮ್ಮ ನಿರೋಧಶಾಸ್ತ್ರೀಯ ಸಂಶೋಧನೆಗಳ ಸಂಬಂಧದಲ್ಲೇ ಡಾ. ಪೆಟ್ರುಚಿಯವರು ಪ್ರಯೋಗ ನಲಿಕೆಯಲ್ಲಿ ಭ್ರೂಣವನ್ನು ಬೆಳೆಯಲು ಪ್ರವರ್ತಿಸಿದ್ದು. ಈ ಪ್ರಯತ್ನದಲ್ಲಿ ಅವರೇ ಮೊದಲಿಗರಲ್ಲ, ಏಕಮಾತ್ರರೂ ಅಲ್ಲ. ಅಮೇರಿಕದ ಡಾ. ಜಾನ್ ರಾಕ್, ಡಾ. ಲಂಡ್ರಮ್ ಶೆಟಲ್ಸ್ ಮೊದಲಾದವರು ಈ ಹಿಂದೆ ಇಂಥ ಪ್ರಯೋಗಗಳನ್ನು ಮಾಡಿದ್ದರೂ ಭ್ರೂಣವು ಕೆಲವೇ ದಿನಗಳಲ್ಲಿ ಸತ್ತದ್ದರಿಂದ ಇಲ್ಲವೇ ವಿಕಾರವಾಗಿ ಬೆಳೆಯಲಾರಂಭಿಸಿದ್ದರಿಂದ ಅವರು ಪ್ರಯೋಗಗಳನ್ನು ಅಲ್ಲಿಗೇ ಮುಕ್ತಾಯಗೊಳಿಸಬೇಕಾಯಿತು.

ಡಾ. ಪೆಟ್ರುಚಿಯವರಿಗಾದರೂ ಪ್ರಥಮದಲ್ಲೆ ಯಶಸ್ಸು ಸಿಗಲಿಲ್ಲ. ೪೧ ಸಲ ಸೋತು ೪೨ನೇ ಬಾರಿ ಅವರಿಗೆ ಯಶಸ್ಸು ಕೈಗೂಡಿತು.

ಈ ಪ್ರಯೋಗಗಳಿಗಾಗಿ ಅಗತ್ಯ ಅಂಶಗಳನ್ನು ಡಾ. ಪೆಟ್ರುಚಿಯವರು ಮಾನವರಿಂದಲೇ ತೆಗೆದುಕೊಳ್ಳುತ್ತಾರೆ. ಗರ್ಭಕೋಶವನ್ನು ಬೇರೆ ರೋಗಗಳ ದೆಸೆಯಿಂದ ಕತ್ತರಿಸಿ ತೆಗೆಯಬೇಕಾದ ಹೆಂಗಸರಿಂದಲೂ ವೀರ್ಯವನ್ನು ವೀರ್ಯದಾನ ಮಾಡುವ ಗಂಡಸರಿಂದಲೂ ಆರಿಸಿಕೊಳ್ಳುತ್ತಾರೆ. ಹೀಗೆ ತೆಗೆದ ಗರ್ಭಕೋಶದಿಂ ಅವರು ಅಂಡವನ್ನು ತೆಗೆದುಕೊಳ್ಳುತ್ತಾರೆ. ಅದನ್ನು ಅವರು ವಿಶಿಷ್ಟ ಪ್ಲಾಸ್ಟಿಕ್ ಪಾತ್ರದಲ್ಲಿ ಇಡುತ್ತಾರೆ. ಈ ಪಾತ್ರದಲ್ಲಿ ಗರ್ಭಿಣಿಯ ಗರ್ಭಕೋಶದಲ್ಲಿರುವ ಪರಿಸರವನ್ನು ಇದ್ದಕ್ಕಿದ್ದಂತೆ ನಿರ್ಮಿಸುವ ಕಲೆಯನ್ನು ಅವರು ಹಲವು ಸೋಲುಗಳ ನಂತರ ಸಾಧಿಸಿಕೊಂಡಿದ್ದಾರೆ. ಅದೇ ಉಷ್ಣತೆ, ಅಷ್ಟೇ ಒತ್ತಡ, ಅಷ್ಟೇ ಅಂಧಕಾರ (ಒಮ್ಮೆ ಪಾತ್ರೆಯಲ್ಲಿ ಬೆಳಕು ಇದ್ದುದರಿಂದಲೇ ಭ್ರೂಣವು ವಿಕಾರವಾಗಿ ಬೆಳೆ ಯಿತು!), ಅವೇ ರಾಸಾಯನಿಕಗಳು, ಅದೇ ತರದ ಪ್ರಾಣವಾಯು (ಆಮ್ಲಜನಕ) 'ಪೂರೈಕೆ, ಅದೇ ತರದ ಭಿತ್ತಿಗಳು ಅವರ ಪ್ಲಾಸ್ಟಿಕ್ ಪ್ರಯೋಗ ಪಾತ್ರೆಯಲ್ಲಿ ಪುನಃ ಸೃಷ್ಟಿ ಹೊಂದಿರುತ್ತವೆ.

ಈ ಪಾತ್ರದಲ್ಲಿ ಅವರು ಸಾಮಾನ್ಯ ಜೀವನದಲ್ಲಿ ಗರ್ಭೋತ್ಪತ್ತಿ ಕಾಲದಲ್ಲಾಗುವ ಹಾಗೆ ದಾನಿಗಳಿಂದ ಪಡೆದ ಪುರುಷ ವೀರ್ಯವನ್ನು ವಿಸರ್ಜಿತಗೊಳಿಸುತ್ತಾರೆ. ಎಲ್ಲವೂ ಸರಿಹೋದರೆ ವೀರ್ಯದ ಕೋಟ್ಯಂತರ ಬೀಜಗಳಲ್ಲಿ ಯಾವುದಾದರೊಂದು ಆ ಪಾತ್ರದಲ್ಲಿರುವ ಸ್ತ್ರೀ ಬೀಜವನ್ನು ತಲುಪಿ ಅದನ್ನು ಫಲಿತಗೊಳಿಸುತ್ತದೆ.

ಇಲ್ಲಿಗೆ ಗರ್ಭೋತ್ಪತ್ತಿಯಾದಂತಾಯಿತು. ಇಲ್ಲಿಂದ ಮುಂದೆ ಅದರ ಪೋಷಣೆ ಸರಿಯಾಗಿ ಆದರೆ ಅದು ವಿಭಜನ ಕ್ರಮದಿಂದ ಬೆಳೆಯುತ್ತ ಹೋಗುವುದು. ಈ ಪೋಷಣೆಗೆ ಡಾ. ಪೆಟ್ರುಚಿ ನಿರ್ದಿಷ್ಟವಾದ ಉಪಾಯಗಳನ್ನು ರೂಪಿಸಿಕೊಂಡಿದ್ದಾರೆ. ಗರ್ಭದಲ್ಲಿ ದೊರೆಯುವ ಬಗೆಯ ಪೋಷಣೆಯೇ ದೊರೆಯಬೇಕೆಂದು ಅವರು ಸಮಾನ ಅವಸ್ಥೆಯಲ್ಲಿರುವ ಗರ್ಭಿಣಿಯರಿಂದಲೇ ಪ್ಲಾಸ್ಮಾ (ರಕ್ತದಲ್ಲಿರುವ ದ್ರವಾಂಶ)ವನ್ನು ಕೂಡಿಸಿಕೊಂಡು ಬೇರೆ ಬೇ ಯಾಗಿಟ್ಟಿರುತ್ತಾರೆ. ಪ್ರಾಣವಾಯು ಗರ್ಭಜ ಮೊದಲಾದವುಗಳಿಂದ ಯುಕ್ತವಾದ ಪ್ಲಾಸ್ಮಾವನ್ನು ಬಿಂದು ಬಿಂದುವಾಗಿ ಒಳ ದಬಿಡಲಾಗುತ್ತದೆ. ಭ್ರೂಣ ಕಣವು ಅದನ

ಜೀರ್ಣಿಸಿಕೊಂಡು ಬೆಳೆದು ಒಂದರಿಂದೆರಡಾಗಿ ಎರಡರಿಂದ ನಾಲ್ಕಾಗಿ ಒಡೆದು ವೃದ್ಧಿ ಹೊಂದುತ್ತದೆ. ಕೂಡಿ ಬಿದ್ದ ಕಶ್ಮಲವನ್ನು ಹೊರದೂಡಲಿಕ್ಕೂ ಮಾನವ ಗರ್ಭಕೋಶದಲ್ಲಿನ ವ್ಯವಸ್ಥೆಯನ್ನು ಹೋಲುವ ವ್ಯವಸ್ಥೆಯನ್ನೇ ಮಾಡಲಾಗಿದೆ.

ಡಾ. ಪೆಟ್ರುಚಿಯವರ ಕೃತಕ ಗರ್ಭಕೋಶದಲ್ಲಿ ಪ್ರತಿಯೊಂದೂ ನೈಜ ಗರ್ಭಕೋಶದಲ್ಲಾಗುವಂತೆಯೆ ಆಯಿತು. ಇನ್‌ಫ್ರಾ-ರಕ್ತ ಕಿರಣಗಳಿಂದ—ಕತ್ತಲಲ್ಲಿ ಫೋಟೋ ತೆಗೆಯಲು ಇದೇ ಉಪಾಯ—ಪ್ರತಿಯೊಂದು ಸ್ಥಿತ್ಯಂತರ ಮತ್ತು ಬೆಳವಣಿಗೆಯು ಅವಸ್ಥೆಗಳ ಚಿತ್ರಗಳನ್ನವರು ತೆಗೆದಿಡುತ್ತಾರೆ. ಅವರ ೪೨ ನೇ ಪ್ರಯತ್ನದಲ್ಲಿ ಈ ಭ್ರೂಣ ಯಾವೊಂದು ವಿಕಾರ ಇಲ್ಲವೆ ಆತಂಕವಿಲ್ಲದೆ ೫೮ ದಿನಗಳ ವರೆಗೆ ಬೆಳೆಯಿತು. ಭ್ರೂಣವೀಗ ೧.೨ ಅಂಗುಲ ಉದ್ದವಾಗಿತ್ತು. ಮಿದುಳು, ಹೃದಯಾದಿಯಾಗಿ ಸಕಲ ಮುಖ್ಯ ಮಾನವಾಂಗಗಳು ಸೂಕ್ಷ್ಮ ರೂಪದಲ್ಲಿ ರೂಪುಗೊಂಡಿದ್ದವು.

ಈ ನಿಟ್ಟಿನಲ್ಲಿ ಪೆಟ್ರುಚಿಯವರು ಅದರ ಮುಂದಿನ ಬೆಳವಣಿಗೆಗೆ ತಡೆಹಾಕಿದರು. ಬಯಸಿದ್ದರೆ ಅವರು ಅದನ್ನು ಇನ್ನು ಮುಂದೆಯೂ ಬೆಳೆಸಬಹುದಿತ್ತು. ಆದರೆ ಈ ದೈತ್ಯನಿಗೆ ಆಹಾರ ಪೂರೈಸುವುದೊಂದು ಸಮಸ್ಯೆಯಾಯಿತವರಿಗೆ. ಈಗಾಗಲೇ ದಿನಕ್ಕೊಂದು ಗ್ಯಾಲನ್ ಪ್ಲಾಸ್ಮಾವನ್ನು ಅದು ಉಪಯೋಗಿಸುತ್ತಿತ್ತು. ಇನ್ನು ಮುಂದೆ ಅದರ ಬೇಡಿಕೆ ದಿನದಿನಕ್ಕೆ ಹೆಚ್ಚಾಗಲಿತ್ತು. ಅಷ್ಟನ್ನು ತರಲು ಅವರು ಎಲ್ಲಿಂದ ಗರ್ಭಿಣಿಯರನ್ನು ಹುಡುಕಬೇಕು? ಮೇಲಾಗಿ ಅವರ ಮುಖ್ಯ ಉದ್ದೇಶವಾದ "ಕಸಿ"ಗೆ ಬೇಕಾದ ಅವಯವಗಳು ಆಗಲೇ ರೂಪುಗೊಂಡಿದ್ದರಿಂದ ಭ್ರೂಣವನ್ನು ಇನ್ನು ಹೆಚ್ಚು ಬೆಳೆಸುವುದೇನೂ ಆಗತ್ಯವಿರಲಿಲ್ಲ

ಡಾ. ಪೆಟ್ರುಚಿಯವರ ಪ್ರಯೋಗಗಳ ಸುದ್ದಿ ಬೆಳಕು ಕಂಡಾಗ ಧಾರ್ಮಿಕ ವಲಯಗಳಲ್ಲಿ ಒಂದು ಬಗೆಯ ಕೋಲಾಹಲವೇ ಎದ್ದುಬಿಟ್ಟಿತು ರೋಂನ ಪಾದ್ರಿಗಳೂ ಅವರ ಅನುಯಾಯಿಗಳೂ ಅವರ ಮೇಲೆ ಕೆಂಗಣ್ಣು ಬೀರಿದರು. ದೇವರು ಮಾತ್ರವೇ ಮಾಡುವ ಕೃತ್ಯವನ್ನು ಈ ಹುಲುಡಾಕ್ಟರು ತಾನೇ ವಹಿಸಿಕೊಂಡು ಎಂಥ ರಕ್ಕಸರನ್ನು ಸೃಷ್ಟಿಸಲು ಅಣಿಯಾಗಿದ್ದಾನೋ ಎಂದು ಪ್ರಶ್ನಿಸಲಾಯಿತು.

ಈ ಧಾರ್ಮಿಕ ಜನರ ಭಯಗಳು ಎಷ್ಟು ಮಟ್ಟಿಗೆ ನಿಜವಾಗುವವೋ ಭವಿಷ್ಯತ್ತೇ ನಿರ್ಧರಿಸಬೇಕು. ಅವರ ಭಯ ಅಕಾರಣವಲ್ಲ ಎಂಬುದು ನಿಶ್ಚಿತ. ಈ ಶೋಧಗಳ ದುರುಪಯೋಗ ಆಗಲಿಕ್ಕಿಲ್ಲವೆಂದು ಹೇಳುವವರು ಮಾನವನ ಇತಿಹಾಸವನ್ನು ಕಡೆಗಣಿಸಿದವರೇ ಇರಬೇಕು.

ಆದರೆ ಜೀವವಿಜ್ಞಾನಿಗಳು ಈ ಸಾಹಸವನ್ನು ಸ್ವಾಗತಿಸುತ್ತಾರೆ. ಅದು ಅವರಿಗೆ ಈ ವರೆಗೆ ಅರ್ಥವಾಗದ ಅನೇಕ ಸಮಸ್ಯೆಗಳ ಮೇಲೆ ಬೆಳಕು ಬೀಳಲು ದಾರಿ ಮಾಡಿಕೊಡಬಲ್ಲದು.

ಮೊದಲನೆಯದಾಗಿ ಗರ್ಭೋತ್ಪತ್ತಿಯಲ್ಲಿ ಯಾವ ಪರಿಸರ ಹೆಣ್ಣಿನ ಉತ್ಪತ್ತಿಗೆ, ಯಾವುದು ಗಂಡಿನದಕ್ಕೆ ಕಾರಣವಾಗುತ್ತದೆ? ಪುರುಷವೀರ್ಯದಲ್ಲಿ ಎರಡು ಬಗೆಯ ಬೀಜಗಳಿದ್ದು ಒಂದು ಹೆಣ್ಣಿಗೂ (X) ಇನ್ನೊಂದು ಗಂಡಿಗೂ (Y) ಕಾರಣವಾಗುತ್ತದೆಂದು ವಿಜ್ಞಾನಕ್ಕೆ ಗೊತ್ತಿದೆ. ಆದರೆ ವಿಶಿಷ್ಟ ಪ್ರಕರಣದಲ್ಲಿ ಗಂಡು ಕಣವೇ ಏಕೆ ಅಂಡವನ್ನು ಫಲಿತಗೊಳಿಸುತ್ತದೆ, ಬೇರೆ ಸಮಯದಲ್ಲಿ ಹೆಣ್ಣೇ ಏಕೆ? ಪೆಟ್ರುಚಿಯವರೀಗ ಗರ್ಭಾಧಾನ ಮತ್ತು ಭ್ರೂಣಾಭಿವೃದ್ಧಿಯನ್ನು ಕೃತಕ ಪರಿಸರದಲ್ಲಿ ಪರೀಕ್ಷಿಸಲನುಕೂಲವಾಗಿ ಮಾಡಿರುವುದರಿಂದ ಈ ಸಮಸ್ಯೆ ಬೇಗನೆ ಉತ್ತರವನ್ನು ಕಾಣಬಹುದು. ಈ ಗುಟ್ಟು ತಿಳಿದರೆ ಸಾಕು-ಪ್ರಾಣಿಗಳಲ್ಲಿ ತಮಗೆ ಬೇಕಾದಂತೆ ಗಂಡೇ ಅಥವಾ ಹೆಣ್ಣೇ ಹುಟ್ಟುವಂತೆ ಮಾಡಬಹುದೆಂದು ಪಶುಸಂಗೋಪನ ವೃತ್ತಿಯವರು ಪೆಟ್ರುಚಿಯವರ ಪ್ರಯೋಗಗಳನ್ನು ಆಸ್ಥೆಯಿಂದ ನೋಡು

ತ್ತಾರೆ.

ಅದರಂತೆ "ನಿರೋಧ"ವು ಹೇಗೆ ಬೆಳವಣಿಗೆ ಹೊಂದುತ್ತದೆ? ಎಂಬ ಪ್ರಶ್ನೆಗೂ ಉತ್ತರ ಸಿಗಬಹುದು. ಕೆಲವರು ಕೆಲ ರೋಗಾಣುಗಳಿಗೇ ಏಕೆ ಬಲಿಯಾಗುತ್ತಾರೆ ಮತ್ತು ಕೆಲವರಿಗೆ ಆ ರೋಗಾಣುಗಳು ಏನನ್ನೂ ಮಾಡಲು ಏಕೆ ಸಮರ್ಥವಾಗುವುದಿಲ್ಲ? ತಂದೆ ತಾಯಿಗಳಿಂದ ಭ್ರೂಣವು ಈ ನಿರೋಧ ಗುಣವನ್ನೂ ಪಡೆದು ಬರುವುದೆ? ಬಂದರೆ ಹೇಗೆ?

ಶಸ್ತ್ರಚಿಕಿತ್ಸೆಯಲ್ಲಂತೂ ಹೇಳಲೇ ಬೇಡ. ಬೇಕಾದಷ್ಟು ಕೃತಕ ಭ್ರೂಣಗಳನ್ನು ಬೆಳಸಲು ಸಾಧ್ಯವಾದರೆ ಅನೇಕ ನಿರಾಶೆಗೊಂಡ ರೋಗಿಗಳಿಗೆ "ಕಸಿ" ಮೂಲಕ ಜೀವದಾನವನ್ನೇ ಮಾಡಬಹುದು.

ಆದರೆ ಕೆಲ ಪ್ರಶ್ನೆಗಳು ಹಾಗೆಯೆ ಉಳಿಯುತ್ತವೆ. ಲಿಂಗನಿರ್ಣಯದ ಸಮಸ್ಯೆ ಪರಿಹಾರ ಹೊಂದಿ ಇಷ್ಟವಾದ ಲಿಂಗವನ್ನು ಸಾಧಿಸಲು ಸಾಧ್ಯವಾದರೆ ಅದು ಸಾಕುಪ್ರಾಣಿಗಳಿಗೆಯೆ ಪರಿಮಿತವಾದೀತೇ? ಮನುಷ್ಯರೂ ಅದನ್ನು ಅನುಸರಿಸುವ ಆಮಿಷವನ್ನು ತಾಳಿಕೊಳ್ಳಬಲ್ಲರೆ? ಆಯಾ ಕಾಲದ ಫ್ಯಾಶನ್‌ಗನುಸಾರವಾಗಿ ಎಲ್ಲರೂ ಹೆಣ್ಣನ್ನೇ ಅಥವಾ ಗಂಡನ್ನೇ ಪಡೆಯಲಾರಂಭಿಸಿದರೆ ಉಂಟಾಗುವ ಸಮಸ್ಯೆ ವಿಜ್ಞಾನಿಗಳಿಗೆ ಮೀರಿದ್ದಾಗದೆ? ೫೦ ದಿನಗಳ ಬದಲು ಕೊನೆವರೆಗೂ ಮಕ್ಕಳನ್ನು ಕೃತಕ ಗರ್ಭಕೋಶದಲ್ಲಿ ಬೆಳಸುವ ಸುಲಭೋಪಾಯ ತಿಳಿದರೆ ಭವಿಷ್ಯತ್ತಿನ ಘೃತಾಚಿ ಭಾರದ್ವಾಜರು ಅಸಂಖ್ಯ ದ್ರೋಣರನ್ನು ಹಡೆಯಬಹುದೆ?

ಹಾಗೆಯೆ "ಕಸಿ"ಗಾಗಿ ಭ್ರೂಣಗಳನ್ನು ಬೆಳಸುವುದು ನೀತಿಯೆ? ಅದನ್ನು ಅವಶ್ಯವೆನಿಸಿದಷ್ಟು ಕಾಲ ಬೆಳಸಿ ಆ ಮೇಲೆ ಕೊಲ್ಲುವುದು ಭ್ರೂಣಹತ್ಯೆಯಲ್ಲವೆ? *



ಬರ್ನಾರ್ಡ್ ಶಾರೊಮ್ಮೆ ಏನೊ ತುಸು ಜಡ್ಡಾಗಲು ಡಾಕ್ಟರರನ್ನು ಮನೆಗೆ ಕರೆಯಿಸಿದರು. ತೇಕುತ್ತಲೇ ಬಂದು ಡಾಕ್ಟರರು "ಉಶ್! ಮಾಳಿಗೆಯ ಮೆಟ್ಟಿಲುಗಳನ್ನೇರಿ ಬರುವಷ್ಟರಲ್ಲಿ ಸಾಕುಸಾಕಾಗಿ ಹೋಯಿತು" ಎಂದರು. ಶಾರು ಕನಿಕರದಿಂದ ಅವರನ್ನು ಆರಾಮ ಖುರ್ಚಿಯಲ್ಲಿ ಮಲಗಿಸಿ ತಮ್ಮ ಪೆಟ್ಟಿಗೆಯಿಂದ ಒಂದು ಔಷಧಿ ತೆಗೆದು "ಇದನ್ನು ಕುಡಿಯಿರಿ, ಆರಾಮೆನಿಸುವುದು" ಎಂದರು.

ಡಾಕ್ಟರರು ಔಷಧಿ ಕುಡಿದರು. ಶಾ ಕೋಣೆಯಲ್ಲಿ ಶತಪಥ ಹಾಕುತ್ತ ಗಂಭೀರ ಸ್ವರದಲ್ಲಿ ಹೇಳಿದರು: "ಡಾಕ್ಟರರೇ, ಮೆಟ್ಟಿಲು ಹತ್ತಿದ್ದರಿಂದ ನಿಮಗೆ ದಣಿವಾಗಲಿಲ್ಲ. ನೀವು ಬಹುಶಃ ರಕ್ತಹೀನ ಆಹಾರ ತಿನ್ನುತ್ತಿರಬೇಕು. ಹಣ್ಣು ಮತ್ತು ಬೇಯಿಸಿದ ಕಾಯಿಪಲ್ಲೇ ತಿನ್ನಿರಿ. ತುಸು ವ್ಯಾಯಾಮ ಮಾಡಿರಿ. ನಿಮ್ಮ ದುಪ್ಪಟ್ಟು ವಯಸ್ಸಾದರೂ ನಾನು ಆರೋಗ್ಯದಿಂದಿದ್ದೇನೆ." ಆಮೇಲೆ ವಿಜಯಿಯ ವ್ಯಂಗ್ಯ ಭಾವದಿಂದ "ಈ ಸಲಹೆಗಾಗಿ ಐದು ಶಿಲಿಂಗ್ ಫೀ ಕೊಡಿ" ಎಂದರು.

ಡಾಕ್ಟರರು ಆಗ "ನೀವೇ ಫೀ ಕೊಡಬೇಕು ತನ್ನಿ ಎರಡು ಪೌಂಡು" ಎಂದರು.

"ಆದರೆ ಚಿಕಿತ್ಸೆ ಮಾಡಿದವನು ನಾನು" ಶಾ ಆಶ್ಚರ್ಯದಿಂದ ಹೇಳಿದರು.

"ಊಹುಂ. ನನ್ನ ಚಿಕಿತ್ಸಾ ಪದ್ಧತಿ ಇದು. ರೋಗಿಯ ಮನೆಗೆ ಹೋದಕೂಡಲೆ ನಾನೇ ರೋಗಿಯಾಗುತ್ತೇನೆ. ನನ್ನೊಡನೆ ತನ್ನನ್ನು ಹೋಲಿಸಿಕೊಂಡು ರೋಗಿ ತನ್ನ ರೋಗದಿಂದ ಮುಕ್ತನಾಗಿಬಿಡುತ್ತಾನೆ" ಡಾಕ್ಟರರು ಮುಗುಳ್ನಗುತ್ತ ನುಡಿದರು.

# ಯಹೂದ್ಯ ಸೈನ್ಯಾಧಿಕಾರಿಯ ದುರಂತ ದುಃಖ



ಎಂ. ಎನ್. ಮಹಿಷಿ,
ಬಿ ಎ., ಎಲಿಲ್. ಬಿ.

ವರಿಷ್ಠರ ಆಜ್ಞೆಯ ಮೇರೆಗೆ ಬಹು ಮಹತ್ವದ ಹುದ್ದೆಯಲ್ಲಿರುವ ವ್ಯಕ್ತಿಯೊಬ್ಬನನ್ನು ಬಂಧಿಸಿರುವುದು ನಿಜವೆ? ಅವನ ಮೇಲೆ ದೇಶದ್ರೋಹದ ಆರೋಪವಿರಿಸಲಾಗಿದೆ. ಈ ಸಂಗತಿ ನಿಜವೇ ಇದ್ದುದಾದರೆ ಅದರ ಬಗ್ಗೆ ಸರಕಾರ ಇಷ್ಟೊಂದು ಮೌನವಾಗಿರುವುದೇಕೆ? ಈ ಪ್ರಶ್ನೆಗೆ ತಕ್ಷಣ ಉತ್ತರ ದೊರೆಯುವುದೆ ?"

ಅಕ್ಟೋಬರ್ ೨೯, ೧೮೯೪ ರ 'ಲಾ ಲಿಬ್ರೆ ಪರೋಲ್'ನಲ್ಲಿ ದಪ್ಪಕ್ಷರಗಳಲ್ಲಿ ಮುದ್ರಿತವಾಗಿದ್ದ ಈ ಪ್ರಶ್ನೆಮುಂದಿನ ಹನ್ನೆರಡು ವರುಷಗಳಲ್ಲಿ ಫ್ರಾನ್ಸಿನ ಅತ್ಯಂತ ವಿಕಟ ಪ್ರಕರಣಗಳಲ್ಲೊಂದರ ನಾಂದಿಯಾಗಿ ಪರಿಣಮಿಸಿತು. 'ಲಾ ಲಿಬ್ರೆ ಪರೋಲ್' ಆಗ ಫ್ರಾನ್ಸಿನ ಅತ್ಯಂತ ಜನಪ್ರಿಯ ಪತ್ರಿಕೆಗಳಲ್ಲೊಂದೆನಿಸಿತ್ತು; ಮತ್ತು ಅದು ಯಹೂದ್ಯದ್ವೇಷಿಯಾಗಿತ್ತು.

ಅದುವರೆಗೆ ಸರಕಾರದ ಯುದ್ಧ ಮಂತ್ರಿ ಶಾಖೆಯು ಉಚ್ಚಮಟ್ಟದ ರಹಸ್ಯವೆಂದು ಬಗೆದಿದ್ದ ವಿಷಯವೊಂದರ ಸುಳಿವು ಪತ್ರಿಕೆಗೆ ಹತ್ತಿದುದು ವರಿಷ್ಠರನ್ನು ದಂಗುಬಡಿಸಿತು. ಯುದ್ಧ ಮಂತ್ರಿ ಜನರಲ್ ಮರ್ಸಿಯರ್ ಅನಿವಾರ್ಯವಾಗಿ ಹೇಳಿಕೆಯೊಂದನ್ನಿತ್ತು "ಅಲ್ಪ ಮಹತ್ವದವಾದರೂ ರಹಸ್ಯವೆನಿಸಿದ್ದ ಕೆಲವು ಕಾಗದಗಳನ್ನು ವಿದೇಶೀಯರಿಗಿತ್ತ ಸಂಶಯದಿಂದ ಒಬ್ಬ ಸೈನ್ಯಾಧಿಕಾರಿಯನ್ನು ಬಂಧಿಸಲಾಗಿದೆ" ಎಂದು ಒಪ್ಪಬೇಕಾಯಿತು.

ಮುಂದಿನ ನಲವತ್ತೆಂಟು ತಾಸುಗಳಲ್ಲಿಯೇ ಬಂಧಿತ ವ್ಯಕ್ತಿ ಕ್ಯಾಪ್ಟನ್ ಆಲ್ಫ್ರೆಡ್ ಡ್ರೇಫಸ್ ಎಂದು ಫ್ರಾನ್ಸಿನ ಎಲ್ಲ ಪತ್ರಿಕೆಗಳು ಬಹಿರಂಗಗೊಳಿಸಿದವಲ್ಲದೆ ಯುದ್ಧ ಮಂತ್ರಿಶಾಖೆಯನ್ನು ಮನವಾರೆ ತೆಗಳಿದವು.

೧೮೫೯ ರಲ್ಲಿ ಜನಿಸಿದ ಆಲ್ಫ್ರೆಡ್ ಡ್ರೇಫಸ್ ಫ್ರೆಂಚ್ ಸೈನ್ಯದ ಜನರಲ್ ಸ್ಟಾಫಿನಲ್ಲಿಯ ಒಬ್ಬನೇ ಒಬ್ಬ ಯಹೂದ್ಯ. ಅವನ ಮಿತ್ರರು ಆಲ್ಫ್ರೆಡ್ ಸೈನಿಕನಾಗಿಯೆ ಜನ್ಮ ತಳೆದವನೆಂದು ನಂಬುತ್ತಿದ್ದರು. ಆ ವೃತ್ತಿ ಅಷ್ಟೊಂದು ಮೈಗೂಡಿಹೋಗಿತ್ತವನಿಗೆ.

ಸಾಮಾನ್ಯವಾಗಿ ದೇಶದ ಹೆಸರಾಂತ ಮನೆತನಗಳ ಮಕ್ಕಳಿಗೆಂದೇ ಮೀಸಲಾಗಿರುತ್ತಿದ್ದ

ಸೈನ್ಯಾಧಿಕಾರಿಗಳ ವರ್ಗವನ್ನು ಸೇರುವುದು ಅವನಿಗೆ ಸುಲಭವಿರಲಿಲ್ಲ. ಯಹೂದ್ಯನಾಗಿರುವುದಂತೂ ದೊಡ್ಡ ಆತಂಕವಾಗಿದ್ದಿತು. ಆದರೂ ಸ್ವಂತ ಯೋಗ್ಯತೆಯೊಂದರಿಂದಲೇ ಎಲ್ಲವನ್ನೂ ಎದುರಿಸಿ ತನ್ನ ಮೂವತ್ತನೆಯ ವಯಸ್ಸಿನಾಗಲೆ ಅವನು ಸೈನ್ಯದಲ್ಲಿ ಕ್ಯಾಪ್ಟನ್ ಆಗಿದ್ದನು. ನಂತರ ಸೈನ್ಯಾಡಳಿತದ ಕೇಂದ್ರವೆನಿಸಿದ ಜನರಲ್ ಸ್ಟಾಫಿಗೆ ಅವನಿಗೆ ಬಡತಿ ದೊರೆತಾಗ ಅನೇಕರಿಗದು ಸಹನವಾಗಲಿಲ್ಲ. ಯಹೂದ್ಯರು ವಿಶ್ವಾಸಾರ್ಹರೆಂದು ಬಹುಜನ ಹಿರಿ ಅಧಿಕಾರಿಗಳು ಆಗ ತಿಳಿಯುತ್ತಿರಲಿಲ್ಲ.

ಹೀಗಿರಲು ಜರ್ಮನಿಗೂ ಫ್ರಾನ್ಸಿಗೂ ದ್ವೇಷವಿದ್ದ ಆ ಕಾಲದಲ್ಲಿ ಜರ್ಮನ್ ರಾಯಭಾರಿಯ ಸೈನಿಕ ಸಲಹೆಗಾರನು ಇಟಾಲಿಯನ್ ರಾಯಭಾರಿಯ ಸೈನಿಕ ಸಲಹೆಗಾರನಿಗೆ ಬರೆದ ಪತ್ರವೊಂದು ಫ್ರೆಂಚ್ ಗುಪ್ತಚಾರರಿಗೆ ಸಿಕ್ಕಿತು. ಅದರಲ್ಲಿ 'ಡಿ—'ಎಂಬವನಿಂದ ದೊರೆತ ಹನ್ನೆರಡು ನಕಾಶೆಗಳ ಬಗ್ಗೆ ಬರೆಯಲಾಗಿತ್ತು. ಫ್ರೆಂಚ್ ಸೈನ್ಯದ ಕೇಂದ್ರ ಕಚೇರಿಯಿಂದ ಕಳವಾಗಿ ಹೋಗಿದ್ದ ಈ ಹನ್ನೆರಡು ನಕಾಶೆಗಳನ್ನು ಜರ್ಮನರಿಗೊಪ್ಪಿಸಿದ್ದ ಈ 'ಡಿ—' ಯಾರು ಎನ್ನುವುದು ಫ್ರೆಂಚ್ ಅಧಿಕಾರಿಗಳ ತಲೆ ತಿನ್ನಹತ್ತಿತು.

ಇದಾದ ಕೆಲ ದಿನಗಳಲ್ಲಿಯೆ ಫ್ರೆಂಚ್ ತೋಫುದಳಕ್ಕೆ ಸಂಬಂಧಿಸಿದ ಹಲವು ಮಹತ್ವದ ಸಂಗತಿಗಳನ್ನೊಳಗೊಂಡ ಕಾಗದವೊಂದು ಅವನ ಹೆಸರಿಗಿದ್ದುದು ಫ್ರೆಂಚ್ ಗುಪ್ತಚಾರಶಾಖೆಗೆ ದೊರೆಯಿತು. ಬರೆಯಲು ಕೆನೆಬಣ್ಣದ ಗ್ರಾಫ್ ಕಾಗದವನ್ನು ಪಯೋಗಿಸಲಾಗಿತ್ತು. ಅಲ್ಲದೆ ಆ ಪತ್ರದ ಕೊನೆಗೆ "ನಾನು ತರಬೇತಿಗಾಗಿ ಹೊರಟಿದ್ದೇನೆ" ಎಂಬ ವಾಕ್ಯವೊಂದಿತ್ತು.

ಸೈನಿಕ ಗುಪ್ತಚಾರ ದಳದ ಮುಖ್ಯಸ್ಥನಾಗಿದ್ದ ಕರ್ನಲ್ ಜೀನ್ ಸ್ಯಾಂಡ್ಹರ್ ಈ ಪತ್ರವನ್ನು ಕಂಡು ದಂಗುಬಡಿದಂತಾದ. ಸೈನ್ಯದ ಕೇಂದ್ರ ಕಚೇರಿಯ ರಹಸ್ಯ ವಿಷಯಗಳು ಗೊತ್ತಿರುವ ಜನರಲ್ ಸ್ಟಾಫಿನ ಇಲ್ಲವೆ ಜನರಲ್ ಸ್ಟಾಫಿನೊಂದಿಗೆ ನಿಕಟ ಸಂಪರ್ಕವಿರುವ ಅಧಿಕಾರಿಯ ಅಂಗವಿದರಲ್ಲಿರಲೇಬೇಕೆಂದುಕೊಂಡು ಜನರಲ್ ಸ್ಟಾಫಿನ ಅಧಿಕಾರಿಗಳ ಪಟ್ಟಿಯನ್ನು ಅವನು ಪರಿಶೀಲಿಸಲಾರಂಭಿಸಿದ.

ಹೀಗೆ ನೋಡುತ್ತಿರುವಾಗಲೇ ಆ ಪಟ್ಟಿಯಲ್ಲಿ 'ಡಿ' ಅಕ್ಷರದಿಂದ ಪ್ರಾರಂಭವಾಗುವ ಒಂದು ಹೆಸರಿನೆಡೆಗೆ ಅವನ ಲಕ್ಷ್ಯ ಹರಿಯಿತು. ಆ ಹೆಸರೇ ಡ್ರೇಫಸ್—ಕ್ಯಾಪ್ಟನ್ ಆಲ್ಫ್ರೆಡ್ ಡ್ರೇಫಸ್ನದಾಗಿತ್ತು. ಅದನ್ನು ಕಂಡೊಡನೆಯೆ ಗುರುತ್ವಾಕರ್ಷಣೆಯ ತತ್ತ್ವ ಕಂಡುಹಿಡಿದಾಗ ನ್ಯೂಟನ್ನಿಗಾದಷ್ಟು ಆನಂದ ಕ. ಸ್ಯಾಂಡ್ಹರ್‌ನಿಗಾಯಿತು. ಅದಕ್ಕೆ ಎರಡೊಂದು ಕಾರಣಗಳಿದ್ದವು. ಹನ್ನೆರಡು ನಕಾಶೆಗಳನ್ನು ಶತ್ರುವಿಗೊಪ್ಪಿಸಿದ ದೇಶದ್ರೋಹಿಯ ಹೆಸರೂ 'ಡಿ—' ಯಿಂದಲೇ ಪ್ರಾರಂಭವಾಗುತ್ತದೆನ್ನುವುದು ಒಂದಾದರೆ ಡ್ರೇಫಸ್ ಯಹೂದ್ಯನಾಗಿರುವುದು ಇನ್ನೊಂದಾಗಿತ್ತು. ಯಹೂದ್ಯರು ನಂಬುಗೆಗೆ ಅರ್ಹರಲ್ಲವೆಂದು ದೃಢವಾಗಿ ನಂಬಿದವರಲ್ಲಿ ಕ. ಸ್ಯಾಂಡ್ಹರ್‌ನೂ ಒಬ್ಬ. ಡ್ರೇಫಸ್‌ನಿಗೆ ಜನರಲ್ ಸ್ಟಾಫಿಗೆ ಬಡತಿ ದೊರೆತಾಗ ಬಹಿರಂಗವಾಗಿಯೇ ಅಸಮಾಧಾನ ವ್ಯಕ್ತಪಡಿಸಿದವರಲ್ಲಿ ಅವನೂ ಒಬ್ಬನಾಗಿದ್ದ.

ಕೂಡಲೆ ಸ್ಯಾಂಡ್ಹರ್ ಡ್ರೇಫಸ್‌ನಿಗೆ ಸಂಬಂಧಿಸಿದ ಫೈಲನ್ನು ಹೊರತೆಗೆದು ಅವನ ಹಸ್ತಾಕ್ಷರಗಳನ್ನು ಈ ಪತ್ರದಲ್ಲಿಯ ಅಕ್ಷರಗಳೊಂದಿಗೆ ಹೋಲಿಸಿ ನೋಡಿದನು. ಕಾಮಣಿಯಾದವರ ಕಣ್ಣಿಗೆಲ್ಲವೂ ಹಳದಿಯಾಗಿಯೇ ಕಾಣುವಂತೆ ಸ್ಯಾಂಡ್ಹರ್‌ನಿಗೆ ಅವೆರಡೂ ಹಸ್ತಾಕ್ಷರಗಳಲ್ಲಿ ಸಾಕಷ್ಟು ಸಾಮ್ಯ ಕಂಡಿತು.

ಯುದ್ಧಮಂತ್ರಿ ಜ. ಮರ್ಸಿಯರನಿಗೆ ಈ ವಿಷಯ ತಿಳಿಸಲ್ಪಟ್ಟೊಡನೆ ಮರ್ಸಿಯರ್ ಪ್ರಧಾನ ಮಂತ್ರಿ ಚಾರ್ಲಸ್ ಡುಪಾಯ್‌ನೆಡೆಗೆ ನಡೆದನು. ಇಬ್ಬರೂ ಸುದೀರ್ಘವಾಗಿ ಆಲೋಚಿಸಿದ ನಂತರ ಈ ವಾರ್ತೆಯನ್ನು ಕೂಡಲೆ ಹೊರಗೆಡಹುವುದರಿಂದ ಸರಕಾರವನ್ನು ತೆಗಳಲು ವಿರೋಧಿ ಪಕ್ಷಕ್ಕೆ ಅವಕಾಶ ಕಲ್ಪಿಸಿಕೊಟ್ಟಂತಾಗುವುದೆಂದು ಬಗೆದು ಈ ಪ್ರಕರಣದ ಶೋಧನೆ ಪೂರ್ಣ ಮುಗಿದು ಡ್ರೇಫಸ್‌ನಿಗೆ ಅತ್ತಿತ್ತ ತುಸು ಮಿಸುಕಲೂ ಅವಕಾಶವಿಲ್ಲದಂತಾದ ಮೇಲೆಯೇ ಬಹಿರಂಗಗೊಳಿಸುವುದೆಂದು ನಿರ್ಧರಿಸಿದರು.

ಬ್ಯಾಂಕ್ ಡಿ. ಫ್ರಾನ್ಸಿನ ಹಾಗೂ ಪೋಲೀಸ್ ಶಾಖೆಯ ಹಸ್ತಾಕ್ಷರ ತಜ್ಞರಿಗೆ ಅವಸರದ ಕರೆ ಹೋಯಿತು. ಡ್ರೇಫಸ್‌ನ ಹಾಗು ಆ ಪತ್ರದ ಹಸ್ತಾಕ್ಷರಗಳನ್ನು ಪರೀಕ್ಷಿಸಿದ ಅವರಲ್ಲಿ ಅವೆರಡೂ ಒಂದೇ ವ್ಯಕ್ತಿ ಬರೆದದ್ದೆಂಬ ಬಗ್ಗೆ ಒಮ್ಮತವಾಗಲಿಲ್ಲ. ಆದರೆ ತನಗೆ ಬೇಕಾದ ಅಭಿಪ್ರಾಯವನ್ನೇ ಮರ್ಸಿಯರ್ ಅಂಗೀಕರಿಸಿದನು.

ಡ್ರೇಫಸ್ ಅಪರಾಧಿಯೆಂದು ತನ್ನಲ್ಲೇ ನಿರ್ಧರಿಸಿಕೊಂಡು ಮರ್ಸಿಯರ್ ಆ ಪತ್ರದ ಕೊನೆಯಲ್ಲಿದ್ದ 'ನಾನು ತರಬೇತಿಗಾಗಿ ಹೊರಟಿದ್ದೇನೆ' ಎಂಬ ವಾಕ್ಯವನ್ನು ಸಂಪೂರ್ಣ ಕಡೆಗಣಿಸಿಬಿಟ್ಟನು. ನಿಜವಾಗಿ ನೋಡಿದರೆ ಆ ವರುಷ ಡ್ರೇಫಸ್ ತರಬೇತಿಗೆ ಹೋಗಬೇಕಾದುದಿರಲಿಲ್ಲ.

ಡ್ರೇಫಸ್‌ನ ಬಂಧನವೂ ರಹಸ್ಯವಾಗಿಯೇ ನಡೆಯಬೇಕಿತ್ತು. ಆ ಕಾರ್ಯವನ್ನು ಮೇಜರ್ ಡು ಪ್ಯಾಟಿಗೆ ಒಪ್ಪಿಸಲಾಯಿತು. ಡು ಪ್ಯಾಟಿ ತಕ್ಷಣ ತನ್ನ ಕಾರ್ಯಕ್ಕಣಿಯಾದನು. ಇನ್ಸ್‌ಪೆಕ್ಷನ್ನಿಗಾಗಿ ಎಂದು ಡ್ರೇಫಸ್‌ನಿಗೆ ಬರಲು ಹೇಳಿಕಳಿಸಲಾಯಿತು.

ಡ್ರೇಫಸ್ ಸಮಯಕ್ಕೆ ಸರಿಯಾಗಿ ಕಚೇರಿಗೆ ಬಂದ. ಅಲ್ಲಿ ಮೇಜರ್ ಡು ಪ್ಯಾಟಿ ಹಾಗು ನಾಗರಿಕ ವೇಷದಲ್ಲಿದ್ದ ಇತರ ಮೂವರು ಮಾತ್ರ ಇರುವುದು ಕಂಡು ಅವನಿಗೆ ಆಶ್ಚರ್ಯವಾಯಿತು. ನಾಗರಿಕ ವೇಷದಲ್ಲಿರುವವರು ಸೈನಿಕ ಅಧಿಕಾರಿಗಳಂತೂ ಅಲ್ಲವೆಂಬುದು ಸ್ಪಷ್ಟವಿತ್ತು. ಆದರೆ ಪೋಲೀಸ್ ಅಧಿಕಾರಿಗಳೆಂಬುದು ಅವನಿಗೆ ತಿಳಿದಿರಲಿಲ್ಲ. ಡು ಪ್ಯಾಟಿ ಅವನಿಗೆ ಅವರ ಪರಿಚಯವನ್ನು ಮಾಡಿಕೊಡಲಿಲ್ಲ. ತನ್ನ ಬಲಗೈ ಬೆರಳುಗಳಿಗೆ ಗಾಯವಾಗಿದೆಂದು ಹೇಳಿ ತನಗಾಗಿ ಪತ್ರಬರೆಯಲು ಡು ಪ್ಯಾಟಿ ಡ್ರೇಫಸ್‌ನನ್ನು ಕೇಳಿದನು. ಡ್ರೇಫಸ್ ಬರೆಯಲಾರಂಭಿಸಿದ. ಪತ್ರವೇನೋ ಸಾಮಾನ್ಯವಾದುದಿತ್ತು. ಆದರೆ ಅದರ ತುಂಬೆಲ್ಲ ಡು ಪ್ಯಾಟಿಯು ಜರ್ಮನ್ ರಾಯಭಾರಿಯ ಸೈನಿಕ ಸಲಹೆಗಾರನಿಗೆ ಬರೆಯಲಾಗಿದ್ದ ಪತ್ರದಲ್ಲಿಯ ವಾಕ್ಯಗಳನ್ನು ಸೇರಿಸಿದ್ದನು. ಅದಕ್ಕೆ ಡ್ರೇಫಸ್‌ನ ಪ್ರತಿಕ್ರಿಯೆಯೇನಾಗುವುದೆಂದು ಡು ಪ್ಯಾಟಿ ನಿರೀಕ್ಷಿಸುತ್ತಿದ್ದನು. ಡ್ರೇಫಸ್‌ನ ಕೈ ಅದನ್ನು ಬರೆಯುವಾಗ ನಡುಗಬಹುದು, ಅವನ ಮುಖ ಬಿಳುಪೇರಬಹುದು ಎಂದೆಣಿಸಿದ್ದ ಅವನಿಗೆ, ಅಂಥ ಬದಲಾವಣೆಗಳಾವವೂ ಸಂಭವಿಸದಿದ್ದಾಗ ನಿರಾಶೆಯೂ ಆಯಿತು, ಸಿಟ್ಟೂ ಬಂತು. ಒಮ್ಮೆಲೆ ಅವನು ಪತ್ರ ಬರೆಯಲು ಹೇಳುವುದನ್ನು ನಿಲ್ಲಿಸಿ, "ನಿನ್ನನ್ನು ನಾನು ಬಂಧಿಸಿದ್ದೇನೆ. ನೀನು ದೇಶದ್ರೋಹ ಗೈದಿರುವಿ" ಎಂದು ಗದರಿಸಿದನು.

ಇತರ ಮೂವರೂ ಬಂದು ಡ್ರೇಫಸ್‌ನನ್ನು ಸುತ್ತುವರಿದು ನಿಂತರು. ಕತ್ತಲಲ್ಲಿ ಹಾವು ಕಂಡವರಂತೆ ಡ್ರೇಫಸ್ ಪುಟಿದೆದ್ದನು. ಕೋಪೋದ್ರಿಕ್ತನಾದ ಅವನ ಮುಖ ಕೆಂಡ ಕಾರುತ್ತಿತ್ತು; ಧ್ವನಿ ನಡುಗುತ್ತಿತ್ತು. "ನೀವು ಹೊರಿಸಿದ ಈ ಹೀನ ಆರೋಪಕ್ಕೆ ಆಧಾರವೇನು?" ಎಂದವನು ಕೂಗಿದನು.

"ಆಧಾರ ಬೇಕಾದಷ್ಟಿವೆ" ಎಂದುತ್ತರಿಸಿ ಡು ಪ್ಯಾಟಿ ತನ್ನ ಪಿಸ್ತೂಲನ್ನು ಹೊರದೆಗೆದು ಡ್ರೇಫಸ್‌ನೆದುರು ಮೇಜಿನ ಮೇಲಿಟ್ಟು ಅವನನ್ನೇ ಕೆಲ ಕ್ಷಣ ನೋಡುತ್ತ ನಿಂತನು. ಡ್ರೇಫಸ್‌ನಿಗೆ ಆತ್ಮಹತ್ಯೆ ಮಾಡಿಕೊಳ್ಳುವ ಇಚ್ಛೆಯಿಲ್ಲವೆಂಬುದು ಸ್ಪಷ್ಟವಾದಾಗ ಅವನನ್ನು ಸೆರೆಮನೆಗೆ ಸಾಗಿಸಲಾಯಿತು.

ನಂತರ ಸ್ವತಃ ಡು ಪ್ಯಾಟಿಯೇ ಈ ವಿಷಯವನ್ನು ಡ್ರೇಫಸ್‌ನ ಹೆಂಡತಿ ಲೂಸಿಗೆ ತಿಳಿಸಿದಾಗ ಅವಳಿಗೆ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತಾಯಿತು. ಅನಂತರ ಸರ್ಚ್ ವಾರಂಟನ್ನು ತೋರಿಸಿ ಅವನು ಡ್ರೇಫಸ್‌ನ ಮನೆಯನ್ನೆಲ್ಲ ಗುಪ್ತ ಕಾಗದಪತ್ರಗಳಿಗಾಗಿ ಶೋಧಿಸಿದನು. ಆದರೆ ಅಂಥದೇನೂ ಸಿಗಲಿಲ್ಲ.

ಜರ್ಮನ್ನರಿಗಾಗಿ ಗುಪ್ತಹೇರತನ ನಡೆಸಿದುದಕ್ಕಾಗಿ ಡ್ರೇಫಸ್‌ನ ಬಂಧನವಾಗಿದ್ದರೂ ನಿಜವಾಗಿಯೂ ಆ ಕಾರ್ಯದಲ್ಲಿ ತೊಡಗಿದ ವ್ಯಕ್ತಿ ಬೇರೆಯೇ ಆಗಿದ್ದ. ಹಂಗರಿಯ ಸರದಾರನೊಬ್ಬನ ವಂಶಜನಾದ ಕೌಂಟ್ ಫರ್ಡಿನಾಂಡ್ ವಾಲ್ಸಿನ್-ಈಸ್ಟರ್‌ಹೇಜಿ ಮೊದಲು ಆಸ್ಟ್ರಿಯದ ಹಾಗು ನಂತರ ಪೋಪನ ಸೈನ್ಯಗಳಲ್ಲಿದ್ದು ಈಗ ಫ್ರೆಂಚ್ ಸೈನ್ಯದಲ್ಲಿ ಮೇಜರ್‌ನಾಗಿದ್ದ. ಯಾವಾ

ಗಲೂ ದುಂದುಗಾರಿಕೆಯ ಜೀವನವನ್ನೇ ನಡೆಸಿದ್ದ ಅವನಿಗೆ ಹಣದ ಕೊರತೆ ಎಂದೂ ತಪ್ಪಿರಲಿಲ್ಲ. ಸಾಲದ ಹೊರೆ ತಾಳದಾದಾಗ ಅವನು ಜರ್ಮನ್ ರಾಯಭಾರಿಯ ಸೈನಿಕ ಸಲಹೆಗಾರನಾಗಿದ್ದ ಕರ್ನಲ್ ಶ್ವಾರ್ಜಕೋಪೆನ್‌ನೊಡನೆ ಸಂಪರ್ಕ ಬೆಳೆಸಿ ಫ್ರೆಂಚ್ ಸೈನ್ಯಕ್ಕೆ ಸಂಬಂಧಿಸಿದ ಅನೇಕ ಮಹತ್ವದ ಸಂಗತಿಗಳನ್ನು ಪೂರಯಿಸುತ್ತಿದ್ದನು. ಜನರಲ್ ಸ್ಟಾಫಿನಲ್ಲಿ ಅಧಿಕಾರಿಯಾಗಿದ್ದ ಮೇಜರ್ ಹೆನ್ರಿ ಅವನ ತೀರ ಹತ್ತಿರದ ಮಿತ್ರನಾಗಿದ್ದ. ಕೇಂದ್ರ ಕಚೇರಿಯಲ್ಲಿಯ ಮಹತ್ವದ ಸಂಗತಿಗಳೆಲ್ಲವನ್ನೂ ಹೆನ್ರಿಯ ಮೂಲಕ ಈಸ್ಟರ್‌ಹೇಜಿ ದೊರಕಿಸುತ್ತಿದ್ದನು.

ಡ್ರೇಫಸ್‌ನ ಬಂಧನ ಅತ್ಯುಚ್ಚ ಮಟ್ಟದ ರಹಸ್ಯವೆಂದು ಸರಕಾರ ನಿರ್ಧರಿಸಿದ್ದರೂ ಅದನ್ನು ಪತ್ರಿಕೆಯೊಂದಕ್ಕೆ ತಿಳಿಸಿ ಬಹಿರಂಗಪಡಿಸಿದವನು ಮೇಜರ್ ಹೆನ್ರಿಯೆ. ಡ್ರೇಫಸ್ ಬರೆದುದೆಂದು ಹೇಳಲಾಗುತ್ತಿದ್ದ ಪತ್ರ ತನ್ನ ಮಿತ್ರ ಈಸ್ಟರ್‌ಹೇಜಿ ಬರೆದದ್ದೆಂದು ಅದನ್ನು ನೋಡಿದೊಡನೆ ಹೆನ್ರಿ ಗುರುತಿಸಿದ. ಡ್ರೇಫಸ್‌ನ ಹೆಸರೊಮ್ಮೆ ಬಹಿರಂಗಗೊಂಡರೆ ಈಸ್ಟರ್‌ಹೇಜಿಯ ಮೇಲೆ ಸಂಶಯ ಕೂಡ ಬಾರದೆಂದೆಣಿಸಿ ಅವನೀ ಗತ್ತು ಹೂಡಿದ್ದನು.

ಈಗ ಡ್ರೇಫಸ್ ಪ್ರಕರಣ ಸರಕಾರಕ್ಕೆ ಪ್ರತಿಷ್ಠೆಯ ಪ್ರಶ್ನೆಯಾಗಿ ಪರಿಣಮಿಸಿತ್ತು. ಅವನ ಅಪರಾಧದ ಬಗ್ಗೆ ಸಾಕಷ್ಟು ಪುರಾವೆಗಳಿಲ್ಲದಿದ್ದರೂ ಅವನ ವಿಚಾರಣೆಯಾಗಲೇಬೇಕಿತ್ತು. ಡಿಸೆಂಬರ ೪ ರಂದು ಸರಕಾರಿ ವಕೀಲನಾದ ಬೆಕ್ಸನ್ ಡಿ ಆರ್ಮ್ಸವಿಲೆ ಸೈನಿಕ ನ್ಯಾಯಾಲಯಕ್ಕೆ ಡ್ರೇಫಸ್ ಪ್ರಕರಣವನ್ನು ಸಾದರಪಡಿಸಿದನು. ತನ್ನಲ್ಲಿಯ ಪುರಾವೆ ಯಾತಕ್ಕೂ ಸಾಲದೆಂಬುದು ಅವನಿಗೆ ಗೊತ್ತಿತ್ತು. ಜರ್ಮನ್ ರಾಯಭಾರಿಯ ಸೈನಿಕ ಸಲಹೆಗಾರ ಶ್ವಾರ್ಜ್‌ಕೋಪೆನ್‌ನಿಗೆ ಡ್ರೇಫಸ್ ಬರೆದುದೆಂದು ಹೇಳಲಾಗುತ್ತಿದ್ದ ಕೆನೆಬಣ್ಣದ ಕಾಗದವೊಂದೇ ಹೇಳಿಕೊಳ್ಳುವಂತಹ ಪುರಾವೆಯಾಗಿತ್ತು. ಫ್ರೆಂಚ್ ಪಿನಲ್ ಕೋಡಿನ ೧೧೧ ನೆಯ ಕಲಮಿನನ್ವಯ ಆರೋಪಿಯ ವಕೀಲನು ಬೇಡಿದರೆ ಪುರಾವೆಯೆಂದು ಹೇಳಲಾದ ಕಾಗದಗಳೆಲ್ಲವನ್ನು ಅವನ ಪರಿಶೀಲನೆಗಾಗಿ ಕೊಡಲೇಬೇಕಿತ್ತು. ಹಾಗಾದದ್ದೇ ಆದರೆ ಕ್ಷಣಾರ್ಧದಲ್ಲಿ ಡ್ರೇಫಸ್‌ನ ಮೇಲಿನ ಆರೋಪ ಕರಗಿಹೋಗುವುದೆನ್ನುವುದು ಅವನಿಗೆ ಗೊತ್ತಿತ್ತು. ಆದರೂ ವಿಚಾರಣೆ ನಡೆಸದೆ ಗತಿಯಿರಲಿಲ್ಲ.

ಪತ್ರಿಕೆಗಳಲ್ಲಿ ಡ್ರೇಫಸ್‌ನ ಬಗ್ಗೆ ಅನೇಕಾನೇಕ ಕಪೋಲಕಲ್ಪಿತ ಅತಿರಂಜಿತ ಕತೆಗಳು ನಿತ್ಯವೂ ಪ್ರಕಟವಾಗಿ ದೇಶದ ತುಂಬೆಲ್ಲ ಯಹೂದಿದ್ವೇಷದ ವಿಷವನ್ನು ಪಸರಿಸಿಬಿಟ್ಟಿದ್ದವು. ಇಂಥ ಪರಿಸ್ಥಿತಿಯಲ್ಲಿ ಡ್ರೇಫಸ್‌ನ ವಿಚಾರಣೆ ಮಾತ್ರವಲ್ಲ ಅವನಿಗೆ ಶಿಕ್ಷೆಯೂ ಆಗಲೇಬೇಕಿತ್ತು. ಇಲ್ಲವಾದರೆ ಮಂತ್ರಿಮಂಡಳದ ಅಸ್ತಿತ್ವಕ್ಕೆಯೇ ಧಕ್ಕೆಯಿತ್ತು.

ಕರ್ನಲ್ ಸ್ಯಾಂಡ್ಹರ್ ಪಿನಲ್ ಕೋಡಿನ ೧೧೧ನೆಯ ಕಲಮನ್ನು ನಿಷ್ಕ್ರಿಯಗೊಳಿಸಲು ಯುದ್ಧ ಮಂತ್ರಿಯ ಒಪ್ಪಿಗೆಯಿಂದ ಒಂದು ಉಪಾಯ ಯೋಜಿಸಿದನು. ತಮ್ಮಲ್ಲಿಯ ಪುರಾವೆಯನ್ನೆಲ್ಲ ಸೈನಿಕ 'ರಹಸ್ಯ' ಎಂದು ವರ್ಗೀಕರಿಸಿಬಿಟ್ಟರೆ ಅದಾವುದನ್ನೂ ಆರೋಪಿಯ ವಕೀಲನಿಗೆ ಕೊಡಬೇಕಾದುದಿಲ್ಲ.

ಸಾರ್ವಜನಿಕ ಅಭಿಪ್ರಾಯ ಡ್ರೇಫಸ್‌ನ ಬಗ್ಗೆ ಇಷ್ಟೊಂದು ದೂಷಿತವಾದಾಗ ಅವನ ಪರವಾಗಿ ವಕಾಲತ್ತು ವಹಿಸಲು ವಕೀಲನು ಸಿಕ್ಕುವುದು ಕೂಡ ಕಠಿನವಾಯಿತು. ಕೊನೆಗೆ ಪ್ಯಾರೀಸಿನ ಸುಪ್ರಸಿದ್ಧ ವಕೀಲ ಎಡ್ಗರ್ ಡೆಮಾಂಜ್ ಒಂದು ಕರಾರಿನ ಮೇಲೆ ಒಪ್ಪಿಗೆಯಿತ್ತನು. ಆಲ್ಫ್ರೆಡ್ ಡ್ರೇಫಸ್‌ನೊಡನೆ ಒಮ್ಮೆ ಮಾತನಾಡಿದಾಗ ಅವನ ನಿರಪರಾಧಿತ್ವದ ಬಗ್ಗೆ ತನಗೆ ತುಸುವೂ ಸಂಶಯ ಉಳಿಯಬಾರದು ಎಂಬುದೇ ಅವನ ಕರಾರು.

ಆಗಲೇ ವೃದ್ಧಾಪ್ಯದಲ್ಲಿ ಕಾಲಿರಿಸಿದ್ದ ಡೆಮಾಂಜ್ ಸೆರೆಮನೆಯಲ್ಲಿ ಡ್ರೇಫಸನನ್ನು ಕಂಡನು. ಡ್ರೇಫಸ್ ನಿರಪರಾಧಿಯೆಂದವನಿಗೆ ಖಚಿತವಾಯಿತು. ೧೧೧ ನೆಯ ಕಲಮಿನನ್ವಯ ಸರಕಾರದ ಪುರಾವೆಗಳನ್ನು ಕೇಳಿದಾಗ ಅವನಿಗೆ ದೊರೆತದ್ದು ಕೆನೆಬಣ್ಣದ ಗ್ರಾಫ್ ಕಾಗದದ ಮೇಲೆ ಬರೆಯಲಾದ ಪತ್ರ ಹಾಗು ಪರಸ್ಪರ ಭಿನ್ನಾಭಿಪ್ರಾಯವುಳ್ಳ ಇಬ್ಬರು ಹಸ್ತಾಕ್ಷರ

ವಸಂತಿಯ ಸೌಂದರ್ಯದ ಗುಟ್ಟು...

# ನನ್ನ ಮುಖಕಾಂತಿಗೆ ಲಕ್ಸ್ ಆವಶ್ಯಕ'

ಲಕ್ಸ್ ಸಿನೆಮಾ ತಾರೆಯರ
ಶುದ್ಧ ಹಾಗೂ ಸೌಮ್ಯವಾದ
ಸೌಂದರ್ಯ-ಸೋಪು




'ಕಮನೀಯ ಬಣ್ಣಗಳು... ರಮಣೀಯ ಸೋಪುಗಳು' ಎನ್ನುತ್ತಾಳೆ ಸಿನೆಮಾ ತಾರೆ ಸೌಂದರ್ಯರಾಶಿ ವಸಂತಿ

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

LTS. 122-X29 KN

ತಜ್ಞರ ಅಭಿಪ್ರಾಯಗಳು ಮಾತ್ರ. ಈಗಂತೂ ತನ್ನ ಪಕ್ಷಗಾರ ನಿರ್ದೋಷಿಯೆಂಬುದರಲ್ಲಿ ಅವನಿಗೆ ಎಳ್ಳಷ್ಟೂ ಸಂಶಯವುಳಿಯಲಿಲ್ಲ.

ರು ಚರ್ಚಮಿಡಿಯಲ್ಲಿಯ ಹಳೆಯ ಅಂವನೆಯ ಕೋಣೆಯೊಂದರಲ್ಲಿ ಸೈನಿಕ ನ್ಯಾಯಾಲಯದೆದುರು ಆಲ್ಫ್ರೆಡ್ ಡ್ರೇಫಸ್‌ನ ವಿಚಾರಣೆ ಡಿಸೆಂಬರ್ ೧೯, ೧೮೯೪ ರಂದು ಪ್ರಾರಂಭವಾಯಿತು. ಸಾರ್ವಜನಿಕರಿಗೆ ಮುಕ್ತವಿಲ್ಲವೆಂದು ಮೊದಲೇ ಜಾಹೀರುಪಡಿಸಿದ್ದರಿಂದ ಹೊರಗಿನವರಾರೂ ವಿಶೇಷ ಸಂಖ್ಯೆಯಲ್ಲಿರಲಿಲ್ಲ.

ಕರ್ನಲ್ ಮಾರಿಲ್ ನ್ಯಾಯಮಂಡಲದ ಅಧ್ಯಕ್ಷತೆ ವಹಿಸಿದ್ದನು. ಕ್ಯಾಪ್ಟನ್ ಡ್ರೇಫಸ್ ಸೈನ್ಯಾಧಿಕಾರಿಗೊಪ್ಪುವ ಗಾಂಭೀರ್ಯದಿಂದ ನ್ಯಾಯಾಲಯವನ್ನು ಪ್ರವೇಶಿಸಿದನು. ತನ್ನ ವೃತ್ತಿಬಾಂಧವರೇ ಸುತ್ತಲೂ ಇದ್ದಿರುವುದನ್ನು ಕಂಡು ಅವನಿಗೆ ವಿಶ್ವಾಸವುಂಟಾಯಿತು. ವಿಚಾರಣೆ ಬಹಿರಂಗವಾಗಿ ನಡೆಯಬೇಕೊ ಗುಪ್ತವಾಗಿಯೋ ಎಂಬ ವಿಷಯದ ಬಗ್ಗೆಯೆ ಸುದೀರ್ಘವಾದ ವಿವಾದಗಳು ನಡೆದು ಗುಪ್ತವಾಗಿ ನಡೆಯಬೇಕೆಂಬ ಸರಕಾರಿ ಪಕ್ಷದ ವಾದವನ್ನು ನ್ಯಾಯಮಂಡಳ ಎತ್ತಿಹಿಡಿಯಿತು. ವಕೀಲರು, ಸಾಕ್ಷಿಗಳು, ಯುದ್ಧಮಂತ್ರಿಶಾಖೆಯ ಅಧಿಕೃತ ನಿರೀಕ್ಷಕ ಮೇಜರ್ ಜಾರ್ಜಸ್ ಪಿಕಾರ್ಟ್‌ರನ್ನುಳಿದು ಬೇರೆ ಎಲ್ಲರನ್ನೂ ನ್ಯಾಯಾಲಯದಿಂದ ಹೊರಗೆ ಕಳಿಸಲಾಯಿತು. ಡ್ರೇಫಸ್‌ನ ಇಬ್ಬರು ಸೋದರರು ಕೂಡ ಅನಿವಾರ್ಯವಾಗಿ ಹೊರಬೀಳಬೇಕಾಯಿತು.

ಅಂದು ಕ್ಯಾಪ್ಟನ್ ಡ್ರೇಫಸ್‌ನ ಸಾಕ್ಷಿ ನಡೆಯಿತು. ಕೇಳಿದ ಪ್ರಶ್ನೆಗಳೊಂದೊಂದಕ್ಕೂ ಎಲ್ಲೂ ತಡವರಿಸದೆ ಉತ್ತರಿಸುತ್ತ ಕೆಸೆ ಬಣ್ಣದ ಕಾಗದವನ್ನು ತಾನು ಬರೆದಿರುವುದು ಅದೆಂತು ಅಸಾಧ್ಯ ಎಂಬುದನ್ನವನು ನ್ಯಾಯಮಂಡಳಕ್ಕೆ ಮನಗಾಣಿಸಿಕೊಟ್ಟನು. ಅಲ್ಲದೆ ಆ ಸಲ ತಾನು ಯಾವ ತರಬೇತಿಗೂ ಹೋಗಬೇಕಿರಲಿಲ್ಲವಾದ್ದರಿಂದ 'ನಾನು ತರಬೇತಿಗೆ ಹೋಗುತ್ತಿದ್ದೇನೆ' ಎಂಬ ವಾಕ್ಯವನ್ನು, ಆ ಪತ್ರವನ್ನು ತಾನು ಬರೆದಿದ್ದಾಗಿದ್ದರೆ ಸೇರಿಸಲು ಕಾರಣವೇ ಇರಲಿಲ್ಲ ಎಂದನು. ಅವನ ಸಾಕ್ಷಿ ನ್ಯಾಯಮಂಡಳದ ಮೇಲೆ ಬಹು ಚೆನ್ನಾದ ಪರಿಣಾಮವುಂಟುಮಾಡಿತೆಂಬುದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಇದರಿಂದಾಗಿ ಡ್ರೇಫಸ್‌ನ ಬಿಡುಗಡೆಯಾಗಬಹುದೆಂದೆಣಿಸಿ ಜ. ಮರ್ಸಿಯರ್ ಹಾಗೂ ಕ. ಸ್ಯಾಂಡ್ಹರ್ ಆ ರಾತ್ರಿಯಿಡೀ ಕುಳಿತು ಗುಪ್ತಚಾರ ವಿಭಾಗದಲ್ಲಿ ಪತ್ತೆಯಾಗದೆ ಉಳಿದಿದ್ದ ಎಲ್ಲ ಬೇಹುಗಾರಿಕೆ ಪ್ರಕರಣಗಳನ್ನು ಹುಡುಕಿ ತೆಗೆದು ಪ್ರತಿಯೊಂದರಲ್ಲಿ ಡ್ರೇಫಸ್‌ನ ಅಂಗವಿರುವಂತೆ ಹೆಣೆದರು. ನಂತರ ಜ. ಮರ್ಸಿಯರ್ ಇಡೀ ಫೈಲಿಗೆ ತನ್ನದೊಂದು ಚಿಕ್ಕ ಭಾಷ್ಯ ಬರೆದು ಅದರೊಂದಿಗೆ ನ್ಯಾಯಮಂಡಳದ ಅಧ್ಯಕ್ಷನಿಗೆ ಒಂದು ಪತ್ರವನ್ನಿರಿಸಿದನು. ಅದನ್ನು ಕವರಿನಲ್ಲಿಟ್ಟು ಮುದ್ರೆಯೊತ್ತಿ ಮರುದಿನ ಡುಪ್ಯಾಟಿಯ ಕೈಗಿತ್ತ. ವಿಚಾರಣೆಯನ್ನು ಮುಗಿಸಿ ನ್ಯಾಯಮಂಡಳದ ಸದಸ್ಯರು ತಮ್ಮ ಚೇಂಬರಿಗೆ ಮರಳುತ್ತಿರುವಾಗ ಈ ಕವರನ್ನು ಮಂಡಳದ ಅಧ್ಯಕ್ಷನ ಕೈಗೆ ಯಾರಿಗೂ ತಿಳಿಯದಂತೆ ಡುಪ್ಯಾಟಿ ಕೊಡಬೇಕಿತ್ತು.

ಎರಡನೆಯ ದಿನ ಮೇಜರ್ ಹೆನ್ರಿಯ ಸಾಕ್ಷಿಯಾಯಿತು. ಅವನು ಅತ್ಯಂತ ನಾಟಕೀಯವಾಗಿ 'ಇವನೇ ಆ ದೇಶದ್ರೋಹಿ!' ಎಂದು ಡ್ರೇಫಸ್‌ನೆಡೆಗೆ ಬೆರಳು ತೋರಿಸಿ ಕೂಗಿದನು.

ಸಾಕ್ಷಿಗಳೆಲ್ಲ ಮುಗಿದು ಚೇಂಬರಿನಲ್ಲಿ ನ್ಯಾಯಾಧೀಶರು ಅದರ ಚರ್ಚೆ ಪ್ರಾರಂಭಿಸಿದಾಗ ಯುದ್ಧಮಂತ್ರಿ ಸ್ವತಃ ಸಹಿ ಮಾಡಿ ಕಳಿಸಿದ ಗುಪ್ತಪುಡಿಕೆ ನ್ಯಾಯಮಂಡಳದ ಸದಸ್ಯರ ಮೇಲೆ ಅದ್ಭುತ ಪರಿಣಾಮವುಂಟುಮಾಡಿತು. ಅದರ ಸುಳ್ಳುತನವನ್ನು ಆರೋಪಿಪರ ವಕೀಲನು ಸಹಜವಾಗಿ ಎತ್ತಿತೋರಬಹುದಿತ್ತು. ಅಂತೆಯೆ ಎದುರುಪಕ್ಷದ ವಕೀಲರಿಗೆ ತಿಳಿಯದಂತೆ ಡುಪ್ಯಾಟಿ ಅದನ್ನು ನ್ಯಾಯಮಂಡಳದ ಅಧ್ಯಕ್ಷನಿಗೆ ಮುಟ್ಟಿಸಿದ್ದ.

ಒಂದು ತಾಸು ಚರ್ಚೆಯ ನಂತರ ನ್ಯಾಯಾಧೀಶರು ಮತ್ತೆ ನ್ಯಾಯಾಸ್ಥಾನಕ್ಕೆ ಮರಳಿದಾಗ ಡ್ರೇಫಸ್‌ನ ವಕೀಲ ಡೀಮಾಂಜ್ ತನ್ನ ವಾದವನ್ನು ಪ್ರಾರಂಭಿಸಿ ಸತತವಾಗಿ ಮೂರು ತಾಸುಗಳ ವರೆಗೆ ಮಾತಾಡಿ ಕೆಸೆಬಣ್ಣದ ಕಾಗದದ ಆಧಾರದ ಮೇಲೆಯೆ ಆಧಾರಿತವಾಗಿದ್ದ ಸರಕಾರಿ ಪಕ್ಷದ ವಾದವನ್ನು ಎಳೆಎಳೆಯಾಗಿ ಹಿಂಜಿ

ಹಿಂಜಿ ಖಂಡಿಸಿದನು. ಕೊನೆಯದಾಗಿ ಡ್ರೇಫಸ್ ಎದ್ದು ನಿಂತು, "ನಾನು ನಿರಪರಾಧಿ" ಎಂದನು.

ಆದರೆ ನ್ಯಾಯಾಧೀಶರ ನಿರ್ಣಯ ಒಮ್ಮತದ್ದಾಗಿತ್ತು. ಡ್ರೇಫಸ್ ಅಪರಾಧಿ. ಸೈನ್ಯದಿಂದ ಅವನನ್ನು ಹೊರತಳ್ಳಿ ಫ್ರಾನ್ಸಿನ ಹೊರಗೆಲ್ಲಿಯಾದರೂ ಕೋಟೆಯೊಂದರಲ್ಲಿ ಅವನನ್ನು ಆಜೀವ ಕಾರಾವಾಸದಲ್ಲಿಡಬೇಕೆಂದು ವಿಧಿಸಲಾಗಿತ್ತು.

ಈ ನಿರ್ಣಯವನ್ನು ಕೇಳಿ ದೇಶಕ್ಕೆ ದೇಶವೇ ಹುಚ್ಚೆದ್ದು ಕುಣಿಯಿತು. ಜನವರಿ ೫, ೧೮೯೫ ರಂದು ಸಾವಿರಾರು ಜನರೆದುರಿನಲ್ಲಿ ಡ್ರೇಫಸ್‌ನನ್ನು ಅತ್ಯಂತ ಅಪಮಾನಕಾರಕ ರೀತಿಯಲ್ಲಿ ಸೈನ್ಯದಿಂದ ಹೊರತಳ್ಳಲಾಯಿತು. "ನಾನು ನಿರಪರಾಧಿ. ಫ್ರಾನ್ಸ್ ಚಿರಾಯುವಾಗಲಿ!" ಎಂದು ಡ್ರೇಫಸ್ ನಡುನಡುವೆ ಹೇಳುತ್ತಿದ್ದ. ಅದಕ್ಕೆ ಪ್ರತ್ಯುತ್ತರವೆಂಬಂತೆ ನೆರೆದ ಜನರು "ಕೊಲ್ಲಿರಿ ಆ ಯಹೂದಿಯನ್ನು!" ಎಂದು ಕೂಗುತ್ತಿದ್ದರು.

ಆದರೆ ಯುದ್ಧಮಂತ್ರಿ ಜ. ಮರ್ಸಿಯರ್‌ನಿಗೆ ಸಾಕಷ್ಟು ಪುರಾವೆಗಳಿಲ್ಲದೆ ಡ್ರೇಫಸ್‌ನನ್ನು ಶಿಕ್ಷೆಗೆ ಗುರಿಮಾಡಿದ್ದು ಭಯವುಂಟುಮಾಡಿತ್ತು. ಅವನು ಮತ್ತೊಂದುಪಾಯ ಯೋಚಿಸಿದನು. ಡ್ರೇಫಸ್ ಈ ಅಪರಾಧವನ್ನು ತಾನು ಮಾಡಿರುವುದಾಗಿ ಒಪ್ಪಿಕೊಂಡಲ್ಲಿ ಕಾರಾವಾಸದಲ್ಲಿ ಅವನ ಜೀವನ ಸಹ್ಯವಾಗುವಂತೆ ಅನೇಕ ಸೌಕರ್ಯಗಳನ್ನೊದಗಿಸಲು ಸಿದ್ಧವಿರುವುದಾಗಿ ಹೇಳಿಕಳುಹಿದನು. ಅದಕ್ಕೆ ಡ್ರೇಫಸ್‌ನ ಉತ್ತರವೆಂದರೆ "ನಿಜವಾದ ದೇಶದ್ರೋಹಿಗಾಗಿ ಶೋಧ ಮುಂದುವರಿದು ಅವನಿಗೆ ತಕ್ಕ ಶಿಕ್ಷೆಯಾಗಲೆಂಬುದೊಂದೆ ನನ್ನ ಬೇಡಿಕೆ" ಎಂಬುದು.

ಡ್ರೇಫಸನನ್ನು ಐದು ಸಾವಿರ ಮೈಲು ದೂರದಲ್ಲಿ ಫ್ರೆಂಚ್ ಗಿನಿಯ ಹತ್ತಿರದ ಭೂತದ್ವೀಪ (ಡೆವಿಲ್ಸ್ ಐಲ್ಯಾಂಡ್) ಕ್ಕೆ ಸಾಗಿಸಲಾಯಿತು. ಅಲ್ಲಿ ಸುಭದ್ರವಾದ ಕಲ್ಲಿನ ಕೋಟೆಯೊಂದರಲ್ಲಿಯ ಚಿಕ್ಕ ಕೋಣೆಯಲ್ಲಿಡಲಾಯಿತು. ಅವನನ್ನು ಕಾಯಲು ಹಾಗೂ ಅವನ ಚಲನವಲನಗಳನ್ನು ಕುರಿತು ವರದಿಮಾಡಲು ಐದು ಜನರನ್ನು ನಿಯಮಿಸಲಾಯಿತು. ಯಾರೂ ಅವನೊಂದಿಗೆ ಚಕಾರಶಬ್ದವನ್ನು ಕೂಡ ಮಾತಾಡಕೂಡದೆಂದು ಕಟ್ಟಪ್ಪಣೆಯಾಗಿತ್ತು. ತಾಯ್ನಾಡಿನಿಂದ, ತನ್ನವರಿಂದ ದೂರಗೊಳಿಸಲ್ಪಟ್ಟು ಯಾರದೋ ತಪ್ಪಿಗಾಗಿ ಶಿಕ್ಷೆಯನ್ನನುಭವಿಸುತ್ತ ಡ್ರೇಫಸ್ ಅಸಹ್ಯ ಮಾನಸಿಕ ವೇದನೆಯನ್ನು ಸಹಿಸುತ್ತ ದಿನಗಳೆಯಲಾರಂಭಿಸಿದನು. ನಾಗರಿಕ ಜಗತ್ತಿಗೆ ನ್ಯಾಯ, ಸ್ವಾತಂತ್ರ್ಯಗಳ ಸಂದೇಶವನ್ನಿತ್ತ ತನ್ನ ತಾಯ್ನಾಡು, ತನ್ನ ನಿರಪರಾಧಿತ್ವವನ್ನು ಒಂದಿಲ್ಲೊಂದು ದಿನ ಗುರುತಿಸುವುದೆಂಬ ಅಚಲವಿಶ್ವಾಸವೊಂದೇ ಅವನ ಸಂಗಾತಿಯಾಗುಳಿದು ಭವಿಷ್ಯತ್ತಿನ ಆಸೆ ತೋರುತ್ತಿತ್ತು.

ಆಲ್ಫ್ರೆಡ್ ಡ್ರೇಫಸ್ ಫ್ರಾನ್ಸಿನಿಂದ ಕಣ್ಮರೆಯಾದರೂ ಅವನ ಪ್ರಕರಣವನ್ನು ಜೀವಂತವಿಡುವುದರಿಂದಲೇ ಒಂದಿಲ್ಲೊಂದು ದಿನ ಅವನಿಗೆ ಮುಕ್ತಿ ದೊರೆಯಬಹುದೆಂಬ ಆಶೆಯಿಂದ ಅವನ ಸೋದರ ಮ್ಯಾಥ್ಯೂ ಅದಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದನು. ಸಂದರ್ಭವೂ ಬಂತು.

ಜರ್ಮನ್ ರಾಯಭಾರಿಯ ಸೈನಿಕ ಸಲಹೆಗಾರ ಶ್ವಾರ್ಜಕೋಪೆನ್‌ನ ನಿಕಟ ಪರಿಚಯದ ಮಹಿಳೆಯೊಬ್ಬಳು ಸ್ಪೆಶಲ್ ಡೆಲಿವರಿ ಕಾರ್ಡೊಂದನ್ನು ಈಸ್ಟರ್‌ಹೇಜಿಗೆ ಬರೆದು ಅದನ್ನು ಅಂಚೆಗೆ ಹಾಕಲು ಶ್ವಾರ್ಜಕೋಪೆನ್ ನೆಡೆಗಿತ್ತಳು. ಆ ಕಾರ್ಡು ಫ್ರೆಂಚ್ ಗುಪ್ತಚಾರರ ಕೈಗೆ ಬಿತ್ತು. ಇದು ಮಾರ್ಚ್ ೧೮೯೬ ರಲ್ಲಿ.

ಆ ವೇಳೆಗಾಗಲೆ ಗುಪ್ತಚಾರ ವಿಭಾಗದ ಮುಖ್ಯಸ್ಥನಾಗಿದ್ದ ಕ. ಸ್ಯಾಂಡ್ಹರ್ ನಿಧನನಾಗಿದ್ದರಿಂದ ಪಿಕಾರ್ಟ್ ಆ ಸ್ಥಾನವನ್ನು ವಹಿಸಿಕೊಂಡಿದ್ದನು. ಮೇಜರ್ ಈಸ್ಟರ್‌ಹೇಜಿಗೆ ಹೆಂಗಸೊಬ್ಬಳು ಬರೆದ ಪತ್ರ ಜರ್ಮನ್ ರಾಯಭಾರದ ಮೂಲಕ ಬಂದಿರುವುದು ಅವನಿಗೆ ಆಶ್ಚರ್ಯವನ್ನುಂಟುಮಾಡಿತು. ಆಗಲೆ ಈಸ್ಟರ್‌ಹೇಜಿಯಿಂದ ಬಂದ ಅರ್ಜಿಯೊಂದರಲ್ಲಿ ಅವನ ಹಸ್ತಾಕ್ಷರ ಕಂಡು ಅವನಿಗೆ ತಲೆಯಲ್ಲೊಂದು ಬೆಳಕು ಬಿತ್ತು.

ಗುಪ್ತಚಾರ ವಿಭಾಗದ ಮುಖ್ಯಸ್ಥನಾದ ನಂತರ ಡ್ರೇಫಸ್‌ನಿಗೆ ಸಂಬಂಧಿಸಿದ ಫೈಲನ್ನು ಪಿಕಾರ್ಟ್ ಪೂರ್ಣ ಅಭ್ಯಸಿಸಿದ್ದನು. ಡ್ರೇಫಸ್ ಬರೆದದ್ದೆಂದು ಹೇಳಲಾಗಿದ್ದ ಕೆನೆಬಣ್ಣದ

ಕಾಗದದ ಮೇಲಿನ ಹಸ್ತಾಕ್ಷರ ಹಾಗು ಈಸ್ಟರ್‌ಹೇಜಿಯ ಹಸ್ತಾಕ್ಷರಗಳಲ್ಲಿ ಸಾಮ್ಯ ಕಂಡೊಡನೆಯೇ ಅವನು ಹಸ್ತಾಕ್ಷರ ತಜ್ಞನನ್ನು ಕರೆಸಿ ತನ್ನ ಅಭಿಪ್ರಾಯವನ್ನು ಖಚಿತಪಡಿಸಿಕೊಂಡನು. ಡ್ರೇಫಸ್‌ನಿಗೆ ನ್ಯಾಯ ದೊರೆಯಲೇಬೇಕೆಂದು ತಕ್ಷಣ ನಿರ್ಧರಿಸಿದನು.

ಆದರೆ ಡ್ರೇಫಸ್ ಪ್ರಕರಣವನ್ನು ಪುನರುಜ್ಜೀವಿಸಬೇಕೆಂದು ಅವನು ಮಾಡಿದ ಪ್ರಯತ್ನ ಅವನ ವರಿಷ್ಠರ ಮನಸ್ಸಿಗೆ ಬರಲಿಲ್ಲ. ಅದಕ್ಕಾಗಿ ಹೆಚ್ಚು ಒತ್ತಾಯಪಡಿಸಿದಾಗ ದೂರ ದೂರದ ಸ್ಥಳಗಳಿಗೆ ಅವನನ್ನು ವರ್ಗಮಾಡಲಾಯಿತು. ಅದರರ್ಥ ಅವನಿಗಾಯಿತು. ಅಂತೆಯೇ ರಜೆಯ ಮೇಲೊಮ್ಮೆ ಪ್ಯಾರೀಸಿಗೆ ಬಂದಾಗ ತನ್ನ ವಕೀಲ ಲೂಯಿ ಲೆಬ್ಲೋಯಿಯನ್ನು ಕಂಡು ತನಗೆ ತಿಳಿದಿರುವುದನ್ನೆಲ್ಲ ಅವನಿಗೆ ಹೇಳಿದ್ದಲ್ಲದೆ ತಾನೊಂದು ವೇಳೆ ನಿಧನಹೊಂದಿದರೆ ಫ್ರಾನ್ಸಿನ ಅಧ್ಯಕ್ಷರಿಗೆ ಮುಟ್ಟಿಸಲೆಂದು ಪತ್ರವೊಂದನ್ನು ಬರೆದುಕೊಟ್ಟನು. ಅದರಲ್ಲಿ ಡ್ರೇಫಸ್ ನಿರ್ದೋಷಿ ಹೇಗೆ ಮತ್ತು ಈಸ್ಟರ್‌ಹೇಜಿ ಎಂತು ಅಪರಾಧಿಯೆಂಬುದನ್ನು ಸ್ಪಷ್ಟವಾಗಿ ನಿರ್ದೇಶಿಸಿದ್ದನು.

ಲೆಬ್ಲೋಯಿ ಫ್ರೆಂಚ್ ಸಿನೇಟಿನ ಉಪಾಧ್ಯಕ್ಷನೂ ಡ್ರೇಫಸ್ ಮನೆತನದ ಆಪ್ತಮಿತ್ರನೂ ಆಗಿದ್ದ ಶೂರರ್ ಕೆಸ್ಟನರ್‌ನೊಂದಿಗೆ ಲೆಬ್ಲೋಯಿ ಈ ವಿಷಯ ಚರ್ಚಿಸಿದನು. ಆಗ ಬಹಿರಂಗವಾಗಿ ಯಾರಿಗೂ ಏನೂ ಮಾಡಲಿಕ್ಕಾಗದಿದ್ದರೂ ದೇಶದ ಗಣ್ಯ ವ್ಯಕ್ತಿಗಳಲ್ಲಿ ಡ್ರೇಫಸ್‌ನ ಬಗ್ಗೆ ಅನುಕೂಲಾಭಿಪ್ರಾಯವನ್ನು ಸಾವಧಾನವಾಗಿಯಾದರೂ ರೂಪಿಸಲು ಸಾಧ್ಯವಾಯಿತು.

ಇತ್ತ ಪಿಕಾರ್ಟನ ಸ್ಥಾನಕ್ಕೆ ಬಂದ ಮೇಜರ್ ಹೆನ್ರಿ ತನ್ನ ಮಿತ್ರ ಈಸ್ಟರ್‌ಹೇಜಿಯನ್ನುಳಿಸಲು ಸಕಲ ಪ್ರಯತ್ನಗಳನ್ನೂ ಮಾಡತೊಡಗಿದನು. ಅದಕ್ಕಾಗಿ ಡ್ರೇಫಸ್‌ನ ಮೇಲಿನ ಆರೋಪಕ್ಕೆ ಅನುಗುಣವಾದ ಹೊಸ ಹೊಸ ಕಾಗದಪತ್ರಗಳನ್ನು ನಿರ್ಮಿಸಿ ಆ ಪ್ರಕರಣದ ಫೈಲಿಗೆ ಸೇರಿಸಲಾರಂಭಿಸಿದನು.

ಅಕಸ್ಮಾತ್ತಾಗಿ ಒಂದು ದಿನ 'ಲೆ ಮಾರ್ಟಿ' ಎಂಬ ಪತ್ರಿಕೆಯಲ್ಲಿ ಅದು ಹೇಗೊ ಡ್ರೇಫಸ್ ಬರೆದದ್ದೆಂದು ಹೇಳಲಾಗಿದ್ದ ಕೆನೆಬಣ್ಣದ ಕಾಗದದ ಫೋಟೋ ಪ್ರಕಟವಾಗಿಬಿಟ್ಟಿತು. ಅದನ್ನು ಕಂಡು ಈಸ್ಟರ್‌ಹೇಜಿ ಎದೆಯೊಡೆದುಕೊಂಡ.

ಇದು ನಡೆದುದು ಡ್ರೇಫಸ್‌ನಿಗೆ ಶಿಕ್ಷೆಯಾಗಿ ಸುಮಾರು ಮೂರು ವರುಷಗಳ ನಂತರ. ಆಗ ಕ್ಯಾಸ್ಟ್ರೋ ಎಂಬವನೊಬ್ಬನು ತನಗೆ ಈಸ್ಟರ್-ಹೇಜಿಯಿಂದ ಬಂದ ಪತ್ರ ಹಾಗೂ ಈ ಕೆನೆಬಣ್ಣದ ಕಾಗದಗಳಲ್ಲಿ ಹಸ್ತಾಕ್ಷರಗಳಲ್ಲಿ ಸಾಮ್ಯವನ್ನು ಕಂಡವ, ಅದನ್ನು ಡ್ರೇಫಸ್‌ನ ಸೋದರ ಮ್ಯಾಥ್ಯುಗೆ ತಿಳಿಸಿದನು. ಅವನು ನವ್ಹೆಂಬರ್ ೧೫, ೧೮೯೭ ರಂದು ಈ ಕೆನೆಬಣ್ಣದ ಕಾಗದವನ್ನು ಬರೆದವನು ಈಸ್ಟರ್‌ಹೇಜಿಯೆಂದು ನ್ಯಾಯಾಲಯಕ್ಕೆ ದೂರುಕೊಟ್ಟನು.

ವಿಚಾರಣೆಯಂತೂ ನಡೆಯಲೇ ಬೇಕಾಯಿತು. ಆದರೆ ಫ್ರಾನ್ಸಿನ ದೊಡ್ಡ ಪತ್ರಿಕೆಗಳೆಲ್ಲ ಯಹೂದಿ ದ್ವೇಷದಿಂದ ಇನ್ನೂ ಮುಕ್ತವಾಗಿರಲಿಲ್ಲ. ಅವು ಈಸ್ಟರ್‌ಹೇಜಿಯನ್ನು ಎತ್ತಿಹಿಡಿದು ಅವನು ರಾಷ್ಟ್ರವೀರನೆಂಬಂತೆ ವರ್ಣಿಸಲಾರಂಭಿಸಿದ್ದವು. ಈಸ್ಟರ್‌ಹೇಜಿಯ ವಿರುದ್ಧ ಸಾಕ್ಷಿ ಹೇಳಲು ಪಿಕಾರ್ಟ್‌ನನ್ನು ಕರೆಸಲಾಗಿತ್ತು. ಆದರೆ ವಿಚಾರಣೆ ಆರಂಭವಾದಾಗ ಸರಕಾರ ಈಸ್ಟರ್‌ಹೇಜಿಯ ಮೇಲಿನ ಆಪಾದನೆಯನ್ನು ಹಿಂತೆಗೆದುಕೊಂಡುಬಿಟ್ಟಿತು. ಸೈನಿಕ ರಹಸ್ಯ ಬಹಿರಂಗ ಪಡಿಸಿದ್ದಕ್ಕಾಗಿ ಪಿಕಾರ್ಟ್‌ನನ್ನು ಬಂಧಿಸಲಾಯಿತು.

ಆದರೆ ಈ ವೇಳೆಗಾಗಲೆ ಈ ಪ್ರಕರಣ ಯುರೋಪಿನಲ್ಲೆಲ್ಲ ಕುತೂಹಲ ಕೆರಳಿಸಿತ್ತು. ಈಸ್ಟರ್‌ಹೇಜಿಯ ಬಿಡುಗಡೆ ಹಾಗು ಪಿಕಾರ್ಟನ ಬಂಧನವನ್ನು ಯುರೋಪಿಗೆ ಯುರೋಪೇ ಹಳಿಯಿತು. ಫ್ರಾನ್ಸಿನಲ್ಲೂ ಅನೇಕ ವಿಚಾರವಂತರು ಇದರಿಂದ ತುಂಬ ಬೇಸರಗೊಂಡರು. ದೇಶದಲ್ಲಿ ಮತ್ತೆ ಡ್ರೇಫಸ್ ಪ್ರಕರಣದಲ್ಲಿ ಆಸ್ಥೆ ಬೆಳೆಯಲಾರಂಭಿಸಿತು.

ಫ್ರೆಂಚ್ ಸರಕಾರ ನ್ಯಾಯದ ಕೊಲೆಮಾಡುತ್ತಿರುವುದನ್ನು ಕಂಡು ಸಿಡಿದೆದ್ದವರಲ್ಲಿ ಜಗತ್ಪ್ರಸಿದ್ಧ ಫ್ರೆಂಚ್ ಕಾದಂಬರಿಕಾರ ಎಮಿಲ್

ಝೋಲಾನೂ ಒಬ್ಬ. ಜನೆವರಿ ೧೩, ೧೮೯೮ ರಂದು 'ಲೆ ಫಿಗುರೊ' ಪತ್ರಿಕೆಯಲ್ಲಿ "ನಾನು ಅಪಾದಿಸುತ್ತೇನೆ"(J'accuse) ಎಂಬ ತಲೆಬರೆಹದೊಂದಿಗೆ ಅವನೊಂದು ಲೇಖ ಬರೆದು ಡ್ರೇಫಸ್ ಪ್ರಕರಣದಲ್ಲಿ ಫ್ರೆಂಚ್ ಸರಕಾರದ ವರ್ತನೆಯ ಪೊಳ್ಳುತನವನ್ನು ಎತ್ತಿತೋರಿಸಿ ಪ್ರಜಾಪ್ರಭುತ್ವದ ಮೌಲ್ಯಗಳನ್ನೆತ್ತಿ ಹಿಡಿಯಲು ಫ್ರೆಂಚ್ ನಾಗರಿಕರಿಗೆ ಕರೆಯಿತ್ತನು. ಡ್ರೇಫಸ್‌ನಿಗೆ ನ್ಯಾಯ ದೊರಕಿಸುವುದಕ್ಕೆ ಅವನು ತನ್ನ ಕೀರ್ತಿಯನ್ನೇ ಪಣಕ್ಕೆ ಹಚ್ಚಿದನು.

ಇದು ಫ್ರಾನ್ಸಿನಲ್ಲಿ ಬಿರುಗಾಳಿಯನ್ನೆಬ್ಬಿಸಿತು. ಸರಕಾರ ತತ್ತರಿಸಿಹೋಯಿತು. ಯಹೂದಿದ್ವೇಷಿಯಾದ ಫ್ರೆಂಚರು ಅನೇಕ ಕಡೆಗಳಲ್ಲಿ ದಂಗೆಯೆದ್ದು ಝೋಲಾನ ಮೂರ್ತಿಯನ್ನು ಮಾಡಿ ಸುಟ್ಟು ತಮ್ಮ ಅತೃಪ್ತಿ, ಕೋಪಗಳನ್ನು ವ್ಯಕ್ತಪಡಿಸಿದರು. ಅನೇಕ ವಾರ ರಕ್ತದ ಕೋಡಿಯೇ ಹರಿಯಿತು. ಅದನ್ನು ನಿಲ್ಲಿಸಲು ಸೈನ್ಯವನ್ನುಪಯೋಗಿಸಬೇಕಾಯಿತು.

ಝೋಲಾನನ್ನು ಬಂಧಿಸಿದರು. ಮರು ತಿಂಗಳಲ್ಲಿ ಅವನ ವಿಚಾರಣೆ ನಡೆದಾಗ ಅವನ ಬಿಡುಗಡೆಯಾದರೆ ಸೈನ್ಯದ ಜನರಲ್ ಸ್ಟಾಫ್ ಇಡಿಯಾಗಿ ರಾಜೀನಾಮೆ ಕೊಡುವುದಾಗಿ ಬೆದರಿಸಿದ್ದರಿಂದ ಅವನಿಗೆ ಹದಿನೈದು ತಿಂಗಳ ಶಿಕ್ಷೆ ವಿಧಿಸಲ್ಪಟ್ಟಿತು.

ಈ ನಿರ್ಣಯಕ್ಕೆ ಫ್ರಾನ್ಸ್ ಅದ್ಭುತ ಸ್ವಾಗತವನ್ನಿತ್ತರೆ ಹೊರಜಗತ್ತು ಫ್ರಾನ್ಸ್ ಅನಾಗರಿಕತೆಯತ್ತ ಸಾಗಿದೆಂದು ಜರೆಯಿತು.

ಈ ಸಮಯಕ್ಕಾಗಲೆ ಹಿಂದಿನ ಮಂತ್ರಿಮಂಡಳ ಹೋಗಿ ಹೊಸ ಮಂತ್ರಿಮಂಡಳ ಅಸ್ತಿತ್ವದಲ್ಲಿ ಬಂದಿತ್ತು. ಅದರಲ್ಲಿ ಯುದ್ಧಮಂತ್ರಿಯಾಗಿದ್ದ ಗಾಡಫ್ರಿ ಕ್ಯಾವೆನೆಕ್ ಈ ಪ್ರಕರಣವನ್ನೊಮ್ಮೆ ಕೊನೆಗೊಳಿಸಿಬಿಡಲು ನಿರ್ಧರಿಸಿದನು. ಡ್ರೇಫಸ್ ಅಪರಾಧಿ ಎಂದು ಅವನೂ ನಂಬಿದ್ದ. ಅವನಿಗೆ ಸಂಬಂಧಿಸಿದ ಕಾಗದ ಪತ್ರಗಳನ್ನೊಮ್ಮೆ ಸಾರ್ವಜನಿಕರೆದುರಿಟ್ಟರೆ ಅವನ ಮೇಲಿನ ಆರೋಪದ ಬಗ್ಗೆ ಮನವರಿಕೆಯಾಗಿ ಪ್ರಕರಣ ಮುಗಿದುಬಿಡುವುದೆಂದು ಬಗೆದು ಅವನು ಸಿನೇಟಿನಲ್ಲಿ ಆ ರೀತಿ ಹೇಳಿಕೆಯಿತ್ತನು.

ಸೈನ್ಯದಿಂದ ಒತ್ತಾಯದಿಂದ ನಿವೃತ್ತಗೊಳಿಸಲ್ಪಟ್ಟ ಪಿಕಾರ್ಟನಿಗೆ ಇದನ್ನೋದಿದಾಗ ಸಮಾಧಾನವಾಯಿತು. ಕೂಡಲೆ ಅವನು ಮುಖ್ಯ ಮಂತ್ರಿಗೊಂದು ಪತ್ರ ಬರೆದು ತನಗೆ ಗೊತ್ತಿರುವುದನ್ನೆಲ್ಲ ತಿಳಿಸಿದನು.

ಯುದ್ಧಮಂತ್ರಿ ಕ್ಯಾವೆನೆಕ್ ಗುಪ್ತಚಾರ ಶಾಖೆಯ ಮುಖ್ಯಸ್ಥನಾಗಿದ್ದ ಹೆನ್ರಿಯನ್ನು ಕರೆಸಿ ಬೆದರಿಸಿ ವಿಚಾರಿಸಿದಾಗ ಅವನು ತಾನೇ ಅನೇಕ ಖೊಟ್ಟಿ ಕಾಗದಗಳನ್ನು ನಿರ್ಮಿಸಿದ್ದಾಗಿ ಒಪ್ಪಿಕೊಂಡನು. ತಕ್ಷಣ ಅವನನ್ನು ಬಂಧಿಸಲಾಯಿತು. ಮರುದಿನ ಹೆನ್ರಿ ಸೆರೆಮನೆಯ ಕೋಣೆಯಲ್ಲಿ ಸತ್ತುಬಿದ್ದಿದ್ದನು. ರೇಜರಿನಿಂದ ಅವನು ಆತ್ಮಹತ್ಯೆ ಮಾಡಿಕೊಂಡಿದ್ದನು.

ಈ ವಿಷಯ ತಿಳಿದುಬರುತ್ತಲೇ ಈಸ್ಟರ್‌ಹೇಜಿ ಗಾಬರಿಯಾದನು. ಅವನು ಲಂಡನ್ನಿಗೆ ಓಡಿಹೋಗಿ ತಾನು ಕ. ಸ್ಯಾಂಡ್ಹರ್‌ನ ಇಚ್ಛೆಯ ಪ್ರಕಾರ ಜರ್ಮನ್ನರೊಡನೆ ಸಂಪರ್ಕ ಬೆಳೆಸಿದ್ದಾಗಿ ಹೇಳಿ ತನ್ನ ಕತೆಯನ್ನು ಧಾರಾವಾಹಿಯಾಗಿ ಪತ್ರಿಕೆಗಳಲ್ಲಿ ಪ್ರಕಟಿಸಹತ್ತಿದನು. ಅದಕ್ಕಾಗಿ ಅವನಿಗೆ ಸಾಕಷ್ಟು ಹಣವೂ ಬಂತು.

ಈಗ ಡ್ರೇಫಸ್‌ನ ಪುನರ್ವಿಚಾರಣೆ ಅನಿವಾರ್ಯವಾಗಿ ಪರಿಣಮಿಸಿತು. ಆರು ತಿಂಗಳ ನಂತರ ಡ್ರೇಫಸ್‌ನನ್ನು ಫ್ರಾನ್ಸಿಗೆ ತರಲಾಯಿತು. ಅವನೇ ಕ್ಯಾಪ್ಟನ್ ಡ್ರೇಫಸ್‌ನೆಂದು ಗುರುತು ಸಿಕ್ಕದಷ್ಟು ಅವನು ಬದಲಾಗಿ ಹೋಗಿದ್ದನು. ಎಲುಬಿನ ಹಂದರಕ್ಕೆ ಬಟ್ಟೆ ತೊಡಿಸಿದಂತಿತ್ತು ಅವನ ಅವಸ್ಥೆ.

ರೆನ್ನೆಯೆಂಬಲ್ಲಿ ಸೈನಿಕ ನ್ಯಾಯಾಲಯದಲ್ಲಿ ಮರುವಿಚಾರಣೆ ನಡೆಯಿತು. ಡೆಮಾಂಜ್ ಮತ್ತೆ ಡ್ರೇಫಸ್‌ನ ವಕಾಲತ್ತು ವಹಿಸಿದ್ದನು. ಆದರೆ ಅವನ ವೃದ್ಧಾಪ್ಯ ಅವನನ್ನು ಹಣ್ಣು ಮಾಡಿತ್ತು. ಸರಕಾರಿ ಪಕ್ಷದ ವಕಾಲತ್ತು ವಹಿಸಿದ ಜ. ಮರ್ಸಿಯರನ ಪ್ರಭಾವದೆದುರು ಡೆಮಾಂಜ್ ಅಷ್ಟು ಪರಿಣಾಮಕಾರಿಯೆನಿಸಲಿಲ್ಲ. ಮತ್ತೂ ವಿಚಾರಣೆ ಗುಪ್ತವಾಗಿಯೇ ನಡೆಯಿತು. ಈ ಸಲವೂ ಮರ್ಸಿಯರ್ ಮೊದಲಿನ ಸಲದಂತೆಯೆ ರಹಸ್ಯವೆನಿಸಿದ್ದ ಕೆಲವು ಕಾಗದ ಪತ್ರಗಳನ್ನು ಗುಪ್ತವಾಗಿ ನ್ಯಾಯಾಧೀಶರಿಗಿತ್ತನು. ಈ ಸಲ

ಡ್ರೇಫಸ್‌ನಿಗೆ ಹತ್ತು ವರ್ಷಗಳ ಶಿಕ್ಷೆ ವಿಧಿಸಲ್ಪಟ್ಟಿತು.

ಆದರೆ ಫ್ರಾನ್ಸಿನ ಹೊರಗಿನ ನಾಗರಿಕ ರಾಷ್ಟ್ರಗಳೆಲ್ಲ ಇದಕ್ಕಾಗಿ ಫ್ರಾನ್ಸನ್ನು ನಿಷೇಧಿಸಿದವು. ಈ ಅಪಕೀರ್ತಿಗೆ ಸರಕಾರ ಅಳುಕಿತು. ಡ್ರೇಫಸ್‌ನಿಗೆ ಅನ್ಯಾಯವಾಗಿದೆಂದು ಮುಖ್ಯ ಮಂತ್ರಿಗೂ ಅನಿಸಿದ್ದರಿಂದ ಅವನು ಸಪ್ಟೆಂಬರ್ ೧೯, ೧೮೯೯ ರಂದು ಡ್ರೇಫಸ್‌ನಿಗೆ ಪೂರ್ಣ ಕ್ಷಮಾದಾನ ಮಾಡಿದನು. ನಂತರ ಯಹೂದಿ ದ್ವೇಷಿಗಳಿಂದ ಅವನಿಗೆ ಅಪಾಯವಾಗದಂತೆ ಅವನನ್ನು ಅವನ ಕುಟುಂಬದೊಂದಿಗೆ ಸ್ವಿತ್ಸರ್ಲಂಡಿಗೆ ಕಳಿಸಲಾಯಿತು.

ಇದರಿಂದ ಡ್ರೇಫಸ್‌ನಿಗೆ ಕ್ಷಮೆ ದೊರೆಯಿತೆ ಹೊರತು ಅವನ ಮೇಲಿನ ಆರೋಪ ಸುಳ್ಳೆಂದಾಗಲಿಲ್ಲ. ನ್ಯಾಯಕ್ಕಾಗಿ ಹೋರಾಡಿದ ಪಿಕಾರ್ಟ್ ಹಾಗು ಇತರರು ತೀರ ಅಸಮಾಧಾನಗೊಂಡರು. ಡ್ರೇಫಸ್‌ನ ಸೋದರ ಮ್ಯಾಥ್ಯೂಗೂ ಇದರಿಂದ ಸಮಾಧಾನವಾಗಿರಲಿಲ್ಲ.

ಕೆಲ ದಿನಗಳು ಹೀಗೆಯೇ ಕಳೆದ ನಂತರ ರೆನ್ನೆ ವಿಚಾರಣೆಯಲ್ಲಿ ನ್ಯಾಯಾಧೀಶರಲ್ಲೊಬ್ಬನಾಗಿದ್ದು ಈಗ ನಿವೃತ್ತನಾಗಿದ್ದ ಒಬ್ಬನಿಂದ ಮ್ಯಾಥ್ಯೂಗೆ ಜ. ಮರ್ಸಿಯರ ಬಳಸಿದ್ದ ಕಾಯದೆವಿರುದ್ಧವಾದ ತಂತ್ರ ತಿಳಿದುಬಂತು. ಮಾರ್ಚ್ ೧೯೦೪ ರಲ್ಲಿ ಅವನು ಹೈಕೋರ್ಟಿಗೊಂದು ದೂರನ್ನಿತ್ತು ಈ ಪ್ರಕರಣದ ಮರು ವಿಚಾರಣೆಯಾಗಬೇಕೆಂದು ಬಿನ್ನವಿಸಿದನು.

ಪುನಃ ಇಡೀ ಪ್ರಕರಣ ವಿಚಾರಣೆಗೆ ಬಂತು. ಆದರೆ ಈ ಸಲ ಸೈನಿಕ ನ್ಯಾಯಾಲಯವಲ್ಲವಾದ್ದರಿಂದ ಎಲ್ಲ ಪುರಾವೆಗಳನ್ನೂ ಬಯಲಿಗೆ ತರಲೇಬೇಕಾಯಿತು. ಡ್ರೇಫಸ್‌ನ ಎರಡು ವಿಚಾರಣೆಗಳು ಈಸ್ಟರ್‌ಹೇಜ ಹಾಗು ಝೋಲಾರ ವಿಚಾರಣೆಗಳು ಮತ್ತೆ ಚರ್ಚಿಸಲ್ಪಟ್ಟು ಹಿಂದಿನ ನ್ಯಾಯಾಲಯಗಳೆಲ್ಲ ತಪ್ಪು ನಿರ್ಣಯವಿತ್ತವೆಂದೂ ಆಲ್ಫ್ರೆಡ್ ಡ್ರೇಫಸ್ ಸಂಪೂರ್ಣ ನಿರ್ದೋಷಿಯೆಂದೂ ಸಾರಲಾಯಿತು. ಆಗ ಡ್ರೇಫಸ್ ಪ್ರಕರಣ ಪ್ರಾರಂಭವಾಗಿ ೧೨ ವರ್ಷಗಳಾಗಿತ್ತು. ಫ್ರೆಂಚ್ ಸರಕಾರ ತತ್‌ಕ್ಷಣ ಹಿಂದಿನ ಪಾಪಗಳಿಗೆ ಪ್ರಾಯಶ್ಚಿತ್ತವೆನ್ನುವಂತೆ ಡ್ರೇಫಸ್ ಹಾಗು ಪಿಕಾರ್ಟರಿಬ್ಬರಿಗೂ ಸೈನ್ಯದಲ್ಲಿ ಸಾಮಾನ್ಯವಾಗಿ ಅವರಿಗೆ ಸಿಕ್ಕಬೇಕಿದ್ದ ಸ್ಥಾನಮಾನಗಳನ್ನಿತ್ತು ಗೌರವಿಸಿತು.

ಈ ಹೊತ್ತಿಗೆ ಫ್ರೆಂಚ್‌ಜನತೆಯಲ್ಲೂ ಹಿಂದಿನ ಯಹೂದ್ಯದ್ವೇಷ ಉಳಿದಿರಲಿಲ್ಲ. ಅದು ಆಲ್ಫ್ರೆಡ್ ಡ್ರೇಫಸ್‌ನನ್ನು ಅಭೂತಪೂರ್ವ ರೀತಿಯಲ್ಲಿ ಸ್ವಾಗತಿಸಿತು. ಅಂದು ಪ್ಯಾರೀಸಿನ ನಾಗರಿಕರ ತುಟಿಗಳಲ್ಲಿ ಎರಡೇ ವಾಕ್ಯಗಳಿದ್ದವು: "ಡ್ರೇಫಸ್ ಚಿರಾಯುವಾಗಲಿ! ನ್ಯಾಯ ಚಿರಾಯುವಾಗಲಿ"

*



ಯಾವನ ಮನಸ್ಸು ಹಾಸ್ಯವಿನೋದಪ್ರಿಯವಾಗಿರುವುದಿಲ್ಲವೊ ಆ ಮನುಷ್ಯ ಸ್ಪ್ರಿಂಗ್ ಇಲ್ಲದ ವಾಹನದಂತಿರುತ್ತಾನೆ. ಈ ಸಂಸಾರ ಮಾರ್ಗದಲ್ಲಿ ದುಃಖರೂಪಿ ಪಾಷಾಣದ ಸಣ್ಣ ಕಣದ ಸ್ಪರ್ಶವಾದರೂ ಆತ ಗಟ್ಟಿಯಾಗಿ ನರಳಲಾರಂಭಿಸುತ್ತಾನೆ.

—ಬಂಭದತ್ತ

* * *

ಜನಸಮೂಹ ಯಾವ ದಿಕ್ಕಿನಲ್ಲಿ ಹೋಗುವುದೆಂಬುದನ್ನು ತಿಳಿದುಕೊಂಡು ಯಾವನು ಅದಕ್ಕಿಂತ ಮುಂದೆ ಮುಂದೆ ಆ ದಾರಿಯಲ್ಲಿ ಸಾಗುವನೋ ಅವನೇ ಯಶಸ್ವಿ ರಾಜಕಾರಣಿಯಾಗುತ್ತಾನೆ.

* * *

ಪ್ರಣಯವೆಂಬುದು ಚಂದ್ರನಿದ್ದಂತೆ. ಅದು ವೃದ್ಧಿ ಹೊಂದುತ್ತಿಲ್ಲವಾದರೆ ಕ್ಷೀಣ ಹೊಂದತೊಡಗುತ್ತದೆ.




'ಸಂಗೀತವೆಂದರೆ ಅದೊಂದು ಶಕ್ತಿ-ಯಯ್ಯಾ, ಎಂಥಾ ಖಾಯಿಲೆಯೂ ಅದರಿಂದ ವಾಸಿ ಆದೀತು' ಎಂದ ಒಬ್ಬ ತನ್ನ ಸ್ನೇಹಿತನಿಗೆ.

ಸ್ನೇಹಿತ ಉತ್ತರಿಸಿದ: "ಹೌದು, ನನ್ನ ಹೆಂಡತಿಯ ಸಂಗೀತ ಕೇಳಿದಾಗಿನಿಂದ ನನ್ನ ಸ್ತ್ರೀವ್ಯಾಮೋಹ ಬಿಟ್ಟುಹೋಯಿತು."

*

ಒಬ್ಬಾಕೆ ತನ್ನ ಗಂಡನಿಗೆ ಜ್ವರ ಬಂದಾಗ ಉಷ್ಣಮಾಪಕವನ್ನು ಇಟ್ಟು ನೋಡಿ, ಅವಸರದಲ್ಲಿ ವಾಸ್ತವ ಉಷ್ಣಾಂಶದ ಎರಡರಷ್ಟನ್ನು ಕಂಡಂತಾಗಲು ಡಾಕ್ಟರಿಗೆ ಫೋನ್ ಮಾಡಿದಳು:

"ಡಾಕ್ಟರ್, ಬೇಗ ಬನ್ನಿ, ೨೧೦ ಡಿಗ್ರಿ ಜ್ವರ!"

ಡಾಕ್ಟರನೆಂದ: "ಅಗ್ನಿಶಾಮಕ ದಳಕ್ಕೆ ಫೋನ್ ಮಾಡಿ."

*

ಒಬ್ಬಳು: ನನ್ನ ಗಂಡ ನಿದ್ದೆಯಲ್ಲಿ ಬಹಳ ಮಾತಾಡುತ್ತಾನೆ, ನಿನ್ನ ಗಂಡ?

ಮತ್ತೊಬ್ಬಳು: ನನ್ನ ಗಂಡನಿಗೆ ನಾನಿರುವಾಗ ನಿದ್ದೆಯೂ ಬಾರದು, ಮಾತೂ ಬಾರದು.

*

ವೇಗವಾಗಿ ಬರುತ್ತಿದ್ದ ಕಾರೊಂದು ಹಸುವಿಗೆ ಡಿಕ್ಕಿ ಹೊಡೆಯಿತು. ಆ ಹಸು ಸಾಯುವುದರಲ್ಲಿತ್ತು. ಆಗ ಆ ಹಸುವನ್ನು ಸಾಕಿದ ರೈತ ಆ ಕಾರಿನ ಯಜಮಾನನನ್ನು ಬೈಯುತ್ತಾ, ಅಳುತ್ತಾ ಕೂತ.

ಕಾರಿನ ಯಜಮಾನ: "ಅಯ್ಯಾ, ರೈತ, ಹೆದರಬೇಡ. ನಿನ್ನ ಹಸು ಸತ್ತರೆ ನಾನಿದ್ದೇನೆ."

ರೈತ: "ನೀನಿದ್ದರೇನುಪಯೋಗ, ನೀನೇನು ಹಾಲ್ಕೊಡ್ತೀಯಾ?"

— ಕೆ. ಎಸ್. ಕೃಷ್ಣಮೂರ್ತಿ

*

ಹಸ್ತಸಾಮುದ್ರಿಕ ಶಾಸ್ತ್ರಿಯೊರ್ವನು ಮಹನೀಯರೊಬ್ಬರ ಕೈ ನೋಡುತ್ತಾ ಅವರ ಅದೃಷ್ಟ, ವ್ಯಾಪಾರದಲ್ಲಿ ಅವರಿಗೆ ದೊರಕಲಿರುವ ಲಾಭಾಲಾಭ, ಸಾಂಸಾರಿಕ ಜೀವನದಲ್ಲಿ ಅವರಿಗೆ ಒದಗುವ ಆಶೆ-ನಿರಾಶೆಯ ಕುರಿತು ವಿಶದವಾಗಿ ಹೇಳಿ ಕೊನೆಗೆ "ಸ್ವಾಮೀ, ಒಂದು ವಿಷಯ. ಹೇಳಿದೆನೆಂದು ಕೋಪಿಸದಿರಿ. ಸದ್ಯದಲ್ಲೇ ನಿಮ್ಮ ಹತ್ತಿರದ ಪರಿಚಯಸ್ಥರೊಬ್ಬರಿಗೆ ನಿಮ್ಮಿಂದ ತೀವ್ರ ನಿರಾಶೆಯಾಗುವ ಸಂಭವವಿದೆ" ಎಂದು ಹೇಳಿ ಮುಗಿಸುವಷ್ಟರಲ್ಲಿ ಆ ಗಿರಾಕಿ ಏನನ್ನೋ ಹುಡುಕಾಡಿದವರಂತೆ ನಟಿಸುತ್ತಾ ಕೊನೆಗೆ, "ಸರಿ, ನೋಡಿ...... ನಾನು ನನ್ನ ಮನಿ ಪರ್ಸನ್ನು ತರಲು ಮರೆತೇ ಬಿಟ್ಟೆನಲ್ಲ" ಎಂದು ಹೇಳಿ ಶಾಸ್ತ್ರಿಯ ಕೈಯಿಂದ ತನ್ನ ಕೈ ತಪ್ಪಿಸಿಕೊಂಡು ಹೊರಟೇಬಿಟ್ಟರು.

— ಯು. ಎಸ್. ಶೆಣೈ

*

ಒಂದು ಕಾನ್ವೆಂಟ್ ಸ್ಕೂಲಿನ ಅಧ್ಯಾಪಕಿ ತನ್ನ ಕ್ಲಾಸಿನಲ್ಲಿ ಒಂದು ಅಂಕಗಣಿತದ ಲೆಕ್ಕ ಬಿಡಿಸಲು ಹೇಳಿದಳು. ಆ ಲೆಕ್ಕ ಹೀಗಿತ್ತು: "ನಿಮ್ಮ ಟೇಬಲ್ಲಿನ ಮೇಲೆ ಏಳು ನೊಣಗಳಿವೆ ನೀವು ಒಂದನ್ನು ಕೊಂದರೆ ಎಷ್ಟು ಉಳಿಯುವವು?"

ಒಬ್ಬ ಚೂಟಿಯಾದ ತರ್ಕಶಾಸ್ತ್ರಪ್ರವೀಣೆ ಉತ್ತರಿಸಿದಳು: "ಒಂದು ನೊಣ —ಸತ್ತದ್ದು."

ಮಹಿಳಾ ಸಭೆಯ ಅಧ್ಯಕ್ಷಿಣಿ, ನಿರಾಶ್ರಿತ ಬಾಲಕ ಬಾಲಿಕೆಯರನ್ನು ಸಾಕಬೇಕೆಂಬ ಗೊತ್ತುವಳಿಯನ್ನು ಅನುಮೋದಿಸಿದಾಗ- ಒಬ್ಬ ಸದಸ್ಯೆ ಆಕ್ಷೇಪವೆತ್ತಿದಳು: "ನಾವು ಎಂದೂ ನೋಡಿರದ ಮಕ್ಕಳನ್ನು ಸಾಕು ವುದಾದರೂ ಹೇಗೆ?"

ಅಧ್ಯಕ್ಷಿಣಿ ಮರುಸವಾಲು ಹಾಕಿದಳು: "ಆದರಲ್ಲೇನಿದೆ? ನಾನಾದರೂ ಕೂಡ ನನ್ನ ಮಕ್ಕಳನ್ನು ಹೆರುವುದಕ್ಕಿಂತ ಮೊ- ದಲು ಎಂದೂ ನೋಡಿದ್ದಿಲ್ಲ. ಆದರೂ ನಾನು ಅವುಗಳನ್ನು ಸಾಕುತ್ತಿಲ್ಲವೆ?"

—ವಿ. ಜಿ. ಪ್ಯಾಟಿ

*

ರಾಯರು: ಕುಳಿತುಕೊಳ್ಳಿ ಶಾಸ್ತ್ರಿ- ಗಳೇ. ಕೊಂಚ ರೆಸ್ಟ್ ತೆಗೆದುಕೊಳ್ಳಿ. ಕಾಫಿ ಮಾಡಿಸ್ತೀನಿ.

ಶಾಸ್ತ್ರಿಗಳು: ಕಾಫಿ ಬೇಡ ರಾಯ್ರೆ. ಮನೆಯಿಂದ ಬರುವಾಗ್ಲೆ ಕುಡಿದು ಬಂದೆ. ಅದೇನೋ ಅಂದ್ರಲ್ಲ, ಆ ರೆಸ್ಟ್ ಒಂದ್ಲೋಟ ಕೊಡಿ. ನೋಡೋಣ ಹ್ಯಾಗಿರುತ್ತೆ ಅಂತ?

—ಎಂ. ಎಲ್. ಗುರುರಾಜರಾವ್

*

ಮಗಳಿಗೆ ವರನನ್ನು ಹುಡುಕಿ ಹುಡುಕಿ ಸಾಕಾದ ಒಬ್ಬ, ಮನಸ್ಸಿಗೆ ವ್ಯಥೆಯಾಗಿ ಹಿಮಾಲಯಕ್ಕೆ ಹೋಗಿ ಘೋರ ತಪಸ್ಸು ಮಾಡಿದ. ಕರಾರಿನಂತೆ ದೇವನು ಪ್ರತ್ಯಕ್ಷ ನಾಗಿ—

"ಭಕ್ತಾ ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೆ ಬೇಕಾದ ವರ ಕೇಳು" ಎಂದನು.

ಭಕ್ತ ರೇಗಿ ಹೇಳಿದನು: "ಅಯ್ಯೊ! ದೇವ, ಇದೂ ತಿಳಿಯದೆ ನಿನಗೆ? ವರಬೇ ಕಾಗಿರುವುದು ನನಗಲ್ಲ, ನನ್ನ ಮಗಳಿಗೆ."

*

ಕಣ್ಣಾಸ್ಪತ್ರೆಗೆ ಹೋಗಿ ಡಾಕ್ಟರರ ಸಲ- ಹೆಯ ಮೇರೆಗೆ ಒಂದಾಪವನಂತರ ಬಂದ ರಂತೆ ಎಷ್ಟು ಕನ್ನಡಕ ಹಾಕಿಕೊಂಡರೂ ಓದಲಾಗದ ಒಬ್ಬನನ್ನು ಕುರಿತು ಡಾಕ್ಟ- ರರು ಕೇಳಿದರು:

"ಏನಯ್ಯಾ, ತಮಾಷೆ ಮಾಡುತ್ತಿ ದೀಯ?"

"ಇಲ್ಲ ಸ್ವಾಮಿ, ನನಗೆ ಓದೇ ಬರೋಲ್ಲ" ಎಂದುತ್ತರಿಸಿದ ಆತ.

—ಚಂದ್ರಿಕಾ

*

ಮಾನ್ಯ ಮಂತ್ರಿಗಳೊಬ್ಬರು ತಮ್ಮ ಇಂಗ್ಲಿಷ್ ಭಾಷಣದ ಆರಂಭಕ್ಕೆ ತಮ್ಮ ಇಂಗ್ಲಿಷ್ ಪಾಂಡಿತ್ಯದ ಬಗ್ಗೆ ಕ್ಷಮೆಯಾ- ಚಿಸುತ್ತ: 'ನನಗೂ ಇಂಗ್ಲಿಷ ಭಾಷೆಗೂ ಇರುವ ಸಂಬಂಧವು ನನ್ನ ಮತ್ತು ನನ್ನ ಪತ್ನಿಯ ಸಂಬಂಧವನ್ನೇ ಹೋಲುತ್ತದೆ: ನಾನು ಅವಳನ್ನು ಪ್ರೀತಿಸುತ್ತೇನೆ; ಆದರೆ ಅವಳ ಮೇಲೆ ನನ್ನ ಪ್ರಭುತ್ವ ಮಾತ್ರ ಇಲ್ಲವೇ ಇಲ್ಲ' ಎಂದು ಹೇಳಿದರು.

*

ಆಂಗ್ಲ ಅಧಿಕಾರಿಯು ಪುತ್ರನೋರ್ವ ಬೇನೆ ಯಿಂದ ಬಳಲುತ್ತಿದ್ದ. ಹಲವಾರು ವೈದ್ಯರ, ಹಕೀಮರ, ಗಿಡಮೂಲಿಕೆಗಳ ಔಷಧಗಳು ಅವನನ್ನು ಗುಣಪಡಿಸಲಾರದೆ ಹೋದವು. 'ಕತ್ತೆಯ ಹಾಲು ಇದಕ್ಕೆ ತಕ್ಕ ಔಷಧಿ' ಎಂಬ ಸೂಚನೆಯೊಂದು ಅಧಿಕಾರಿಗೆ ಬಂದಿತು.

ಅವನು ಕೂಡಲೇ ಸೇವಕರಿಗೆ ಆಜ್ಞಾಪಿ ಸಿದ, ತನ್ನ ಹಿಂದಿಯಲ್ಲಿ: "ಏಕ್ ಗಧಾ ಲಾವೊ."

ಸೇವಕರು ಗಡಿಬಿಡಿಯಲ್ಲಿ ಗಂಡು ಕತ್ತೆ ಯೊಂದನ್ನು ಅವನೆದುರು ತಂದು ನಿಲ್ಲಿಸಿ ದಾಗ- ಅಧಿಕಾರಿ ಕಿಡಿಕಿಡಿಯಾಗಿ ಗುಡು ಗಿದ: "ಮೇರಾ ಜೈಸಾ ಗದಾ ಮತ್ ಲಾನಾ; ಮೇಮ್ ಸಾಬ್ ಜೈಸಾ ಗಧಾ ಲಾವೊ."

—ಜಿ. ಕೆ. ಕುಲಕರ್ಣಿ.



# ಅಮೇರಿಕದಲ್ಲಿ ಬಟ್ಟೆ ಒಗೆದೆ




ಅನಂತ ಪಾಂ. ಲಾಭಸೇಟವಾರ್

ನನಗೆ ಇಂದು ಬಿಕ್ಕಳಿಕೆ ಬರಹತ್ತಿದೆ. ನೀರು ಕುಡಿದೆ. ನಿಲ್ಲಲಿಲ್ಲ. ರೆಫ್ರಿಜರೇಟರಿನಲ್ಲಿದ್ದ ಕಿತ್ತಳೆಹಣ್ಣಿನ ರಸ ಕುಡಿದೆ. ಆದರೂ ನಿಲ್ಲಲಿಲ್ಲ. ಬೆಂಕಿಯಲ್ಲಿ ತುಪ್ಪ ಸುರಿದಂತಾಗಿ ಇನ್ನಿಷ್ಟು ಹೆಚ್ಚಿತು. ಯಾರಾದರೂ ನೆನಸಿಕೊಂಡರೆ ಬಿಕ್ಕಳಿಕೆ ಬರುತ್ತದೆಯೆಂದು ನೀನು ಹೇಳುತ್ತಿರುವಿ. ಹಾಗಿದ್ದರೆ ಯಾರು ನನ್ನನ್ನು ನೆನಸಿಕೊಂಡಿರಬಹುದು ? ಹಂ. ನಾನೇ ಹೇಳುತ್ತೇನೆ. ನನ್ನ ಕೋಣೆಯಲ್ಲಿ ಬಿದ್ದಿರುವ ಅರಿವೆಯ ರಾಶಿ. ಈಗೆಂಟು ದಿನಗಳಿಂದಲೂ ಆ ಅರಿವೆಗಳು ನನ್ನನ್ನು ಕೆಕ್ಕರಿಸಿ ನೋಡುತ್ತ ಬಿದ್ದುಕೊಂಡಿವೆ. ಅವುಗಳ ಯೋಗಕ್ಷೇಮ ನೋಡಿಕೊಳ್ಳಲು ನನಗೆ ಬಿಡುವೇ ಸಿಕ್ಕಿಲ್ಲ. ಅದರಿಂದ ಈಗೇನಾಗಿದೆಯೆಂದರೆ ಇಂದು ಅರಿವೆ ತೊಳೆದುಕೊಳ್ಳದಿದ್ದರೆ ನಾಳೆ ಕಾಲೇಜಿಗೆ ಹೋಗುವುದೇ ಸಾಧ್ಯವಿಲ್ಲ.

ಎಲ್ಲ ಅರಿವೆಗಳನ್ನೂ— ಶರ್ಟು, ಪ್ಯಾಂಟು, ಚಾದರು, ಬನಿಯನ್— ಎಲ್ಲವನ್ನೂ ಗಂಟು ಕಟ್ಟಿದೆ. ಆ ಗಂಟಿನ ಗಾತ್ರವನ್ನು ನೋಡಿ ಎದೆಯೊಡೆದುಹೋಯಿತು. ಇಷ್ಟೆಲ್ಲ ಅರಿವೆಗಳನ್ನು ತೊಳೆಯುವುದಾದರೂ ಹೇಗೆ! ಅಗಸನು ಒಂದು ಶರ್ಟಿಗೆ ಒಂದು ರೂಪಾಯಿ ತೆಗೆದುಕೊಳ್ಳುತ್ತಾನೆ. ಪ್ಯಾಂಟಿಗೆ (ಅಮೇರಿಕದಲ್ಲಿ ಅದಕ್ಕೆ ಟ್ರೌಜರ್ ಎನ್ನುತ್ತಾರೆ) ಐದು ರೂಪಾಯಿ ಎನ್ನುತ್ತಾನೆ. ನಮ್ಮ ಕಡೆಯ ಒಬ್ಬ ಸರದಾರ (ಶೀಖ) ತನ್ನ ಪೇಟಾ ತೊಳೆಯಲು ಕೊಟ್ಟಾಗ ಅಗಸರವ ಅದಕ್ಕೆ ೨೫ ರೂಪಾಯಿ ಚಾರ್ಜು ಮಾಡಿದ. ಆ ಸರದಾರ ಅದನ್ನು ಭಾರತದಲ್ಲಿ ಏಳೊ, ಎಂಟೊ ರೂಪಾಯಿಗಳಿಗೆ ಕೊಂಡಿದ್ದನಂತೆ. ನಮ್ಮಲ್ಲಿಯ ಸೀರೆಗಳನ್ನು, ಅದರಲ್ಲೂ ೧೮ ಮೊಳದ ಸೀರೆಗಳನ್ನು ಕೊಟ್ಟರೆ ಇಲ್ಲಿಯ ಅಗಸ ಎಷ್ಟು ಚಾರ್ಜು ಮಾಡುತ್ತಾನೊ, ಹೇಳುವುದೇ ಕಷ್ಟ. ಅಮೇರಿಕನ್ ಸ್ತ್ರೀಯರು ಸೀರೆ ಉಡಲು ಧೈರ್ಯ ಮಾಡದಿರುವುದಕ್ಕೆ ಬಹುಶಃ ಇದೂ ಒಂದು ಮುಖ್ಯ ಕಾರಣವಿರಬೇಕು. ಆದ್ದರಿಂದಲೇ ನನ್ನ ಎಲ್ಲ ಅರಿವೆಗಳನ್ನು ಅಗಸರವನಿಗೆ ತೊಳೆಯಲು ಕೊಡುವುದಕ್ಕಿಂತ ಹೊಸತನ್ನು ಕೊಳ್ಳುವುದೇ ಲಾಭಕರವಾಗಬಹುದು. ಒಂದು ಶರ್ಟಿಗೆ ಒಂದು ರೂಪಾಯಿ ಲೆಕ್ಕದಲ್ಲಿ ಇಷ್ಟೆಲ್ಲ ಅರಿವೆಗಳನ್ನು ಅಗಸರವನಿಗೆ ಕೊಡಲು ಟಾಟಾ, ಬಿರ್ಲಾರಂಥವರೇ ಹಿಂದೆಮುಂದೆ ನೋಡಬ-

ಹುದು. ಅಂದ ಮೇಲೆ ನನ್ನಂಥವನ ಪಾಡೇನು?

ಸ್ವಾವಲಂಬಿಯಾಗೋಣ ಎಂದರೆ ಅರಿವೆ ತೊಳೆಯುವ ಶಾಸ್ತ್ರದಲ್ಲಿ ನನಗಿರುವ ಜ್ಞಾನ ನಿನಗಿರುವ ಹಿಂದೀ ಜ್ಞಾನವನ್ನು ಕೂಡ ನಾಚಿಸೀತು. ಈ ಯುಗವೇ ತಜ್ಞರ ಯುಗ. ಒಬ್ಬನೇ ಎಷ್ಟು ವಿಷಯಗಳಲ್ಲಿ ತಜ್ಞನಾಗಬೇಕು? ಎಲ್ಲಾದರೂ ಉಂಟೇ?

ಹತಾಶನಂತಾಗಿದ್ದ ನಾನು ನನ್ನ ಮಿತ್ರನಿಗೆ ನನ್ನ ಸಂಕಟವನ್ನು ಹೇಳಿದೆ. ಆತ ನಕ್ಕು "ಥತ್! ಇಷ್ಟಕ್ಕೇ ಚೀನ ಹಿಮಾಲಯವನ್ನು ನುಂಗಿ ಹಾಕಿದ ಹಾಗೆ ಮುಖವನ್ನೇಕೆ ಮಾಡಿದಿ? ಇಂದು ರಾತ್ರಿ ನಾನೂ ಬಟ್ಟೆ ಒಗೆಯಲು ಹೋಗಬೇಕು. ಬಾ ನನ್ನೊಡನೆ" ಎಂದ.

"ರಾತ್ರಿ!"

"ಯಪ್."

ರಾಮದಾಸರ ನಾಲಿಗೆ ಖೀರು ತಿನ್ನುವುದನ್ನು ಬಿಟ್ಟಿತ್ತು. ಅದರಂತೆ ನನ್ನ ಮಿತ್ರನ ನಾಲಿಗೆ ಸರಳವಾಗಿ "ಯೆಸ್" ಎನ್ನುವುದನ್ನು ಬಿಟ್ಟುಬಿಟ್ಟಿದೆ. ಅದರ ಬದಲು ಅಮೇರಿಕನ್ನರ "ಯಪ್" ಎಂದು ನುಡಿಯತೊಡಗಿದೆ. ನಿತ್ಯವೂ ಒಂದು ತಾಸಾದರೂ ಟೆಲಿವಿಜನ್ ಎದುರು ರಾಮನ ಮುಂದೆ ಹನುಮಂತ ಕೈಜೋಡಿಸಿಕೊಂಡು ನಿಂತಂತೆ ಕುಳಿತರೆ ಇಷ್ಟಾದರೂ ಪ್ರಯೋಜನವಾಗದೆ ಹೋದೀತೆ?

"ಯಾಕೆ?" ನನ್ನ ಪ್ರಶ್ನೆ.

"ಯಾಕಂದರೆ ರಾತ್ರಿ ಗೋಟಾ (ಒಗೆಯುವ ಕಲ್ಲು) ಸಿಗುತ್ತದೆ."

ನನ್ನ ಮಿತ್ರನಿಂದಾಗಿ ನನ್ನ ಆತ್ಮವಿಶ್ವಾಸ ಬೆಳೆಯಿತು. ಆತ ಅರಿವೆ ತೊಳೆಯಬಲ್ಲನಾದರೆ ನಾನೇಕೆ ತೊಳೆಯಲಾರೆ?

ರಾತ್ರಿ ಹತ್ತು ಗಂಟೆಗೆ ಅವನ ಫೋನ್ ಬಂತು: ಅರಿವೆಯ ಗಂಟು ಹೊತ್ತುಕೊಂಡಾಗ ಅಗಸರು ಈ ಕಾರ್ಯಕ್ಕಾಗಿ ಕತ್ತೆಗಳನ್ನೇಕೆ ಉಪಯೋಗಿಸುತ್ತಾರೆ? ಎಂಬುದು ಕಲ್ಪನೆಗೆ ಬಾರದಂಥ ಕತ್ತೆಯೇನೂ ನಾನಲ್ಲ. ಅಂತೂ ಮಿತ್ರನೊಂದಿಗೆ ಹೊರಟೆ. ತುಸು ದೂರ ನಡೆದ ಮೇಲೆ ನನ್ನ ಗಮನಕ್ಕೆ ಸಾಬೂನು ತಂದಿಲ್ಲವೆಂಬುದು ಬಂದಾಗ ನಾನು ಮಿತ್ರನಿಗೆ "ಮನೆಗೆ ಹೋಗಿ ಸಾಬೂನು ತರಲೆ?" ಎಂದು ಕೇಳಿದೆ.

ಆತ "ನೋಪ್ (ಇಲ್ಲ)" ಎಂದ. "ಅಲ್ಲಿ ನಿನಗೆ ಶೀಗೇಕಾಯಿ ಕೂಡ ದೊರೆಯುತ್ತದೆ."

ಶೀಗೇಕಾಯಿ ಉಪಯೋಗಿಸುವುದು ಅರಿವೆ ತೊಳೆಯಲಿಕ್ಕಲ್ಲ, ತಲೆ ತೊಳೆಯಲು ಎಂಬ ಮಾತು ನನ್ನ ಮಿತ್ರನ ನೆನಪಿನಲ್ಲಿ ಉಳಿಯಲಿಲ್ಲವಲ್ಲ ಎಂದು ನಗಬೇಡ. ಪಾಪ, ನಾಲ್ಕು ವರ್ಷಗಳಾಯಿತು ಆತನಿಗೆ ಮಾತೃಭಾಷೆಯ ಸಂಪರ್ಕ ತಪ್ಪಿಹೋಗಿ.

ಮುಂದೆ ನಡೆದು ಒಂದು ಅಂಗಡಿಯ ಬಳಿ ನಿಂತೆವು. "ನದಿಗೆ ಬಂದೆವು"—ಎಂದ ಮಿತ್ರ ಮಹಾಶಯ. ನದಿಯ ಹೆಸರು "ಸಡ್ಸ್ ಆ್ಯಂಡ್ ಡಡ್ಸ್" ಎಂದಿತ್ತು. ಬಾಗಿಲಿನ ಮೇಲೆ "ನಾವು ಇಪ್ಪತ್ತುನಾಲ್ಕು ತಾಸೂ ತೆರೆದಿರುತ್ತೇವೆ" ಎಂದು ಬರೆದಿತ್ತು.

ಒಳಗೆ ಹೋದ ಮೇಲೆ ಮಿತ್ರ "ನಿನಗೆ ಹೇಳಿರಲಿಲ್ಲವೆ, ರಾತ್ರಿ ಒಗೆಯುವ ಕಲ್ಲುಗಳು ಖಾಲಿ ಇರುತ್ತವೆ ಎಂದು, ನೋಡು" ಎಂದ.

ನೋಡಿದೆ. ಒಗೆಯುವ ಕಲ್ಲು! ಎಲ್ಲಿತ್ತು ಅಲ್ಲಿ? ಆದರೆ ಆತ ಒಗೆಯುವ ಕಲ್ಲು ಎಂದದ್ದು ಅಲ್ಲಿದ್ದ 'ವಾಶಿಂಗ್ ಮಶೀನ್' (ಬಟ್ಟೆ ತೊಳೆಯುವ ಯಂತ್ರ) ಎಂದು ಕ್ಷಣದಲ್ಲೆ ಹೊಳೆದದ್ದರಿಂದ ನಾನು ಬೆಪ್ಪುತಕ್ಕಡಿಯಂತಾಗಲಿಲ್ಲ. ಆತ ವಾಶಿಂಗ್ ಮಶೀನಿಗೆ ಗೋಟಾ ಎಂಬ ಮರಾಠಿ ಹೆಸರಿಟ್ಟಿದ್ದ.

ಅಂಗಡಿಯ ಮಧ್ಯಭಾಗದಲ್ಲಿ ಇಪ್ಪತ್ತು ಬಟ್ಟೆ ಒಗೆಯುವ ಯಂತ್ರಗಳು ಸಾಲಾಗಿ ನಿಂತಿದ್ದವು. ಅವುಗಳ ಮಗ್ಗಲಲ್ಲಿಯೆ ಬೇರೆ ಬಗೆಯ ಯಂತ್ರಗಳ ಸಾಲು ಇತ್ತು. ಎರಡೂ ಕಡೆಗಳಲ್ಲಿ 'ಅಗಸ'ರಿಗೆ ಕೂಡ್ರಲು ಆಸನಗಳಿದ್ದವು. ಅಲ್ಲಿ ಬೇಕಾದಷ್ಟು ಮಾಸಿಕ ಪತ್ರಿಕೆಗಳಿದ್ದವು. ಮೂಲೆಯಲ್ಲಿ ಕೋಕಾಕೋಲಾ ಮತ್ತು ಕಿತ್ತಳೆ

ಹಣ್ಣಿನ ರಸ ಕೊಡುವ ಯಂತ್ರವಿತ್ತು. ನನ್ನ ವಿದ್ಯಾಪೀಠದ ಅನೇಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅರಿವೆ ತೊಳೆಯುವುದರಲ್ಲಿ ಮಗ್ನರಾಗಿದ್ದರು.

ನಾನೊಂದು ಯಂತ್ರದ ಬಾಗಿಲು ತೆರೆದೆ. ಯಂತ್ರದ ಮುಚ್ಚಳದ ಮೇಲೆ "ಯಂತ್ರದಲ್ಲಿ ಮುಕ್ಕಾಲು ಭಾಗದ ವರೆಗೆ ಮಾತ್ರ ಅರಿವೆ ಹಾಕಬೇಕು. ಒತ್ತಿ ತುಂಬಬಾರದು" ಎಂದು ಬರೆದಿತ್ತು. ಎಂಥ ವಿಪರೀತ ನ್ಯಾಯ ಈ ಅಮೇರಿಕದಲ್ಲಿ, ನೋಡಿದೆಯಾ? ನಮ್ಮಲ್ಲಿಯಾದರೊ ರೇಲ್ವೆ ಡಬ್ಬಿಯಲ್ಲಿ ಒಂದು ನೊಣಕ್ಕೂ ಸ್ಥಳ ವಿರದಂತೆ ಜನರನ್ನು ತುಂಬಿದರೂ ಆ ಡಬ್ಬಿಗೇನೂ ಆಗುವುದಿಲ್ಲ. ಈ ಅಮೇರಿಕನ್ ಯಂತ್ರದಲ್ಲಿ ಕಂಠ ಮಟ್ಟ ಅರಿವೆ ತುಂಬಿದರೆ ಅದು ಕೆಡುತ್ತದಂತೆ! ಆದರೆ ಸೂಚನೆಯಂತೆ ನಡೆದುಕೊಳ್ಳಬೇಕಲ್ಲ. ನನ್ನ ಅರಿವೆಗಳಿಗೆ ಎರಡು ಯಂತ್ರಗಳು ಬೇಕಾದವು. ಆ ಮೇಲೆ ಮುಂದಿನ ಸೂಚನೆ ನೋಡಿದೆ: "ಒಂದು ಕಪ್ಪು ಪೌಡರ್ ಹಾಕಿರಿ." ಎಲಾ! ಯಾವ ಕಪ್ಪು? ಶ್ರೀಮತಿಯವರೇ. ನಗಬೇಡಿ. ದೇಶ ದೇಶಗಳಲ್ಲಿ ಮನುಷ್ಯರ ಮುಖದ ರೂಪ ಬದಲಾಗುವಂತೆ ಕಪ್ಪಿನ ಆಕಾರದಲ್ಲೂ ಹೆಚ್ಚು ಕಡಿಮೆಯಿರುತ್ತದೆ. ಇಟಲಿ ದೇಶದ ಕಪ್ಪೆಂದರೆ ಭಾರತದ ತುಪ್ಪದ ಬಟ್ಟಲು. ಅಮೇರಿಕದ ಬೀರ್‌ನ ಕಪ್ಪು ಎಂದರೆ ನಮ್ಮಲ್ಲಿಯ ಸಣ್ಣ ತಪ್ಪಲೆಯೇ ಸರಿ. ಈಗ ನನಗೆ ಭಾರತೀಯ ಕಪ್ಪು ತುಂಬ ಪೌಡರ್ ಹಾಕಬೇಕೋ, ಅಮೇರಿಕನ್ ಕಪ್ಪು ತುಂಬ ಹಾಕಬೇಕೊ ಎಂಬ ಸಂದೇಹಕ್ಕಿಟ್ಟು ಕೊಂಡಿತು. ಮತ್ತೆ ಪಾಕಶಾಸ್ತ್ರದ ಪುಸ್ತಕದಲ್ಲಿ ಪಲ್ಯಕ್ಕೆ ಮೆಣಸಿನಕಾಯಿ ಹಾಕುವಾಗ ಹಾಗೆಯೆ ಹಾಕಬೇಕೋ ಹುರಿದು ಹಾಕಬೇಕೋ ಎಂದು ಹೇಳದಿರುವಂತೆ ಇಲ್ಲಿ ಎಂಥ ಪೌಡರ್ ಹಾಕಬೇಕು ಎಂದು ತಿಳಿಸಿರಲಿಲ್ಲ.

ಆದರೆ ಸುದೈವದಿಂದ ಬೇಗನೆ ನನ್ನ ಈ ಎರಡೂ ಸಂದೇಹಗಳ ನಿವಾರಣೆಯಾಯಿತು. ಯಂತ್ರದ ಬಳಿಯೆ ಇದ್ದ ಕಾಗದದ ಕಪ್ ಒಂದನ್ನು ಕಂಡು ಯಾವ ಕಪ್ಪು ಎಂಬ ಪ್ರಶ್ನೆ ಬಗೆಹರಿಯಿತು. ಹಾಕಬೇಕಾದ ಪೌಡರ ಸಿಗುವ ಏರ್ಪಾಡೂ ಅಲ್ಲಿತ್ತು. ನಾನು ಮೂಲೆಯಲ್ಲಿದ್ದ ಯಂತ್ರದ ಬಳಿಗೆ ಹೋದೆ. ಐದು ಸೆಂಟ್ ನಾಣ್ಯವೊಂದನ್ನು ಯಂತ್ರದಲ್ಲಿ ಹಾಕಿದೆ. ಮರುಕ್ಷಣದಲ್ಲಿ ಒಂದು ಕಪ್ಪು ತುಂಬ ಪೌಡರ್ ಹೊರಗೆ ಬಂತು. ಬಾಲ್ಯದಲ್ಲಿ ಅಮ್ಮ ಕಿವಿ ಹಿಂಡಿದಾಗ ನಮ್ಮ ಬಾಯಿಂದ ಸಂಗೀತ ಸ್ವರ ಹೊರಡುತ್ತಿದ್ದುದಕ್ಕಿಂತಲೂ ಶೀಘ್ರದಲ್ಲಿ ಈ ಪೌಡರ್ ಕಪ್ಪು ಯಂತ್ರದಿಂದ ಹೊರಗೆ ಬಂತು.

ಪೌಡರನ್ನು ಯಂತ್ರದಲ್ಲಿ ಹಾಕಿ ಮುಚ್ಚಳ ಮುಚ್ಚಿದೆ. ಇನ್ನು ಅಂಗಡಿಯ ಮಾಲಕ ಬಂದು ಯಂತ್ರವನ್ನು ಶುರು ಮಾಡಿಯಾನು ಎಂದು ಯೋಚಿಸಿದೆ. ಆದರೆ ನನ್ನಂಥ ಅಗಸರನ್ನು ಬಿಟ್ಟು ಇನ್ನಾರೂ ಅಲ್ಲಿರಲಿಲ್ಲ. ಈ ಅಂಗಡಿ ಮಾಲಕರಿಲ್ಲದೆಯೆ ನಡೆಯುತ್ತದೆಂದು ನನ್ನ ಮಿತ್ರ ಹೇಳಿ "ಮೂರನೆಯ ಸೂಚನೆ ಓದಿ ನೋಡು" ಎಂದ.

ಓದಿದೆ. ಒಂದು ಸ್ವಾರಸ್ಯದ ಮಾತು ಹೇಳುವೆ ನಿನಗೆ. ಮಂಗಲಾಷ್ಟಕವಿಲ್ಲದೆ ಲಗ್ನ ನಡೆದರೂ ನಡೆಯಬಹುದು. ಆದರೆ ಅಮೇರಿಕದಲ್ಲಿ ಸೂಚನೆಗಳಿಲ್ಲದೆ ಒಂದು ಯಂತ್ರವೂ ನಡೆಯಲಾರದು. "ಈಗ ೫ ಸೆಂಟ್ ನಾಣ್ಯವನ್ನು ಹಾಕಿರಿ" ಎಂಬುದೇ ಮೂರನೆಯ ಸೂಚನೆ. ಪಾಕೀಟು ತೆಗೆದೆ. ಎಲಾ! ಒಳಗೆ ಇರುವುದೆಲ್ಲವೂ ನೋಟುಗಳೇ.

ಈಗ ಚಿಲ್ಲರೆಗಾಗಿ ಏನು ಮಾಡಬೇಕೆಂಬ ಪ್ರಶ್ನೆ ಬಂತು. ಮಿತ್ರ ಮೂರನೆಯ ಯಂತ್ರವನ್ನು ತೋರಿಸಿದ. (ನನಗೆ ಬಿಕ್ಕು ಹತ್ತಿದೆ ಎಂದು ಹೇಳಬೇಕೆಂದಿದ್ದ ವಿಚಾರ ಆತ ನಾಲ್ಕನೆಯ ಯಂತ್ರವನ್ನು ತೋರಿಸಿಯಾನು ಎಂಬ ಭಯದಿಂದ ಅಡಗಿಹೋಯಿತು.)

ಯಂತ್ರದಲ್ಲಿ ಡಾಲರ್ ನೋಟೊಂದನ್ನು ಇಟ್ಟೆ. ಜಾರ್ಜ್ ವಾಶಿಂಗ್‌ಟನ್ನನ ಚಿತ್ರ ಮೇಲೆ ಬರುವಂತೆಯೇ ಇಡಬೇಕೆಂಬ ಸೂಚನೆಯಿದ್ದಿತ್ತಾದ್ದರಿಂದ ಹಾಗೆಯೆ ಇಟ್ಟೆ. ಆ ಮೇಲೆ ಹಿಡಿಕೆ

ಒತ್ತಿದೆ. ಏಸೊ ಸಪ್ಪಳವಾಗಿ ನೋಟು ಯಂತ್ರದ ಹೊಟ್ಟೆಯೊಳಗ ಅದೃಶ್ಯವಾಯಿತು. ಒಂದು-ಎರಡು - ಹತ್ತು ಸೆಕಂದುಗಳು ದಾಟಿದರೂ ಚಿಲ್ಲರೆ ಬರಲಿಲ್ಲ. ನನಗೆ ಚಿಂತೆಯಾಯಿತು. ಯಂತ್ರ ಇಷ್ಟು ಮಂದಗತಿಯದು ಹೇಗೆ? ಹಿಂದಿನಿಂದ ನನಗೆ ಯಂತ್ರದ ಹೊಟ್ಟೆಯೊಳಗೆ ನೋಟು ಹೋದ ಮೇಲೆ ಅದು "ಇಲೆಕ್ಟ್ರಾನಿಕ್ ಇಂಟರ್‌ಪ್ರಿಟೇಶನ್" ಮಾಡುತ್ತದೆಂದು ತಿಳಿಯಿತು. ಯಾರಾದರೂ ಡಾಲರ್ ನೋಟು ಇಟ್ಟಿದ್ದಾರೆಯೆ ಅಥವಾ ಅದೇ ಆಕಾರದ ಕಾಗದದ ತುಂಡನ್ನಿಟ್ಟಿದ್ದಾರೆಯೆ ಎಂದು ನಿಶ್ಚಯಿಸಲು ಯಂತ್ರಕ್ಕೆ ಹತ್ತು ಸೆಕಂದುಗಳು ಬೇಕಾಗುವವು. ನನಗೆ ೫೦-೫೦ ಸೆಂಟುಗಳ ಎರಡು ನಾಣ್ಯಗಳು ದೊರೆತವು. ಆದರೆ ನನಗೆ ಬೇಕಾದದ್ದು ೫ ಸೆಂಟಿನ ನಾಣ್ಯ. ಮತ್ತೊಂದು ಯಂತ್ರದಲ್ಲಿ ೫೦ ಸೆಂಟಿನ ನಾಣ್ಯ ಹಾಕಿ ೨೫ ಸೆಂಟಿನ ಎರಡು ನಾಣ್ಯಗಳು ದೊರೆತವು. ಮತ್ತೊಂದು ಯಂತ್ರದ ಮೂಲಕ ಹತ್ತು ಮತ್ತು ಐದು ಸೆಂಟ್ ನಾಣ್ಯಗಳು ಸಿಕ್ಕವು.

ಐದು ಸೆಂಟಿನ ನಾಣ್ಯ ಬಟ್ಟೆ ತೊಳೆಯುವ ಯಂತ್ರದಲ್ಲಿ ಹಾಕುವಾಗ ಇನ್ನೊಂದು ಪ್ರಶ್ನೆ ಬಂತು. ಯಂತ್ರದ ಮೇಲೆ ಇದ್ದ ಒಂದು ಪುಟ್ಟ ಹರಿವಾಣದಲ್ಲಿ "ತಣ್ಣಗ" ಮತ್ತು "ಬಿಸಿ" ಎಂಬ ಶಬ್ದಗಳು ಇದ್ದವು. ಯಂತ್ರ ಆರಂಭಿಸುವ ಮೊದಲು ಮುಳ್ಳನ್ನು ಯಾವ ನೀರು ಬೇಕೊ ಆ ಸ್ಥಳಕ್ಕೆ ತಿರುಗಿಸಿಡಬೇಕಾಗುತ್ತದೆ. ಅರಿವೆಯನ್ನು ಯಾವ ನೀರಿನಲ್ಲಿ ತೊಳೆಯಬೇಕು ? ನೂಲಿನ ಅರಿವೆ ಬಿಸಿನೀರಿನಲ್ಲಿ ಚೆನ್ನಾಗಿ ಸ್ವಚ್ಛವಾಗುವುದಾದರೆ ನೈಲನ್ ಬಟ್ಟೆ ತಣ್ಣೀರಲ್ಲಿ ಹೆಚ್ಚು ಶುಭ್ರವಾಗುವುದು. ಈ ಎರಡೂ ಬಗೆಯ ಅರಿವೆಗಳನ್ನು ಒಟ್ಟಿಗೆ ಸೇರಿಸಿ ನಾನು ಯಂತ್ರಗಳಲ್ಲಿ ತುಂಬಿದ್ದೆ. ಕೊನೆಗೆ ಮನಸ್ಸು ಗಟ್ಟಿಮಾಡಿ ಮುಳ್ಳನ್ನು "ಬಿಸಿ"ಗೆ ತಂದು ನಾಣ್ಯ ಹಾಕಿದೆ.

ಯಂತ್ರ ಗರಗರ ತಿರುಗತೊಡಗಿತು. ಬುರುಗು ಬರತೊಡಗಿತು. ನಾನು ಸಮಾಧಾನದ ಉಸಿರು ಬಿಟ್ಟು ಬೆಂಚಿನ ಮೇಲೆ ಕುಳಿತೆ. ಬಟ್ಟೆ ತೊಳೆದು ಹಿಂಡಿ ಸಿದ್ಧವಾಗಲು ೪೫ ಮಿನಿಟುಗಳು ಬೇಕಾಗುವುವು. ಅಲ್ಲಿಯ ವರೆಗೇನು ಮಾಡುವುದು ? ಅಮೇರಿಕನ್ನರು ಈ ವೇಳೆಯನ್ನು ಹಾಳು ಮಾಡುವುದಿಲ್ಲ. ಅಮೇರಿಕದಲ್ಲಿ ವೇಳೆ ಹಣಕ್ಕಿಂತಲೂ ಬಲು ತುಟ್ಟಿಯಾದದ್ದು. ಬಟ್ಟೆ ಒಗೆಯುವ ಅಂಗಡಿಗಳು ಸಾಮಾನ್ಯವಾಗಿ ಮಾರ್ಕೆಟ್ಟಿನ ಸಮೀಪದಲ್ಲೆ ಇರುತ್ತವೆ. ಬಟ್ಟೆ ಒಗೆಯಲು ಬಂದವರು ಈ ಅವಧಿಯಲ್ಲಿ ಅಗತ್ಯದ ಸಾಮಾನುಗಳನ್ನು ಕೊಂಡುಕೊಂಡು ಬರುತ್ತಾರೆ. ಪತ್ರಿಕೆ ಅಥವಾ ಕಾದಂಬರಿಗಳನ್ನು ಓದಿಯೂ ಕಾಲ ಕಳೆಯುತ್ತಾರೆ. ಅಭ್ಯಾಸದ ಅಗತ್ಯವಿದ್ದರೆ ಅದನ್ನೂ ನಿರಾಂತಕವಾಗಿ ಮಾಡಿಕೊಳ್ಳಬಹುದು. ಇದಾವುದೂ ಬೇಡವೆಂದರೆ ಕೋಕಾ-ಕೋಲಾವನ್ನು ಕುಡಿಯುತ್ತ ಕುಳಿತಿರಬಹುದು. ಸ್ತ್ರೀಯರಲ್ಲಿ ಕೆಲವರು ಹೆಣೆಯುತ್ತಲೊ ಕಸೂತಿ ಹಾಕುತ್ತಲೊ ಕುಳಿತರೆ ಕೆಲವರು ತಲೆಯ ಮೇಲೊಂದು ವಿಚಿತ್ರವಾದ ಟೊಪ್ಪಿಗೆ ಹಾಕಿಕೊಂಡು ಕೂಡ್ರುತ್ತಾರೆ. ಅದೇನನ್ನುವಿಯಾ ? ವಿದ್ಯುಚ್ಛಕ್ತಿಯ ಸಹಾಯದಿಂದ ಕೂದಲು ಒಣಗಿಸಿಕೊಳ್ಳುವ ವಿಧಾನ ಇದು. ಅಮೇರಿಕದಲ್ಲಿ ವಿದ್ಯುಚ್ಛಕ್ತಿಯನ್ನು ಬಿಡು, ಇಲೆಕ್ಟ್ರಾನಿನ ಸಹಾಯದಿಂದಲೂ ಕೂದಲು ಒಣಗಿಸಿಕೊಳ್ಳುತ್ತಾರೆ.

ನನ್ನ ಯಂತ್ರ ನಿಂತಿತು. ಅರಿವೆ ತೊಳೆದು ಹಿಂಡಿ ಸಿದ್ಧವಾಗಿತ್ತು. ಇನ್ನು ಒಣಗಿಸಬೇಕು. ಇನ್ನೊಂದು ಯಂತ್ರದಲ್ಲಿ ಹತ್ತು ಸೆಂಟ್‌ನ ನಾಣ್ಯ ಹಾಕಿದರೆ ತಗೊ, ಅರಿವೆ ಒಣಗಿ ಸಿದ್ಧ.

ಅರಿವೆ ಒಗೆದು ಸ್ವಚ್ಛವಾಯಿತು. ಗಂಟನ್ನು ಹೊತ್ತುಕೊಂಡು ತಿರುಗಿ ಮನೆಗೆ ಬಂದಿದ್ದೇನೆ. ಆದರೂ ಬಿಕ್ಕಳಿಕೆ ನಿಂತಿಲ್ಲ. ಯಾರಿರಬಹುದು ನನ್ನನ್ನು ನೆನೆಸಿಕೊಳ್ಳುತ್ತಿರುವವರು ? *

ಅವರಿಗೆ ಅವರದೇ ನೀತಿಶಾಸ್ತ್ರವಿದೆ

# ಆಫ್ರಿಕದ ದಿಗಂಬರರು

ಎ. ವಿಷ್ಣುಮೂರ್ತಿ ಹೆಬ್ಬಾರ್

ಅಸಂಖ್ಯ ವೈವಿಧ್ಯಗಳಿಂದೊಡಗೂಡಿದ ಆದಿವಾಸಿಗಳಿಗ ತವರ್ಮನೆಯಾದ ಆಫ್ರಿಕಾಖಂಡದಲ್ಲಿ ಸೂಡಾನಿನ ದಕ್ಷಿಣಕ್ಕೆ ನೈತಾ ನದೀ ತೀರದಲ್ಲಿ ಸೊವನ್ನಾ ಎಂಬ ಚಿಕ್ಕಪ್ರದೇಶದ ನ್ಯೂಯರ್ ಜನಾಂಗ ಕೌತುಕಪ್ರದವೇ ಆಗಿದೆ. ಎರಡು ಮೂರು ಲಕ್ಷದ ವರೆಗೆ ಜನಸಂಖ್ಯೆಯಿರುವ ಇವರು ಅಲ್ಲಲ್ಲಿ ಚಿಕ್ಕ ಚಿಕ್ಕ ಪಂಗಡಗಳಾಗಿದ್ದುಕೊಂಡು ವಾಸಿಸುತ್ತಾರೆ. ಇವರನ್ನು ಆಳಲು ಸರಕಾರವಿಲ್ಲ. ಪ್ರತಿಯೊಂದು ಪಂಗಡಕ್ಕೂ ಒಬ್ಬೊಬ್ಬ ಮುಖಂಡ; ಎಲ್ಲಾ ಧಾರ್ಮಿಕ ಮತ್ತು ನೈತಿಕ ವಿಚಾರಗಳಲ್ಲಿ ಯೋಗ್ಯ ಮಾರ್ಗದರ್ಶಕ. ಇವನನ್ನು ನ್ಯೂಯರರು 'ಚಿರತೆಚರ್ಮದ ಪ್ರಮುಖ' ಎಂದು ಕರೆಯುತ್ತಾರೆ. ಅವನೊಬ್ಬ ಮಾತ್ರ ಯಾವಾಗಲೂ ಚಿರತೆ ಚರ್ಮವನ್ನು ಧರಿಸುವ ಹಕ್ಕು ಪಡೆದಿದ್ದಾನೆ; ಪಂಗಡದ ಉಳಿದ ಎಲ್ಲಾ ಹೆಂಗಸರೂ ಗಂಡಸರೂ ಸಂಪೂರ್ಣ ಬತ್ತಲೆ.

ನ್ಯೂಯರರ ಲೈಂಗಿಕ ರೀತಿನೀತಿಗಳು ಅತ್ಯಂತ ಸ್ವಾರಸ್ಯವಾಗಿವೆ. ನಾವು ಇವರಲ್ಲಿ ಎಲ್ಲೂ ಕಾಣದ ಅಪೂರ್ವ ಮಾದರಿಯ ಲೈಂಗಿಕ ಶಿಕ್ಷಣವು ಸ್ವಾಭಾವಿಕವಾಗಿಯೇ, ಸಣ್ಣ ವಯಸ್ಸಿನಿಂದಲೇ ಎಲ್ಲಾ ಹುಡುಗರಿಗೂ ಹುಡುಗಿಯರಿಗೂ ಕೊಡಲ್ಪಡುವುದನ್ನು ಕಾಣುತ್ತೇವೆ. ಹುಡುಗಿಯರು ಹುಡುಗರಿಗಿಂತ ಕಡಿಮೆ ವಯಸ್ಸಿನಲ್ಲಿಯೇ ಲೈಂಗಿಕ ಶಿಕ್ಷಣ ಪಡೆಯಲು ಅರ್ಹರಾಗುತ್ತಾರೆ. ಸಾಧಾರಣವಾಗಿ ಹುಡುಗ ಹುಡುಗಿಯರು ನಡೆಯಲು ಕಲಿಯುವ ವೇಳೆಗಾಗಲೇ 'ಮದುವೆ ಆಟಗಳನ್ನು' ಆಡತೊಡಗುವರು. ಮೊದಮೊದಲು ಅವರು ಇತರ ಬೆಳೆದ ಹುಡುಗರ ಆಟಗಳನ್ನು ಬಹು ಶ್ರದ್ಧೆಯಿಂದ ನೋಡುತ್ತಾರೆ.ಅನಂತರ ತಾವೂ ಅದರಲ್ಲಿ ಸಹಭಾಗಿಗಳಾಗುತ್ತಾರೆ.

ನ್ಯೂಯರರು ಮುಖ್ಯವಾಗಿ ದನಗಾಹಿಗಳು. ದನಗಳೇ ಅವರ ಸಂಪತ್ತು. ಪ್ರತಿಯೊಬ್ಬ ನ್ಯೂಯರನೂ ಕೆಲವು ಹಸುಗಳನ್ನು ಹೊಂದಿರುತ್ತಾನೆ, ಮತ್ತು ಅವುಗಳನ್ನು ಗುಡಿಸಲ ಸಮೀಪದಲ್ಲಿ ಎಲ್ಲರಿಗೂ ತೋರುವಂತೆ ಕಟ್ಟಿರುತ್ತಾನೆ ಇದನ್ನು ಅವರು 'ಬೈಕಾ' ಎಂದು ಕರೆಯುತ್ತಾರೆ. ಮದುವೆ ಮುಂತಾದ ವಿಷಯಗಳಲ್ಲಿ ಕೂಡ ದನಗಳನ್ನು ಕನ್ಯಾಶುಲ್ಕದ ರೂಪದಲ್ಲಿ ಕೊಡುತ್ತಾರೆ. ಅತಿ ಹೆಚ್ಚು ದನಗಳನ್ನು ಪಡೆದವನು ಪಂಗಡದಲ್ಲಿ ಅಗ್ರಗಣ್ಯನಾಗಿರುತ್ತಾನೆ. ಸಣ್ಣ ಮಕ್ಕಳು

ಮದುವೆ ಆಟದ ಜೊತೆಗೆ ಮಣ್ಣಿನಿಂದ 'ಬೈಕಾ'ಗಳನ್ನು ಕಟ್ಟುವ ಆಟವನ್ನು ಆಡುತ್ತಾರೆ. ಹದಿನಾಲ್ಕನೇ ವರ್ಷ ಪ್ರಾಯದ ವರೆಗೆ ಈ 'ಮದುವೆ ಆಟಗಳು' ಸಾಗುತ್ತವೆ. ಆ ವೇಳೆಗಾಗಲೆ ಪ್ರತಿಯೊಬ್ಬನೂ ತನ್ನ ತನ್ನ ಜೀವನಸಂಗಾತಿಯನ್ನು ಹುಡುಕಿಕೊಂಡಿರುತ್ತಾನೆ. ಆದರೆ, ಒಬ್ಬ ಗಂಡಸಿಗೆ ಅಥವಾ ಒಬ್ಬ ಹೆಂಗಸಿಗೆ ಎಷ್ಟು ಬೇಕಿದ್ದರೂ ಪ್ರೇಮಿಗಳಿರಬಹುದು. ಸಾಧಾರಣವಾಗಿ ಒಬ್ಬಳಿಗೆ ತಲಾ ಒಬ್ಬನಂತೆ ಎರಡು ಮೂರು ಹಳ್ಳಿಗಳಲ್ಲಿ ಪ್ರೇಮಿಗಳಿರುತ್ತಾರೆ. ಮದುವೆ ಮುಂತಾದ ದಿನಗಳಲ್ಲಿ ದೊಡ್ಡ ದೊಡ್ಡ ಗುಂಪುನಾಟ್ಯಗಳು ಜರಗುತ್ತವೆ. ಅಲ್ಲಿ ಆಯಾ ಪ್ರೇಮಿಗಳು ಕೂಡಿಕೊಂಡು ನೃತ್ಯಮಾಡುತ್ತಿದ್ದು ಕೊನೆಗೆ ಜೋಡಿಗಳಾಗಿ ಏಕಾಂತವನ್ನರಸುತ್ತಾ ಚೆದರುವರು. ಇದಕ್ಕೆ ಯಾವ ಬಂಧನವೂ ಇಲ್ಲ. ಹಿರಿಯರ ಅನುಮತಿಯಿಂದಲೇ ಇವೆಲ್ಲವೂ ನಡೆಯುತ್ತವೆ.

ಮದುವೆಗಾಗಿ ನ್ಯೂಯರ್ ಗಂಡಸಿಗೆ ಪರಿಶುದ್ಧೆಯಾದ ಪತ್ನಿ ಸಿಗುವುದು ತೀರಾ ವಿರಳ. ಅದನ್ನು ಅವನು ಬಯಸುವುದೂ ಇಲ್ಲ. ಆದರೆ, ವಿಶೇಷವೆಂದರೆ, ಯಾವುದೇ ಸಂದರ್ಭದಲ್ಲೂ ಒಬ್ಬನು ಜಗಳಗಂಟಿಯಾದ ಹೆಂಗಸನ್ನು ಮದುವೆಯಾಗಲಾರ. ಅಂದಾಕ್ಷಣ ಇವರ ನೀತಿ ಸಡಿಲೆನ್ನಲು ಬಾರದು. ಹೆಂಗಸು ಮದುವೆಯಾಗದೇ ಶಿಶುವಿಗೆ ಜನ್ಮವಿತ್ತಲ್ಲಿ ಅವಳು ಜೀವಮಾನವಿಡೀ ಸೂಳೆಯಾಗಿಯೇ ಉಳಿಯಬೇಕಾದೀತು!

ಮದುವೆಗೆ ಮುಂಚೆ ವರಸಂಧಾನವೂ ವೈಶಿಷ್ಟ್ಯಪೂರ್ಣವಾಗಿಯೇ ಇದೆ. ಒಬ್ಬನ ಮೇಲೆ ಪ್ರೇಮ ಬಿದ್ದರೆ ಹುಡುಗಿ ತನ್ನ ಪ್ರಿಯಕರನ ಮನೆಗೆ ತನ್ನ ಕೆಲವು ಸಂಗಾತಿಗಳೊಡಗೂಡಿ ಹೋಗಿ ಅವನಿಗೆ ಅತಿ ಪ್ರಿಯವಾದ ಒಂದು ಎತ್ತನ್ನೂ ಕೆಲವು ಹಸುಗಳನ್ನೂ ಹೊಡೆದುಕೊಂಡು ತನ್ನ ಮನೆಗೆ ಬರುತ್ತಾಳೆ. ಇದು ಅವಳ ತಂದೆಗೆ ಅವಳು ಅವನನ್ನು ಮದುವೆಯಾಗುತ್ತಾಳೆ ಎಂದು ಸೂಚನೆ. ಕೆಲವು ವೇಳೆ ಪ್ರೇಮಿಕನು ಸಾಕಷ್ಟು ಹಸುಗಳನ್ನು ಹೊಂದದಿದ್ದಲ್ಲಿ ಹುಡುಗಿಯ ತಂದೆ ಮದುವೆಗೆ ಆಕ್ಷೇಪ ಎತ್ತುವುದೂ ಇದೆ. ಹೆಚ್ಚಾಗಿ ವೈಶಾಖ ದಿನಗಳಲ್ಲಿ ಹಳ್ಳಿಯ ಯುವಕರು ತಮ್ಮ ತಮ್ಮಂದಿರಿಂದೊಡಗೂಡಿ ದನಗಳ ಹಿಂಡನ್ನು ಅಟ್ಟಿಕೊಂಡು ಹಾರುತ್ತಾ ಕುಣಿಯುತ್ತಾ ಮೇಯಿಸಲು ಹೋಗುತ್ತಿರುತ್ತಾರೆ. ಈ ಸಂದರ್ಭದಲ್ಲಿ ಅವನಲ್ಲಿ ಪ್ರೀತಿಯುಳ್ಳವಳು ಥಕ್ಕನೆ ಹೋಗಿ ಅವನಿಗೆ ಪ್ರಿಯವಾದ ಎತ್ತನ್ನು ಹಿಡಿದುಕೊಳ್ಳುತ್ತಾಳೆ. ಈ ರೀತಿಯಾಗಿಯೂ ಅವಳು ತನ್ನ ಮನೋಗತವನ್ನು ತಿಳಿಸುವುದುಂಟು. ಯುವಕರು ಹೆಚ್ಚಾಗಿ ಹುಡುಗಿಯರ ವಿಷಯವನ್ನು ಮಾತಾಡುವುದು ಅವರ ಪೌರುಷದ ಗುರುತಾಗಿ ಪರಿಗಣಿಸಲ್ಪಡುತ್ತದೆ.

ನ್ಯೂಯರರಲ್ಲಿ ಮದುವೆಗೆ ಅತಿ ಮುಂಚಿತವಾಗಿಯೇ ವರಸಂಧಾನವು ಜರಗುತ್ತದೆ. ಆದರೆ ಮದುವೆ ಮತ್ತು ಲೈಂಗಿಕ ಸಂಬಂಧ ಅವರು ಯುಕ್ತವಯಸ್ಕರಾಗುವವರೆಗೆ ತಡೆಹಿಡಿಯಲ್ಪಡುತ್ತದೆ. ಹೆಚ್ಚಾಗಿ ಈ ಎಲ್ಲಾ ಕಾರ್ಯಗಳೂ ಮಳೆಗಾಲದಲ್ಲಿಯೇ ಜರಗುತ್ತವೆ. ವರ ಸಂಧಾನದ ದಿನ ಊರ ಪ್ರಮುಖರು ವಧುವಿನ ಮನೆಯಲ್ಲಿ ಸೇರುತ್ತಾರೆ. ದನಗಳನ್ನು ಕನ್ಯಾಶುಲ್ಕವಾಗಿ ಕೊಡುವ ವಿಚಾರದಲ್ಲಿ ಬಿರುಸಾದ ಮಾತುಕಥೆಗಳಾಗುತ್ತವೆ. ಆ ಮೇಲೆ ಮದುವೆಯ ವರೆಗೂ ಈ ಮಾತು-ಕಥೆಗಳು ಮುಂದುವರಿಯುವುದುಂಟು! ಅಂದಿನಿಂದ ಮದುವೆಯ ವರೆಗಿನ ಅವಧಿಯಲ್ಲಿ ಹುಡುಗನು ತನ್ನ ಕೆಲವು ಆಪ್ತ ಸ್ನೇಹಿತರೊಂದಿಗೆ ವಧುವಿನ ಮನೆಗೆ ಆಗಾಗ್ಗ ಹೋಗುತ್ತಾ ಅವಳಲ್ಲಿ ಆತ್ಮೀಯತೆಯನ್ನು ಬೆಳೆಸಲು ಪ್ರಯತ್ನಪಡುತ್ತಾನೆ.

ಸಾಧಾರಣವಾಗಿ ಮದುವೆಯಾಗುವ ಹುಡುಗನು ನಾಲ್ವತ್ತು ದನಗಳನ್ನು ವಧುವಿನ ಕಡೆಯವರಿಗೆ ಕೊಡಬೇಕು. ಆ ನಾಲ್ವತ್ತರಲ್ಲಿ ಇಪ್ಪತ್ತು ವಧುವಿನ ತಂದೆಗೂ ಇಪ್ಪತ್ತು ವಧುವಿನ ತಾಯಿಗೂ ಹೋಗುತ್ತವೆ. ಆ ಇಪ್ಪತ್ತರಲ್ಲಿ ತಂದೆಯು ಸರಿಯಾಗಿ ಅರ್ಧವನ್ನು ತನ್ನ ಬಂಧುಗಳಿಗೆ ಕೊಡಬೇಕು; ಉಳಿದರ್ಧ ಅವನಿಗೇ. ತಾಯಿಯೂ

ಹೀಗೆಯೇ ಮಾಡುತ್ತಾಳೆ. ಮದುವೆಯ ದಿನ ಮಧ್ಯಾಹ್ನ ಧಾರ್ಮಿಕ ಹೋಮಗಳನ್ನು ಆಚರಿಸುತ್ತಾರೆ.

ಆ ಮೇಲೆ ಸಂಜೆಗೆ ನೃತ್ಯ-ಕುಣಿತಗಳಾಗುತ್ತವೆ. ಇದರಲ್ಲಿ ಊರ ಹಿರಿಯರೂ ಭಾಗ ವಹಿಸುವುದುಂಟು. ಮದುವೆಯ ಸಮಯದಲ್ಲಿ ವರನೂ ವಧುವಿನ ತಂದೆ ಮತ್ತು ಪುರೋಹಿತರೂ ಮಾತ್ರ ಕಾಡುಬೆಕ್ಕಿನ ಚರ್ಮವನ್ನು ತೊಟ್ಟುಕೊಳ್ಳಬಹುದು. ಉಳಿದವರೆಲ್ಲಾ ಬತ್ತಲೆಯಾಗಿಯೇ ಇರಬೇಕು. ಮದುವೆಯಾಗಿ ಸ್ವಲ್ಪ ದಿನಗಳಲ್ಲಿಯೆ ಗಂಡ-ಹೆಂಡಿರ ಸಮಾಗಮವು ವೈಭವಪೂರ್ಣವಾಗಿ ಆಚರಿಸಲ್ಪಡುವುದು. ಮದುವೆಗೆ ಮುಂಚೆಯೇ ಸ್ತ್ರೀಯು ಗರ್ಭಿಣಿಯಾಗಿದ್ದರೆ ಮಾತ್ರ ಈ ಸಮಾರಂಭವು ಆಚರಿಸಲ್ಪಡುವುದಿಲ್ಲ.

ನ್ಯೂಯರರಲ್ಲಿ ಇರುವ ಇನ್ನೊಂದು ವಿಚಿತ್ರ ಸಂಗತಿಯೆಂದರೆ ಯಾವನಾದರೂ ತರುಣನು ತನ್ನ ಪ್ರೇಯಸಿಯೊಂದಿಗೆ ತಿಳಿದಾಗಲಿ ತಿಳಿಯದೆ ಆಗಲಿ ಊಟದ ಅಥವಾ ತಿನ್ನುವ ವಿಚಾರವನ್ನು ಮಾತಾಡಲೇಕೂಡದು! ಹಾಗೆಯೇ ಅವನು ತನ್ನ ಬಂಧುಗಳೊಡನೆ ಎಂದಿಗೂ ಲೈಂಗಿಕ ವಿಚಾರಗಳ ಮಾತನ್ನೆತ್ತಲೇಕೂಡದು. ಅದು ಕಠಿನವಾಗಿ ನಿಷೇಧಿಸಲ್ಪಟ್ಟಿರುತ್ತದೆ. ಯುವಕನಾಗಲೀ ಯುವತಿಯರಾಗಲೀ ತಾವು ಊಟಮಾಡುವಾಗ ಎಂತಹ ಸಂದರ್ಭದಲ್ಲಿಯೂ ತಮ್ಮ ಪ್ರೇಮಿಗಳನ್ನು ಹತ್ತಿರ ಬರಗೊಡಲಾರರು.

ನ್ಯೂಯರ್ ಜನಾಂಗದವರು ಹಸುಗಳನ್ನು ಬಹುವಾಗಿ ಪ್ರೀತಿಸುತ್ತಾರೆ. ಒಂದು ಹಸುವು ಆಕಸ್ಮಾತ್ತಾಗಿ ಸತ್ತು ಹೋದರೆ ಅದರ ಮಾಂಸವನ್ನು ಬಹಳ ಭಯಭಕ್ತಿಗಳಿಂದ ಸೇವಿಸುತ್ತಾರೆ. ದಿನವಿಡೀ ಅವುಗಳನ್ನು ಮೇಯಿಸುವುದು, ಮೀಯಿಸುವುದು ಮೊದಲಾದ ಕಾರ್ಯಗಳಲ್ಲಿ ತಲ್ಲೀನರಾಗಿರುತ್ತಾರೆ. ಹಸುಗಳಲ್ಲಿ ಅವರಿಗಿರುವ ಅಪಾರ ಪ್ರೀತಿಯ ಸಂಕೇತವಾಗಿ ಗಂಡಸರೂ ಹೆಂಗಸರೂ ಬಹುವಾಗಿ ಅವುಗಳ ಹೆಸರನ್ನೇ ತಮಗೆ ಇಟ್ಟುಕೊಳ್ಳುತ್ತಾರೆ. ಹೆಂಗಸರು ಮಾತ್ರ ದನಗಳ ಹಾಲನ್ನು ಕರೆಯಬೇಕು. ಇದು ಗಂಡಸರಿಗೆ ನಿಷಿದ್ಧ. ರಾತ್ರಿ ಮನೆಯ ಒಬ್ಬ ಹುಡುಗನು 'ಬೈಕಾ' ನಲ್ಲೀ ಮಲಗುತ್ತಾನೆ. ಅಪರಿಚಿತರು ಮನೆಗೆ ಬಂದರೆ ಅವರೊಡನೆ ಮಾತಾಡುವುದಕ್ಕೆ 'ಬೈಕಾ' ಎಂಬುದೇ ಅವರ 'ಆಫೀಸ್ ರೂಮ್'. ದನಗಳ ಮೇಲಿನ ಭಕ್ತಿ ಅವರಿಗೆ ಎಷ್ಟೆಂದರೆ ಹಾಲು ಕರೆಯುವಾಗ ಹಸು ಮೂತ್ರವಿಸರ್ಜನೆ ಮಾಡಿದರೆ ಅದರಿಂದ ಅವರು ಮುಖವನ್ನು ತೊಳೆದುಕೊಳ್ಳುತ್ತಾರೆ. *



"ನನ್ನ ಹಣದಲ್ಲಿ ದೇವರಿಗೆಷ್ಟು ಕೊಡುವೆ ಎಂಬುದು ಮುಖ್ಯವಲ್ಲ. ದೇವರ ಹಣದಲ್ಲಿ ನಾನು ನನಗಾಗಿ ಎಷ್ಟು ಉಳಿಸಿಕೊಳ್ಳುವೆನು ಎಂಬುದೇ ಮುಖ್ಯವಾದುದು."

ರಾಬರ್ಟ್ ಲಾಟಾರ್ನೊ

ಸಂಗ್ರಾಹಕ: ರವೀಂದ್ರನಾಥ ಎಸ್. ಬಿ.

* * *

ನಮ್ಮ ಕೆಲಸದಲ್ಲಿ ಮಗ್ನರಾಗುತ್ತೇವೆ; ಯಾವ ವಿಘ್ನದಿಂದಲೂ ರೊಚ್ಚಿಗೇಳುವುದಿಲ್ಲ; ಯಾವ ಮಹತ್ವಾಕಾಂಕ್ಷೆಯನ್ನೂ ಹೊಂದಿರುವುದಿಲ್ಲ; ನಮಗೇನೂ ಲಾಭ ಬೇಡ; ಯಾವ ಸುಖದ ಅಪೇಕ್ಷೆಯೂ ನಮಗಿಲ್ಲ; ನಮಗೆ ಯಾತರ ಚಿಂತೆಯೂ ಇಲ್ಲ; ನಾವು ಅಧೀರರಾಗುವುದಿಲ್ಲ ಮತ್ತು ಪಶ್ಚಾತ್ತಾಪಪಡುವುದಿಲ್ಲ ಎಂಬ ನಿಶ್ಚಯವನ್ನು ಪ್ರತಿದಿನವೂ ಮಾಡಿ ಜೀವನ ಪಥವನ್ನು ಕ್ರಮಿಸಬೇಕು. —ರಸ್ಕಿನ್

# ಮುಪ್ಪನ್ನು ಹೋಗಲಾಡಿಸಿರಿ

ಜ. ಲ. ಶ್ರೀವಾಸ್ತವ

ಮೂವತ್ತೈದು-ನಲವತ್ತು ವರ್ಷಗಳಾಗುವುದೇ ತಡ, ಮನುಷ್ಯನಿಗೆ ವೃದ್ಧಾಪ್ಯದ ಭಯ ಅಂಟಿಕೊಳ್ಳುತ್ತದೆ. ನಲವತ್ತು ನಲವತ್ತೈದರ ಹೊತ್ತಿಗೆ ಈ ಭಯ ಅವನಲ್ಲಿ ಬೇರೂರಿಬಿಟ್ಟಿರುತ್ತದೆ. ಐವತ್ತು ವರ್ಷಗಳಾದವೋ ವೃದ್ಧಾಪ್ಯ ಅವನನ್ನು ಆಕ್ರಮಿಸಿಬಿಡುತ್ತದೆ. ಐವತ್ತು ವರ್ಷಗಳನ್ನು ದಾಟಿದರೂ ವೃದ್ಧಾಪ್ಯದ ಶಿಥಿಲತೆ ತಟ್ಟದೆ ಯೌವನದ ಸ್ಫೂರ್ತಿಯನ್ನು ಹೊಂದಿರುವವರು ತೀರ ಕಡಿಮೆ.

ಯೌವನದಂಥ ಅಮೂಲ್ಯ ವಸ್ತು ಇಷ್ಟು ಬೇಗನೆ ಕೈತಪ್ಪಿ ಹೋಗುವುದೆಂಬ ಮಾತು ತೀರ ನಿರಾಶಾಜನಕವಾದದ್ದಾಗಿದೆ. ಈ ಹಾಳು ವೃದ್ಧಾಪ್ಯವು ಯೌವನದ ಸಕಲ ಆಕರ್ಷಣೆಗಳನ್ನು ಸಮಾಪ್ತಿಗೊಳಿಸಿಬಿಡುತ್ತದೆ.

ಇದರಿಂದ ಪಾರಾಗುವ ಉಪಾಯವೇನಾದರೂ ಇದೆಯೆ? ಇಷ್ಟು ಬೇಗನೆ ವೃದ್ಧಾಪ್ಯ ಬರುವುದು ಅಗತ್ಯವಾದದ್ದೆ? ಯಾವ ರೀತಿಯಿಂದಾದರೂ ಇದನ್ನು ತಡೆಹಿಡಿಯುವುದು ಅಥವಾ ಬರದಂತೆಯೆ ಮಾಡುವುದು ಸಾಧ್ಯವೇ?

ವೃದ್ಧಾಪ್ಯವೆಂದರೇನು? ಬಾಲ್ಯ, ಕಿಶೋರಾವಸ್ಥೆ ಮತ್ತು ಯೌವನಗಳಂತೆಯೆ ವೃದ್ಧಾಪ್ಯವೂ ದೇಹದ ಅನಿವಾರ್ಯವಾದ ಮತ್ತು ಸ್ವಾಭಾವಿಕವಾದ ಸ್ಥಿತಿ ಎಂದು ಬಹಳ ಜನ ತಿಳಿಯುತ್ತಾರೆ. ಆದರೆ ನಿಜವೆಂದರೆ ಹಾಗಿಲ್ಲ.

ಬಾಲ್ಯ, ಕಿಶೋರಾವಸ್ಥೆ ಮತ್ತು ಯೌವನಗಳು ಶಾರೀರಕ ವಿಕಾಸಕ್ರಮದ ಅವಸ್ಥೆಗಳಾಗಿವೆ. ಮೊದಲನೆಯದು ಪ್ರಾರಂಭದ, ಎರಡನೆಯದು ಮಧ್ಯದ ಅವಸ್ಥೆಯಾಗಿದೆ. ಯೌವನವೆಂದರೆ ವಿಕಾಸಕ್ರಮದ ಪೂರ್ಣತೆಯೆ ಸರಿ. ಮಾನವ ಶರೀರದ ಪೂರ್ಣ ವಿಕಾಸವಾಗುವುದೇ ಯೌವನ. ಪ್ರತಿಯೊಂದು ಕಾರ್ಯವನ್ನು—ಸಂತಾನೋತ್ಪತ್ತಿಯನ್ನು ಕೂಡ— ಮಾಡಲು ಶರೀರ ಸಮರ್ಥವಾಗಿದೆ ಎಂದೇ ಯೌವನದ ಅರ್ಥವಾಗಿದೆ.

ವೃದ್ಧಾಪ್ಯವು ಮಾನವ ಶರೀರದ ಅಕ್ಷಮತೆಯ ದ್ಯೋತಕವಾಗಿದೆ. ವೃದ್ಧಾಪ್ಯವೆಂದರೆ ಶರೀರವು ಪ್ರತಿಯೊಂದು ರೀತಿಯಲ್ಲೂ ಅಶಕ್ತವಾಗುತ್ತಿದೆಯೆಂದರ್ಥ. ಇದು ಶಾರೀರಿಕ ದಣಿವು ನಿವಾರಣೆಯಾಗಲಾರದಂಥ ಸ್ಥಿತಿಗೆ ಮುಟ್ಟಿದಾಗಿನ ಅವಸ್ಥೆ.

ವೃದ್ಧಾಪ್ಯವೆನ್ನುವುದು ಒಂದು ನಿಶ್ಚಿತ ಸಮಯಕ್ಕೆ ಬಂದೇತೀರುವ ಅವಸ್ಥೆಯಲ್ಲ. ನಾವೇ ಆಮಂತ್ರಿಸಿ ಬರಮಾಡಿಕೊಳ್ಳುವಂಥ ವಸ್ತು ಇದು. ಅಂದ ಮೇಲೆ ನಾವು ಇದನ್ನು ದೂರವಿಡಲೂ ಶಕ್ತರಾಗಬಹುದಲ್ಲವೆ? ಒಂದೆರಡು ವರ್ಷಗಳ ಮಟ್ಟಿಗಲ್ಲ, ಹತ್ತು-ಹನ್ನೆರಡು ವರ್ಷಗಳವರೆಗೆ ಅಥವಾ ಶಾಶ್ವತವಾಗಿ ನಾವು ವೃದ್ಧಾಪ್ಯವನ್ನು ನಮ್ಮ ಬಳಿ ಸುಳಿಯದಂತೆ ದೂರ ಮಾಡಬಹುದು.

ವೃದ್ಧಾಪ್ಯವನ್ನು ತರುವ ಕಾರಣಗಳನ್ನು ನಾವು

"ಮನೋರಮಾ" ದಿಂದ

ಎರಡು ಗುಂಪುಗಳಾಗಿ ವಿಭಾಗಿಸಬಹುದು: ಮಾನಸಿಕ ಮತ್ತು ಶಾರೀರಿಕ (ಆಹಾರ ವಿಹಾರಕ್ಕೆ ಸಂಬಂಧಪಟ್ಟವು).

ಮಾನಸಿಕ ಕಾರಣಗಳಲ್ಲಿ ೧. ಭಾವಾವೇಗ ಜನ್ಯ ಉತ್ತೇಜನಗಳು, ೨. ಚಿಂತೆ, ೩. ವೃದ್ಧಾಪ್ಯದ ಅಂಜಿಕೆ ಮತ್ತು ೪. ಮಾನಸಿಕ ಅಸಂತೋಷ ಇವು ಮುಖ್ಯವಾದರೆ, ಶಾರೀರಿಕ ಕಾರಣಗಳಲ್ಲಿ ೧. ಅಸಮರ್ಪಕ ಆಹಾರ, ೨. ವ್ಯಾಯಾಮದ ಅಭಾವ ಅಥವಾ ಆಧಿಕ್ಯ, ೩. ಸರಿಯಾದ ವಿಶ್ರಾಂತಿಯ ಅಭಾವ ಮತ್ತು ೪. ಹತ್ತಿಕ್ಕಿದ ಕಾಮವಾಸನೆ ಇಲ್ಲವೆ ಅತಿರೇಕ ಕಾಮಜೀವನ ಇವು ಮುಖ್ಯ ಕಾರಣಗಳು.

ಭಾವಾವೇಗ ಜನ್ಯ ಉತ್ತೇಜನಗಳಿಂದ ಸ್ನಾಯುಮಂಡಲದಲ್ಲಿ ಎಳೆತವುಂಟಾಗುತ್ತದೆ. ಉತ್ತೇಜನ ಕಡಿಮೆಯಾದೊಡನೆ ಸ್ನಾಯುಗಳು ಪುನಃ ಮೊದಲಿನ ಸ್ಥಿತಿಗೆ ಬರುತ್ತವೆ. ಪುನಃ ಪುನಃ ಹೀಗಾದಲ್ಲಿ ಈ ಆಕುಂಚನ-ಪ್ರಸರಣಗಳಿಂದ ಸ್ನಾಯುಗಳು ಶಿಥಿಲವಾಗಿ ಪುನಃ ಮೊದಲಿನ ಸ್ವಾಭಾವಿಕ ಸ್ಥಿತಿಗೆ ಬರುವ ಸಾಮರ್ಥ್ಯವನ್ನು ಕಳೆದುಕೊಂಡುಬಿಡುತ್ತವೆ. ಅವುಗಳ ಬಿಗುವು ಇಲ್ಲದಂತಾಗಿ ಹೋಗುತ್ತದೆ.

ಸ್ನಾಯು ಮಂಡಲ ಈ ರೀತಿ ಶಿಥಿಲವಾಗುತ್ತಲೆ ಅದರಲ್ಲಿ ಒರಟುತನವೂ ಪ್ರಾಪ್ತವಾಗುತ್ತದೆ. ಅದರ ಸ್ವಾಭಾವಿಕವಾದ ಕೋಮಲತೆ (ಯೌವನದ ರಕ್ಷಣೆಗೆ ಅಗತ್ಯವಾದ ಗುಣವಿದು) ಇಲ್ಲದಂತಾಗುವುದು. ಇದೂ ಅಲ್ಲದೆ ಭಾವಾವೇಗದ ಆಕ್ರಮಣದಿಂದ ಮಿದುಳಿನ ಸಮತೋಲವೂ ತಪ್ಪುತ್ತ ಹೋಗಿ ಆಮೇಲೆ ಯೌವನದ ಅನಿವಾರ್ಯ ಲಕ್ಷಣಗಳಾದ ಸ್ಫೂರ್ತಿ ಮತ್ತು ಪ್ರಸನ್ನತೆ ಮನಸ್ಸಿನಿಂದ ಮಾಯವಾಗಿ ವೃದ್ಧಾಪ್ಯ ಮುಸುಕುತ್ತದೆ.

ಕ್ರೋಧ, ಭಯ, ಗಾಬರಿ, ಅತ್ಯಧಿಕವಾದ ಹರ್ಷ ಅಥವಾ ದುಃಖಗಳಿಂದ ನಿಮ್ಮನ್ನು ರಕ್ಷಿಸಿಕೊಳ್ಳಿ. ಇಂಥ ಕ್ಷಣಗಳು ಬಂದಾಗ ಮಾನಸಿಕ ಶಾಂತಿಯನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡಿ ಕ್ರೋಧಾದಿಗಳು ನಿಮ್ಮ ಮೇಲೆ ಪ್ರಭುತ್ವ ಸ್ಥಾಪಿಸದಂತೆ ಜಾಗ್ರತೆ ವಹಿಸಿ.

ಚಿರಯೌವನದ ಎರಡನೆಯ ಶತ್ರುವೆಂದರೆ ಚಿಂತೆ. ರಾತ್ರಿ ಕಪ್ಪು ಕೂದಲಿನ ರಾಶಿಯಲ್ಲಿ ಚಿಂತೆಯನ್ನು ಅಡಗಿಸಿಟ್ಟು ಮಲಗಿದವರು ಬೆಳಿಗ್ಗೆ ಎದ್ದಾಗ ತಲೆಯಲ್ಲಿ ಬಿಳಿ ಕೂದಲನ್ನು ಕಾಣಬಹುದು. ಚಿಂತೆಯಿಂದಾಗುವ ಕೆಲವೇ ಗಂಟೆಗಳಲ್ಲಿ ಅದು ೨೫ ರ ಯುವಕನನ್ನು ೫೦ ರ ವೃದ್ಧನನ್ನಾಗಿ ಮಾಡಿಬಿಡುವುದು.

ಯಾವುದೇ ಒಂದು ಪ್ರಶ್ನೆ ಅಥವಾ ಸಮಸ್ಯೆಯನ್ನು ಕುರಿತು ಸಂತತವಾಗಿ ಯೋಚನೆಗೊಳಗಾಗುವುದೇ ಚಿಂತೆಯ ರೂಪ. ಈ ಸಮಯದಲ್ಲಿ ಚಿಂತಿಸುವ ವ್ಯಕ್ತಿಯ ಮಿದುಳು ಮೂಲ ಪ್ರಶ್ನೆಯನ್ನು ಬದಿಗಿಟ್ಟು ಅತ್ತಿತ್ತ ವ್ಯರ್ಥ ಅಲೆಯುತ್ತಿರುತ್ತದೆ. ಮತ್ತು ಅನಿಷ್ಟಕರವಾದ ಪರಿಣಾಮವನ್ನೆ ಯೋಚಿಸುತ್ತ ಅಂಜಿ ಕಂಗಾಲಾಗುತ್ತದೆ. ಸದಾ ಅನಿಷ್ಟದ ಕಲ್ಪನೆಯಲ್ಲಿ ಮಗ್ನವಾಗಿ ಜೀವನವನ್ನು ಕಷ್ಟಪೂರ್ಣವನ್ನಾಗಿ ಮಾಡುತ್ತದೆ.

ಚಿಂತೆಯಿಂದ ಮುಕ್ತನಾಗಲು ಇರುವ ಖಂಡಿತ ಮಾರ್ಗವೆಂದರೆ ಸಾಹಸ ಮತ್ತು ಯೋಗ್ಯ ತಿಳಿವಳಿಕೆಗಳನ್ನುಂಟುಮಾಡಿಕೊಳ್ಳುವುದು. ನಮ್ಮ ಮುಂದಿರುವ ಪ್ರಶ್ನೆಯನ್ನು ಕೂಲಂಕಷವಾಗಿ ವಿಚಾರಿಸಿ ನಿವಾರಣೆಯ ಸಕಲ ಉಪಾಯಗಳನ್ನೂ ಯೋಚಿಸಿ ಅವುಗಳಲ್ಲಿ ಸರ್ವೋತ್ತಮವಾದುದನ್ನು ಆರಿಸಿಕೊಳ್ಳಬೇಕು. ಇದಕ್ಕಾಗಿ ಕಾಗದದ ಮೇಲೆ ನಮ್ಮ ಸಮಸ್ಯೆಯನ್ನೂ ಅದರ ನಿವಾರಣೋಪಾಯಗಳನ್ನೂ ಬರೆದುಕೊಂಡು ವಿಚಾರಾನಂತರದಲ್ಲಿ ಅವುಗಳಲ್ಲಿ ಶ್ರೇಷ್ಠವಾದುದನ್ನು ಯೋಜಿಸುವ ನಿರ್ಧಾರ ಮಾಡಬೇಕು. ಈ ಬಗೆಯ ಸಾರಾಸಾರ ವಿಚಾರವು ಚಿಂತೆಯನ್ನು ದೂರಮಾಡಲು ಸಹಾಯ ನೀಡುವುದು.

ನೀವು ಒಂದಿಷ್ಟು ಹಾನಿ ಅಥವಾ ಅನಿಷ್ಟವನ್ನು ಭೋಗಿಸಿಯೆ ತೀರಬೇಕಾದಂಥ ಪ್ರಸಂಗ

ಗಳೂ ನಿಮ್ಮ ಮುಂದೆ ಬರಬಹುದು. ಅಂಥ ಪ್ರಸಂಗದಲ್ಲಿ ಸಾಹಸದಿಂದ, ಶಾಂತಿಯಿಂದ ಆ ಕಷ್ಟವನ್ನು ಸಹಿಸಬೇಕು. ಇದರಿಂದ ನಿಮಗೆ ಮತ್ತಾವ ಹಾನಿಯೂ ಸಂಭವಿಸುವುದಿಲ್ಲ ಮಾತ್ರ ವಲ್ಲ, ಕಠಿನ ಪ್ರಸಂಗಗಳಲ್ಲಿ ಧೈರ್ಯದಿಂದಿದ್ದು ಹೊಸ ಮಾರ್ಗವನ್ನು ಹುಡುಕಿಕೊಳ್ಳುವ ಶಕ್ತಿಯೂ ನಿಮ್ಮಲ್ಲುಂಟಾಗುವುದು. ನಿಶ್ಚಿತ ಸಂಕಟವನ್ನು ಪ್ರತಿಭಟನೆಯಿಲ್ಲದೆ ಸಹಿಸುವುದ ರಲ್ಲೂ ಬುದ್ಧಿವಂತಿಕೆಯಿದೆ.

ನಾವು ಮುದುಕರಾಗುತ್ತಿದ್ದೇವೆ, ನಮಗೆ ಹೆಚ್ಚು ವಯಸ್ಸಾಗಿ ಬಿಟ್ಟಿತು, ಜನ ನಮ್ಮನ್ನು ಮುದುಕರೆನ್ನದೆ ಬಿಡುವುದಿಲ್ಲ ಎಂಬ ಭಯವು ಕೂಡ ವೃದ್ಧಾಪ್ಯವನ್ನು ಬರಮಾಡುತ್ತದೆ. ಮನಸ್ಸಿನಲ್ಲಿಯೇ ವೃದ್ಧಾಪ್ಯದ ಕಲ್ಪನೆ ಮಾಡಿಕೊಂಡು ಅಂಜತೊಡಗಿದಾಗ ನಮ್ಮ ಸುಪ್ತ ಚೇತನದಲ್ಲಿ ಈ ಕಲ್ಪನೆ ದೃಢವಾಗಿಬಿಡುತ್ತದೆ. ಇದರಿಂದ ಪ್ರಭಾವಿತವಾಗಿ ಸುಪ್ತಚೇತನವು ವೃದ್ಧಾಪ್ಯದ ಲಕ್ಷಣಗಳನ್ನು ಶರೀರದಲ್ಲಿ ಹುಟ್ಟಿಸತೊಡಗುತ್ತದೆ. ಕೆಲವೇ ದಿನಗಳಲ್ಲಿ ನಾವು ನಮ್ಮ ಯೌವನ ಕಳೆದು ಹೋಗುತ್ತಿರುವ ಅನುಭವವನ್ನು ಹೊಂದುತ್ತೇವೆ.

ಮುಟ್ಟಾಗುವುದು ನಿಂತಿತೆಂದರೆ ಅದು ವೃದ್ಧಾಪ್ಯದ ಲಕ್ಷಣವೆಂದು ಹೆಚ್ಚಿನ ಸ್ತ್ರೀಯರು ಭಾವಿಸುತ್ತಾರೆ. ಆದರೆ ಮುಟ್ಟು ನಿಲ್ಲುವ ನಿಜವಾದ ಕಾರಣವು ವೃದ್ಧಾಪ್ಯದ ಆಗಮನದ ಲಕ್ಷಣವಾಗಿರದೆ ಯೌವನವನ್ನು ಕಾಯ್ದಿಡುವುದೇ ಆಗಿದೆ. ೧೫ ರಿಂದ ೪೦-೪೫ ರ ವರೆಗಿನ ಆಯುಷ್ಯದ ೨೫-೩೦ ವರ್ಷಗಳ ಅವಧಿಯು ಸಂತಾನೋತ್ಪತ್ತಿಗೆ ಸಾಕಷ್ಟಾಗುವುದು ಎಂದು ನಿಸರ್ಗದ ತಿಳಿವಳಿಕೆ. ಇದಕ್ಕೂ ಹೆಚ್ಚಿಗೆ ಕಾಲ ಸಂತಾನೋತ್ಪತ್ತಿ ನಡೆದರೆ ಅದರಿಂದ ಸ್ತ್ರೀಯರ ಆರೋಗ್ಯ ಹಾಳಾಗುವುದರಿಂದ ಮುಟ್ಟು ಬಂದು ಮಾಡಿ ನಿಸರ್ಗವು ಅವರಿಗೆ ಯೌವನವನ್ನು ಶೇಷಾಯುಷ್ಯ ಕಾಲದಲ್ಲಿ ರಕ್ಷಿಸಿಕೊಳ್ಳಲು ಅನುವು ಮಾಡಿಕೊಡುತ್ತದೆ.

ಕೆಲವರಂತೂ ಸದಾ ಕೊರಗುತ್ತಲೇ ಇರುತ್ತಾರೆ. ಮಾನಸಿಕ ಅಸಂತುಷ್ಟಿಯಿಂದ ಕೂಡಿದ ಇವರು ಯಾವಾಗಲೂ "ನನ್ನ ಆರೋಗ್ಯ ಕೆಡುತ್ತಿದೆ, ಎಲುವು ಕಾಣಿಸಹತ್ತಿದೆ", "ಇಲ್ಲಿಯ ಹವೆಯೆ ನನಗೆ ಒಗ್ಗುವುದಿಲ್ಲ", "ನಿನ್ನೆ ಒಂದಿಷ್ಟು ಹೆಚ್ಚು ತಿಂದುಬಿಟ್ಟೆ, ಈಗ ಅದು ಬಾಧಿಸಹತ್ತಿದೆ" ಎಂದು ಮುಂತಾಗಿ ದೂರಿಕೊಳ್ಳುತ್ತಿರುತ್ತಾರೆ. ಇದರ ತಾತ್ಪರ್ಯವಿಷ್ಟೆ; ಇವರು ಸದಾ ಒಂದಿಲ್ಲೊಂದು ಸಂಗತಿಯಿಂದ ಅಸಂತುಷ್ಟರಾಗಿರುತ್ತಾರೆ. ತಾವು ತಮ್ಮ ಆರೋಗ್ಯ ವಿಚಾರದಲ್ಲಿ ತುಂಬ ಕಾಳಜಿಯಿಂದಿರುತ್ತೇವೆ ಎಂದು ಇವರು ತಿಳಿಯುತ್ತಾರೆ. ಆದರೆ ಇವರ ಈ ಕೊರಗು ಇವರ ಆರೋಗ್ಯವನ್ನು ಕಾಪಾಡುವ ಬದಲು ಕೆಡಿಸುತ್ತಲೇ ಹೋಗುತ್ತದೆ.

ಅಂದರೆ ಆರೋಗ್ಯದ ಬಗ್ಗೆ ಕಾಳಜಿ ವಹಿಸಬಾರದೆಂದಲ್ಲ. ಆದರೆ ಸದಾ ಅಸಂತುಷ್ಟರಾಗಿದ್ದರೆ ನಡೆಯದು. ನೀವಿರುವ ಸ್ಥಿತಿಯನ್ನು ಬದಲಿಸಲು ಸಾಧ್ಯವಿಲ್ಲದಾಗ ಅದರೊಡನೆ ಸಂಧಾನ ಮಾಡಿಕೊಳ್ಳುವುದು ಅಂದರೆ ಅದಕ್ಕೆ ಒಗ್ಗಿಕೊಳ್ಳುವುದು ಹಿತಕರವಾದದ್ದು. ಸಂತುಷ್ಟರಾಗಿರಲು ಕಲಿಯಬೇಕು. ಸದಾ ಅಸಂತುಷ್ಟರಾಗಿದ್ದರೆ ಅಥವಾ ಪರಿಸ್ಥಿತಿಯೊಡನೆ ವಿದ್ರೋಹವೆಸಗುತ್ತಿದ್ದರೆ ಯೌವನ ನಷ್ಟವಾಗುವುದು.

ವಿಪರೀತ ಪರಿಸ್ಥಿತಿಯಲ್ಲೂ ಸದೃಢರಾಗಿರುವವರನ್ನು ಕಂಡರೆ ಆಶ್ಚರ್ಯವಾಗುತ್ತದೆ. ಗ್ರಾಮಾಂತರ ಪ್ರದೇಶದಲ್ಲಿ ಸರಿಯಾದ ಆಹಾರ ಸಿಗದಿರುವವರೆಷ್ಟೋ ಜನ ಇರುತ್ತಾರೆ. ಆದರೂ ಅವರ ಆರೋಗ್ಯ ಚೆನ್ನಾಗಿರುತ್ತದೆ. ಪ್ರಸಿದ್ಧ ವೈಜ್ಞಾನಿಕ ಸ್ಟೀಫನ್‌ಸನ್ ಆರು ವರ್ಷಗಳ ಕಾಲ ಆರ್ಕ್‌ಟಿಕ್ ಪ್ರದೇಶದಲ್ಲಿ ಕೇವಲ ಮಾಂಸ ಮತ್ತು ನೀರುಗಳ ಮೇಲೆ ಜೀವಿಸಿದ. ಅವನ ಆರೋಗ್ಯ ಮೊದಲಿಗಿಂತ ಉತ್ತಮವಾಯಿತಲ್ಲದೆ ಅವನ ತೂಕವೂ ಹೆಚ್ಚಿತು. ಜಗತ್ತು ಅವನ ಮಾತನ್ನು ನಂಬದಾದಾಗ ಆತ ನ್ಯೂಯಾರ್ಕಿನಲ್ಲಿ ಒಂದು ವರ್ಷದ ವರೆಗೆ ಕೇವಲ

ಮಾಂಸ ಮತ್ತು ನೀರುಗಳ ಮೇಲೆಯೆ ಜೀವಿಸಿದ. ಈ ಪ್ರಯೋಗ ಕಾರ್ನೆಲ್ ಯುನಿವರ್ಸಿಟಿ ಮೆಡಿಕಲ್ ಹಾಲ್ ಮತ್ತು ರಸೆಲ್ ಸೇಜ್ ಇನ್‌ಸ್ಟಿಟ್ಯೂಟ್ ಆಫ್ ಪೆಥಾಲಜಿಗಳ ನೇತೃತ್ವದಲ್ಲಿ ನಡೆಯಿತು. ಮಾಂಸಾಹಾರದಿಂದ ಸ್ಟೀಫನ್‌ಸನ್ನನ ಪ್ರಕೃತಿಗೇನೂ ಕೆಡಕಾಗಲಿಲ್ಲ ಎಂದು ಸಿದ್ಧವಾಯಿತು.

ಇಲ್ಲಿ ಮಾಂಸವು ಪೂರ್ಣ ಆಹಾರವಲ್ಲ ಎಂದು ವಿಜ್ಞಾನ ಅಭಿಪ್ರಾಯಪಡುತ್ತದೆ. ಬರೀ ಮಾಂಸವನ್ನು ತಿಂದು ಮನುಷ್ಯ ಆರೋಗ್ಯವನ್ನು ಕಾಪಾಡಿಕೊಳ್ಳಲಾರ. ಸತ್ಯ ಹೀಗಿದ್ದರೂ ಸ್ಟೀಫನ್‌ಸನ್ ಪರಿಸ್ಥಿತಿಗೆ ಹೊಂದಿಕೊಳ್ಳಬಲ್ಲವನಾಗಿದ್ದರಿಂದ ಮಾಂಸಾಹಾರ ಅವನಿಗೆ ಒಳಿತನ್ನೆ ಮಾಡಿತು.

ವೃದ್ಧಾಪ್ಯದ ಚಿಂತೆಯನ್ನು ಬಿಟ್ಟು ಸದಾ ಉಲ್ಲಾಸದಿಂದ, ಸಂತೋಷದಿಂದ ಇರಿ. ಪ್ರಸನ್ನತೆ ಮತ್ತು ಉತ್ಸಾಹಗಳು ವೃದ್ಧಾಪ್ಯವನ್ನು ತಡೆಯಬಲ್ಲವು, ಯೌವನವನ್ನು ಆಕರ್ಷಿಸಬಲ್ಲವು ಎಂಬುದನ್ನು ಮರೆಯಬೇಡಿ.

ಅಸಮರ್ಪಕ ಆಹಾರವೂ ಆರೋಗ್ಯವನ್ನು ಕೆಡಿಸುವ ಮುಖ್ಯ ಕಾರಣಗಳಲ್ಲಿ ಒಂದಾಗಿದೆ. ಊಟದಲ್ಲಿ ಸಾಕಷ್ಟು ಸುಧಾರಣೆ ಮಾಡಿಕೊಂಡರೆ ನೂರಕ್ಕೆ ೯೦ ರಷ್ಟು ರೋಗಗಳು ಇಲ್ಲವಾಗುವವು. ಯೌವನ, ದೀರ್ಘಾಯುಷ್ಯ ಮತ್ತು ಆರೋಗ್ಯ ಲಾಭಕ್ಕಾಗಿ ಪೋಷಕ ಆಹಾರ ಅತ್ಯಗತ್ಯವಾದದ್ದು.

ಸಾಕಷ್ಟು ಕೆಲರಿಗಳು ಶರೀರಕ್ಕೆ ಲಭ್ಯವಾಗುವಂತೆ ನಮ್ಮ ಆಹಾರವಿರಬೇಕು. ಅದರಲ್ಲಿ ಕಾರ್ಬೋಹೈಡ್ರೇಟ್. ಪ್ರೋಟೀನ್, ವಿಟಾಮಿನ್, ಲೋಹಾಂಶ ಇತ್ಯಾದಿಗಳೂ ಉಚಿತ ಪ್ರಮಾಣದಲ್ಲಿ ಇರಬೇಕು. ಇಂಥ ಆಹಾರವನ್ನು ಆಯ್ದುಕೊಳ್ಳುವುದೇನೂ ಕಠಿನವಲ್ಲ. ಒಳ್ಳೆಯ ಪುಸ್ತಕದಿಂದ ಅಥವಾ ಡಾಕ್ಟರರ ಸಲಹೆಯಿಂದ ಮಾಡಿಕೊಳ್ಳಬಹುದು. ಆದರೆ ಇಲ್ಲಿ ಒಂದು ಮಾತನ್ನು ಗಮನಿಸಬೇಕು. ಪ್ರತಿಯೊಬ್ಬನೂ ತನ್ನ ರುಚಿ ಮತ್ತು ಶರೀರಧರ್ಮವನ್ನೂ ಗಮನಕ್ಕೆ ತಂದುಕೊಳ್ಳಬೇಕು. ಕೆಲವರಿಗೆ ಹಾಲು ಹಿಡಿಸುವುದಿಲ್ಲ, ಮತ್ತೆ ಕೆಲವರಿಗೆ ಮಾಂಸ ಒಗ್ಗುವುದಿಲ್ಲ. ಅಂಥವರು ಅಂಥವುಗಳ ಬದಲು ಅಂಥವೇ ಗುಣಗಳುಳ್ಳ ಬೇರೆ ಪದಾರ್ಥಗಳನ್ನು ಉಪಯೋಗಿಸಬೇಕು. ಪ್ರತಿಯೊಬ್ಬನಿಗೂ ಅವನವನ ಅಭಿರುಚಿ ಮತ್ತು ದೇಹಧರ್ಮಕ್ಕನುಸಾರವಾಗಿ ಯೋಗ್ಯ ಆಹಾರ ಸಿಗಬೇಕೆಂದೇ ನಿಸರ್ಗವು ಒಂದೇ ಗುಣಧರ್ಮದ ಭಿನ್ನ ಭಿನ್ನ ಪದಾರ್ಥಗಳನ್ನು ಸೃಷ್ಟಿಸಿದೆ.

ಶರೀರಕ್ಕೆ ಉತ್ತಮ ಆಹಾರ ಎಷ್ಟು ಅಗತ್ಯವೊ ಅಷ್ಟೇ ಯೋಗ್ಯ ವ್ಯಾಯಾಮವೂ ಅಗತ್ಯವಾಗಿದೆ. ವ್ಯಾಯಾಮದಿಂದ ಶರೀರವು ಚುರುಕಾಗಿಯೂ ಉತ್ಸಾಹಪೂರ್ಣವಾಗಿಯೂ ಸ್ವಸ್ಥವಾಗಿಯೂ ಇರುತ್ತದೆ.

ವ್ಯಾಯಾಮ ಎಂದರೆ ನಮ್ಮ ಎಲ್ಲ ಅವಯವಗಳಿಗೆ ಸಾಕಷ್ಟು ಚಲನೆಯನ್ನೊದಗಿಸುವುದು. ಪ್ರತಿನಿತ್ಯ ಅರ್ಧ ಅಥವಾ ಒಂದು ಗಂಟೆ ಸಮಯದಲ್ಲಿ ಯಾವ ಸ್ತ್ರೀ ಅಥವಾ ಪುರುಷನಾದರೂ ಯೋಗ್ಯ ವ್ಯಾಯಾಮ ಮಾಡಬಲ್ಲ. ಉಗ್ರ ವ್ಯಾಯಾಮವಾಗಲಿ ಅಥವಾ ದೀರ್ಘಕಾಲ ಮಾಡುವ ವ್ಯಾಯಾಮವಾಗಲಿ ಶರೀರವನ್ನು ಧಷ್ಟಪುಷ್ಟ-ಬಲಶಾಲಿಯನ್ನಾಗಿ ಮಾಡುವುದಾದರೂ ಅದರಿಂದ ಸ್ನಾಯುವಿನ ಸೂಕ್ಷ್ಮತಂತುಗಳು ಹರಿದುಹೋಗಿ ಅವು ಒರಟಾಗುತ್ತವೆ. ಇದರ ಫಲವಾಗಿ ವೃದ್ಧಾಪ್ಯವು ಬೇಗನೆ ಬರುತ್ತದೆ. ಅದರ ಬದಲು ಸರ್ವಾಂಗಪೂರ್ಣವಾದ ಹಗುರು ವ್ಯಾಯಾಮವನ್ನು ನಿಯಮಿತವಾಗಿ ಮಾಡುತ್ತಿದ್ದರೆ ಆರೋಗ್ಯಸಂವರ್ಧನೆಯಾಗಿ ದೇಹದಲ್ಲಿ ಉತ್ಸಾಹ ಬರುತ್ತದೆ. ವ್ಯಾಯಾಮ ತಜ್ಞರಿಂದ ಇಂಥ ವ್ಯಾಯಾಮದ ಪ್ರಕಾರಗಳನ್ನು ಸುಲಭದಲ್ಲಿ ತಿಳಿದುಕೊಳ್ಳಬಹುದು.

ಯೌವನವನ್ನು ಸ್ಥಿರವಾಗಿಸಲು ಊಟ-ವ್ಯಾಯಾಮಗಳ ನಂತರ ವಿಶ್ರಾಂತಿಯ ಅಗತ್ಯವೂ ಇದೆ. ವಿಶ್ರಾಂತಿಗಾಗಿ ನಿದ್ರೆಯ ವ್ಯವಸ್ಥೆಯನ್ನು

ಮಾಡಿಸಿ ನಿಸರ್ಗವು ಮನುಷ್ಯನಿಗೆ ತುಂಬ ಉಪಕಾರ ಮಾಡಿದೆ. ಸಾಮಾನ್ಯವಾಗಿ ಏಳೆಂಟು ತಾಸುಗಳ ನಿದ್ದೆ ಮನುಷ್ಯನಿಗೆ ಸಾಕಷ್ಟಾಗುವುದಾದರೂ ಅವರವರ ದೇಹರಚನೆ ಅಥವಾ ಕೆಲಸದ ಸ್ವರೂಪದ ಮೇಲಿಂದ ಈ ಅವಧಿಯಲ್ಲಿ ತುಸು ಹೆಚ್ಚು ಕಡಿಮೆಯಾಗಬಹುದು.

ಶರೀರಕ್ಕೆ ಸಾಕಷ್ಟು ವಿಶ್ರಾಂತಿ ದೊರೆಯದಿರುವಾಗ ಮೊದಮೊದಲು ವಿಶೇಷ ಬದಲಾವಣೆಯೇನೂ ಕಾಣಿಸುವುದಿಲ್ಲ ಆದರೆ ಕ್ರಮೇಣ ಸದಾ ದಣಿವಿನ ಭಾಸವಾಗತೊಡಗುತ್ತದೆ. ನಿದ್ದೆಯಿಂದೆದ್ದ ಮೇಲೂ ಉತ್ಸಾಹವೆನಿಸುವುದಿಲ್ಲ. ತಲೆನೋವು ಬರುವುದೂ ಉಂಟು. ಇಂಥ ಸಮಯದಲ್ಲಿ ಡಾಕ್ಟರರ ಸಲಹೆ ಪಡೆಯಬೇಕಲ್ಲದೆ ಸ್ವತಃ ಸಾಕಷ್ಟು ವಿಶ್ರಾಂತಿಯನ್ನೂ ಪಡೆಯಬೇಕು. ಸಾಕಷ್ಟು ವಿಶ್ರಾಂತಿಗಾಗಿ ಬರೇ ನಿದ್ದೆಯನ್ನು ಅವಲಂಬಿಸಿ ಕೂಡ್ರುವಂತಿಲ್ಲ. ಚತುರರಾದವರು ಕಡಿಮೆ ನಿದ್ದೆ ಮಾಡಿಯೂ ವಿಶ್ರಾಂತಿ ಪಡೆಯುವ ಕಲೆಯನ್ನು ಸಾಧಿಸಿ ತಮ್ಮ ಉತ್ಸಾಹವನ್ನು ಕಾಪಾಡಿಕೊಳ್ಳಬಲ್ಲರು.

ನೌಕರಿ ಮಾಡುವವರು ಕೆಲಸದ ಸಮಯದಲ್ಲೂ ನಡುವೆ ಕೆಲ ನಿಮಿಷಗಳ ವರೆಗೆ ವಿಶ್ರಾಂತಿ ಪಡೆಯಬಲ್ಲರು. ನಡುವಿನ ಅಲ್ಪಾವಧಿಯ ಬಿಡುವಿನಲ್ಲಿ ಹತ್ತಿಪ್ಪತ್ತು ನಿಮಿಷಗಳವರೆಗೆ ಕಣ್ಮುಚ್ಚಿಕೊಂಡು ಅಡ್ಡಾಗಿರಿ. ಆಗ ಮನದ ಎಲ್ಲ ಚಿಂತೆವಿಚಾರಗಳನ್ನು ಬದಿಗಿಟ್ಟು ಶರೀರವನ್ನು ಸಂಪೂರ್ಣವಾಗಿ ಸಡಿಲು ಬಿಡಿರಿ. ಆಮೇಲೆದ್ದು ಕಣ್ಣು ಮುಖ ಕೈಗಳನ್ನು ತಣ್ಣೀರಿನಿಂದ ತೊಳೆದುಕೊಳ್ಳಿರಿ. ಆಗ ನೋಡಿ, ನಿಮ್ಮಲ್ಲಿ ಹೊಸ ಉತ್ಸಾಹವೇ ಮೂಡಿಬರುತ್ತದೆ.

ರಾತ್ರಿ ಊಟಕ್ಕೆ ಮೊದಲು ಪ್ರತಿಯೊಬ್ಬನೂ ಈ ರೀತಿಯಾಗಿ ಶರೀರವನ್ನು ಸಡಿಲು ಬಿಟ್ಟು ವಿಶ್ರಾಂತಿ ಪಡೆಯಲು ಅಭ್ಯಾಸ ಮಾಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ರಾತ್ರಿ ತಡವಾಗಿ ಮಲಗಿದರೂ ಆರೋಗ್ಯದ ಮೇಲೆ ಕೆಟ್ಟ ಪರಿಣಾಮವಾಗದು.

ಹತ್ತಿಕ್ಕಿಟ್ಟ ಕಾಮವಾಸನೆಯು ದೇಹದಲ್ಲಿ ಕೆಲವೊಂದು ಜಟಿಲ ಗ್ರಂಥಿಗಳನ್ನು ನಿರ್ಮಿಸುತ್ತದೆಯೆಂದು ಮನೋವೈಜ್ಞಾನಿಕರು ಹೇಳುತ್ತಾರೆ. ಈ ಗ್ರಂಥಿಗಳೇ ಮುಂದೆ ಅನೇಕ ಭೀಕರ ರೋಗಗಳಿಗೆ ಕಾರಣವಾಗುತ್ತವೆ. ಆದ್ದರಿಂದ ಕಾಮವಾಸನೆಯನ್ನು ಹತ್ತಿಕ್ಕಿಟ್ಟುಕೊಳ್ಳಲಾಗದು. ನೀವು ಕುಮಾರ, ಕುಮಾರಿ, ವಿಧುರ ಅಥವಾ ವಿಧವೆ ಯಾರೇ ಆಗಿರಲಿ, ಶುದ್ಧ ಆಚಾರ ವಿಚಾರಗಳಿಂದ ಕಾಮವಾಸನೆ ಜಾಗೃತವಾಗದಂತೆ ನೋಡಿಕೊಳ್ಳಬೇಕು. ಅದನ್ನು ತಡೆಯಲಾಗದಿದ್ದರೆ ವಿವಾಹ ಮಾಡಿಕೊಳ್ಳಬೇಕು. ಆದರಂತೆ ಅತ್ಯಂತ ಕಾಮುಕ ಜೀವನವನ್ನು ನಡೆಸುವುದೂ ಒಳ್ಳೆಯದಲ್ಲ. ಅದರಿಂದ ಇಂದ್ರಿಯಗಳು ಶಿಥಿಲವಾಗಿ ಬೇಗ ದಣಿದು ವೃದ್ಧಾಪ್ಯ ಬರುತ್ತದೆ. ಅಂತೆಯೆ ಸದಾ ಕಾಮುಕ ವಾತಾವರಣದಲ್ಲಿರುವುದು, ಕಾಮುಕ ಸಾಹಿತ್ಯವನ್ನೋದುವುದು, ಅಂಥ ಚಿತ್ರಗಳನ್ನು ನೋಡುವುದು ಒಳ್ಳೆಯದಲ್ಲ.

ಜೀವನದಲ್ಲಿ ಸಮತೋಲದ ಮಹತ್ವವನ್ನೆಂದಿಗೂ ಮರೆಯಲಾಗದು. ದಾಂಪತ್ಯ ಸುಖದ ಹೊರತಾಗಿ ಕುಟುಂಬ ಜೀವನದ ಮಹತ್ವವನ್ನೂ ಅರಿಯಬೇಕು. ಜೀವನದಲ್ಲಿ ಕಲೆ, ಸಾಹಿತ್ಯ ಸಾಮಾಜಿಕ ಸಮಸ್ಯೆ ಇತ್ಯಾದಿಗಳಿಗೂ ಮಹತ್ವ ಕೊಡಬೇಕು. ಕುಟುಂಬದ ಇತರರು ಮತ್ತು ನೆರೆಹೊರೆಯ ಪರಿಚಿತರೊಂದಿಗೆ ಸ್ನೇಹ-ಸಹಕಾರದಿಂದಿರುವುದೂ ಸಮತೋಲ ಜೀವನಕ್ಕೆ ಸಹಾಯಕವಾಗುವುದು.

ಈರೀತಿಯಾಗಿ ನಾಲ್ಕೂಕಡೆಗಳಿಂದ ನಮ್ಮನ್ನು ಭದ್ರವಾಗಿಸಿಕೊಂಡು ದೃಢಚಿತ್ತದಿಂದ ಯೌವನವನ್ನು ರಕ್ಷಿಸಿಕೊಳ್ಳುವ ಪ್ರಯತ್ನವನ್ನು ಮಾಡಿದಲ್ಲಿ ಅದು ಸ್ಥಿರವಾಗುವುದು. ಮೊಟ್ಟಮೊದಲನೆಯದಾಗಿ ನೀವು ಯೌವನವೇ ಸ್ವಾಭಾವಿಕವಾದುದೆಂದು ತಿಳಿದಿರಬೇಕು. ಅದೇ ಶರೀರದ ಅಂತಿಮ ಅವಸ್ಥೆ. ಮುಪ್ಪಿನಂತಹ ನಾಲ್ಕನೆಯ ಅವಸ್ಥೆಯೆನ್ನುವುದು ಇಲ್ಲವೇ ಇಲ್ಲ. *






73–7–11



ಎರಡು ತಲೆಮಾ
ಎರಡು ಸಮಾಜ ಸ್ತರ
ಅತ್ತೆ-ಸೊಸೆ ಸಂಬಂಧ
ಹೃದಯಸ್ಪರ್ಶಿ ಕ

# ಅಂಜೋ

ಮಾನವನಿಗೆ ಒಮ್ಮೊಮ್ಮೆ ಪೆಟ್ಟು ಹತ್ತುತ್ತದೆ. ಪೆಟ್ಟು ನೋಡಲು ಚಿಕ್ಕದಾದರೂ ತುಂಬಾ ನೋವನ್ನುಂಟುಮಾಡಿರುತ್ತದೆ. ಆ ಮೇಲೆ ನೋವು ಕಡಿಮೆಯಾದಂತೆ ಅನಿಸುತ್ತದೆ. ಹಕ್ಕಳಿಗಟ್ಟುತ್ತದೆ. ಪುನಃ ಯಾರದೋ ಧಕ್ಕೆ ತಗಲಿ, ಹಕ್ಕಳಿ ಉದುರಿಹೋಗಿ ಬಳಬಳ ರಕ್ತ ಸುರಿಯುತ್ತದೆ. ರಕ್ತ ಸುರಿಯುವುದನ್ನು ಕಂಡವರಲ್ಲಿ ಕೆಲವರು ಸಹಾನುಭೂತಿ ತೋರಿಸುತ್ತಾರೆ. ಕೆಲವರು ರಕ್ತ ನಿಲ್ಲಿಸುವುದಕ್ಕಾಗಿ ಪ್ರಯತ್ನಿಸುತ್ತಾರೆ. ಕೆಲವರು ಕಂಡೂ ಕಾಣದಂತೆ ಸುಮ್ಮನಿರುತ್ತಾರೆ.

ಆನಂದೀ ಬಾಯಿಯವರದೂ ಇದೇ ರೀತಿಯಾಗಿದೆ. ಅವರಿಗೆ ಹತ್ತಿದ ಪೆಟ್ಟು ಅವರ ದೇಹದ ಮೇಲೆ ಎಲ್ಲಿಯೂ ಕಾಣದು. ಮನಸ್ಸಿಗೆ ಆದ ನೋವದು. ನೋವು ಮಾಯ್ದು ಹಕ್ಕಳಿಗಟ್ಟಿದೆ ಎನ್ನುವಷ್ಟರಲ್ಲಿ ಸೊಸೆಯ ನಡತೆ ಅದನ್ನು ಕಿತ್ತೊಗೆಯುತ್ತದೆ. ದುಃಖದ ರಕ್ತ ಬಳಬಳನೆ ಸುರಿಯುತ್ತದೆ.

ಕೆಲವರು ತಮ್ಮ ದುಃಖವನ್ನು ಒಂದಕ್ಕೆ ಹತ್ತು ಮಾಡಿ ಹೇಳಿ ಎಲ್ಲರ ಲಕ್ಷ್ಯವನ್ನು ತಮ್ಮ ಕಡೆಗೆ ಸೆಳೆಯುತ್ತಾರೆ. ಸಹಾನುಭೂತಿಯನ್ನು ಇಚ್ಛಿಸುತ್ತಾರೆ. ತಮಗೇ ಹೆಚ್ಚು ಸುಖವಾಗಲಿ ಎಂದು ಪ್ರಯತ್ನಿಸುತ್ತಾರೆ. ಪರರ ಮನಸ್ಸನ್ನು ನೋಯಿಸಬಾರದು ಎಂಬ ವಿಚಾರವೇ ಅವರ ತಲೆಯಲ್ಲಿ ಬರುವುದಿಲ್ಲ.

ಇಂತಹ ಜನರಲ್ಲಿ ಆನಂದೀಬಾಯಿಯವರ ಸೊಸೆಯೊಬ್ಬಳು. ತಾನು ಸುಂದರಿ, ಕಲಿತವಳು; ಅತ್ತೆ ಹಳೆಯ ಕಾಲದವಳು, ಶಾಲೆಯ ಹೊಸ್ತಿಲವನ್ನೂ ದಾಟದವಳು, ಎಂಬ ಭಾವನೆ ಅವಳದು. "ನನಗಿದು ಸೇರುವುದಿಲ್ಲ, ನನ್ನ ಇಚ್ಛೆ ಹೀಗೆ, ನಾನು ಹೇಳುವುದು ಹೀಗೆ, ನನಗೆ ಇಂತಹದು ಬಹಳೇ ಸೇರುತ್ತದೆ" ಎಂದು ನಾನು-ನನ್ನ ಎಂಬ ಭಾಷೆಯಲೇ ಅವಳು ಯಾವಾಗಲೂ ಮಾತಾಡುತ್ತಾಳೆ.

ಆನಂದೀಬಾಯಿಯವರ ದುಃಖ ಅವರ ಮಗನಿಗೆ ತಿಳಿಯದು. ತಂದೆಗೆ ಐವತ್ತೈದನೆಯ ವಯಸ್ಸಿನಲ್ಲಿ ದೊರೆಯುತ್ತಿದ್ದ ಪಗಾರದ ಇಮ್ಮಡಿ ಪಗಾರ ಅವನಿಗೆ ಇಪ್ಪತ್ತೈದನೆಯ ವಯಸ್ಸಿನಲ್ಲೇ ದೊರೆಯುತ್ತಿದೆ. ಆನಂದೀಬಾಯಿಯವರ ಮನೆತನದಲ್ಲಿ ಇದುವರೆಗಿನ ಹೆಂಗಸರಲ್ಲಿ ಅವನ ಹೆಂಡತಿಯೆ ಹೆಚ್ಚು ಕಲಿತಾಕೆ. ಅವನಿಗೆ ತಂದೆ ತಾಯಿಗಳ ಮೇಲೆ ಬೇಸರ ಬಂದಿದೆಯೆಂದಿಲ್ಲ. ಅವರು ಅವನಿಗೆ ಬೇಕು ತಾನು ತಂದೆ ತಾಯಿಗಳ ಪ್ರೀತಿಯ ಮಗ. ತನ್ನನ್ನು ಇದುವರೆಗೆ ಅವರು ಅಚ್ಚೆಯಿಂದ ಬೆಳೆಸಿದ್ದಾರೆ. ಅಂದಮೇಲೆ ತನ್ನ ಹೆಂಡತಿಯನ್ನು ಅವರು ಅದೇ ರೀತಿಯಾಗಿ ನಡೆಯಿಸಿಕೊಳ್ಳಬೇಕು ಎಂದು ಅವನ ಇಚ್ಛೆ. ಆ ರೀತಿಯಾಗಿ ನಡೆಯುವುದು ಅವರ ಕರ್ತವ್ಯ

ಮೂಲ ಮರಾಠಿ:
ಸೌ. ಸ್ನೇಹಲತಾ ದಸನೂರಕರ
ಅನುವಾದ:
ಸೌ. ಉಷಾ ದಿವಾಣ



# ಸೀರೆ

ಎಂದು ಅವನ ಭಾವನೆ.

ಆನಂದೀಬಾಯಿಯವರ ದುಃಖ ಅವರ ಪತಿ ಪಂತರಿಗೂ ತಿಳಿಯದು. ಆನಂದಿಗೆ ದುಃಖವಾಗಬಹುದು ಎಂಬ ಕಲ್ಪನೆಯೇ ಅವರಿಗೆ ಬರುವುದಿಲ್ಲ! ಹೆಂಡತಿಯ ಕಡೆಗೆ ಲಕ್ಷ್ಯಕೊಡುವುದು ಅವಳ ಸುಖದುಃಖವನ್ನು ವಿಚಾರಿಸುವುದು ಅವರಿಗೆ ಹೊಳೆಯದು. ಅವರು ಆ ರೀತಿಯಾಗಿ ತಿಳಿದೂ ಮಾಡುತ್ತಾರಂತಲ್ಲ. ಅವರಿಗೆ ದೊರೆತ ಸಂಸ್ಕಾರವೇ ಅಂಥದು.

ಪಂತರ ಕಾಲದಲ್ಲಿ, ಗಂಡನಿಗೆ ಹೆಂಡತಿಯ ಭೆಟ್ಟಿ ಎಲ್ಲರೂ ಮಲಗಿದ ಬಳಿಕ, ಎಲ್ಲ ಕಡೆಗೂ ಶಾಂತತೆಯಾದ ಬಳಿಕ, ರಾತ್ರಿ ಕತ್ತಲೆಯಲ್ಲಿ! ಆಗ ಸಹ ಒಂದು ಶಬ್ದ ಕೂಡ ಗಟ್ಟಿಯಾಗಿ ಮಾತಾಡುವ ಧೈರ್ಯವಿರಲಿಲ್ಲ ಒಂದೇ ಗೋಡೆ ನಡುವೆ. ಅತ್ತ ಕಡೆಗೆ ಹಿರಿಯರು ಮಲಗಿರುವರು. ಇನ್ನೂ ಕತ್ತಲೆ ಇರುವಾಗಲೇ ನಸುಕಿನಲ್ಲಿ ಆನಂದೀಬಾಯಿ ಎದ್ದು ಕೆಲಸಕ್ಕೆ ತೊಡಗಬೇಕು. ಮೊದಲಿನ ಎರಡು ಮಕ್ಕಳಾದರೂ ಹಗಲು ಹೊತ್ತು ಪಂತರು ಹೆಂಡತಿಯೊಡನೆ ಮಾತಾಡುತ್ತಿರಲಿಲ್ಲ. ಮೊದಲಿನ ಎರಡೂ ಹೆಣ್ಣುಮಕ್ಕಳೇ. ಮಗಳು ನಡುಮನೆಯಲ್ಲಿ ಮಲಗಿ ಕೈಕಾಲು ಆಡಿಸುತ್ತ, ನಗುತ್ತ ಆಡುತ್ತಿರುವಾಗ ಪಂತರು ಅಲ್ಲಿಯೇ ನಿಲ್ಲಬೇಕು. ಕೂಡಲೇ ಆನಂದೀಬಾಯಿ ಅಲ್ಲಿಂದ ಎದ್ದು ಒಳಗೆ ಹೋಗಬೇಕು. ಅಡುಗೆ ಮನೆ ಬಾಗಿಲಲ್ಲಿ ನಿಂತು ಮಗು, ಮಗುವಿನ ತಂದೆಯ ಕಡೆಗೆ ಅನಿಮಿಷ ನೇತ್ರಗಳಿಂದ ನೋಡಬೇಕು. ಸಮೀಪದಲ್ಲೆಲ್ಲೂ ದೊಡ್ಡವರಿಲ್ಲವಲ್ಲ ಎಂದು ನೋಡುತ್ತ ಪಂತರು ಪಟಕ್ಕನೇ ಮಗುವಿನ ಚುಂಬನ ತೆಗೆದುಕೊಳ್ಳಬೇಕು. ಸ್ವಲ್ಪವೂ ಸಪ್ಪಳ ಮಾಡದೇ! ಅಷ್ಟರಲ್ಲೇ ಯಾರಾವರೂ ದೊಡ್ಡವರು ಬಂದರೆ ಆನಂದೀಬಾಯಿ ಅಡುಗೆಮನೆ ಬಾಗಿಲಿಗೆ ಮರೆಯಾಗಬೇಕು ಪಂತರು ಕಳವು ಮಾಡುವಾಗ ಸಿಕ್ಕ ಕಳ್ಳನ ಮುಖಚರ್ಯೆಯಂತೆ ಪೆಚ್ಚು ಮುಖಮಾಡಿಕೊಂಡು ಅಲ್ಲಿಂದ ಹೊರಟುಹೋಗಬೇಕು

ಈಗ ಆ ಹಿರಿಯರು ಕಣ್ಮರೆಯಾಗಿದ್ದಾರೆ. ಮನೆಯಲ್ಲಿ ಈಗ ಹಿರಿಯರೆಂದರೆ ಪಂತರು ಮತ್ತು ಆನಂದೀಬಾಯಿ. ಆದರೆ ಇವರೆದುರು ಸೊಸೆ ದಿನವೂ ಗಂಡ ಆಫೀಸಿಗೆ ಹೊರಟ ಕೂಡಲೇ ಹೊರಬಾಗಿಲ ತನಕ ಹೋಗಿ ಕಳಿಸಿ ಬರುತ್ತಾಳೆ. ಅವನು ಕಣ್ಣಿಗೆ ಕಾಣುವ ತನಕ ನಿಂತು ನೋಡುತ್ತಾಳೆ. 'ಟಾ ಟಾ' ಮಾಡುತ್ತಾಳೆ. ಹಿರಿಯರ ದರ್ಪದ ಕೆಳಗೆ ಬೆಳೆದ ಪಂತರಿಗೆ, ತಾವು ಹಿರಿಯರಾಗಿದ್ದೇವೆ ಎಂಬುದೇ ತಿಳಿಯದು ತಮ್ಮ ವ್ಯಕ್ತಿತ್ವವನ್ನೇ ಕಳೆದುಕೊಂಡವರವರು. ದಿನವೂ ಮಗ, ಸೊಸೆ ಸಂಜೆಗೆ ತಿರುಗಾಡಲು ಹೋಗುತ್ತಾರೆ. ಸೂಟಿಯ ದಿನ ಸಿನೇಮಾ

ನಾಟಕಕ್ಕೆ ಹೋಗುತ್ತಾರೆ. ಪಂತರೇ ರಾತ್ರಿ ಅವರಿಗೆ ಬಾಗಿಲು ತೆಗೆಯುತ್ತಾರೆ.

ಆನಂದೀಬಾಯಿಯವರು ಮಾತ್ರ ಪಂತರೊಡನೆ ಎಂದೂ ತಿರುಗಾಡಲು ಹೋಗಲಿಲ್ಲ. ಲಗ್ನ ಕಾರ್ಯಕ್ಕೆಂದು ಎಂದಾದರೂ ಹೊರಗೆ ಹೋಗುವ ಪ್ರಸಂಗ ಬಂದರೂ ಇಬ್ಬರೂ ಬೇರೆ ಬೇರೆಯಾಗಿ ಹೋಗಬೇಕು, ಬೇರೆ ಬೇರೆ ಸಮಯಕ್ಕೆ. ಸ್ವತಃ ಮಗನ ಮುಂಜಿವೆಯ ಆಮಂತ್ರಣ ಕೊಡಲು ಹೋದಾಗ ಸಹ ಟಾಂಗಾದಲ್ಲಿ ಪಂತರು ಮುಂದೆ ಕೂತಿದ್ದರು. ಆನಂದೀಬಾಯಿ ಹಿಂದೆ, ಒಬ್ಬರೇ ಕೂತಿದ್ದರು. ಯಾವುದಾದರೊಂದು ಮನೆಯ ಮುಂದೆ ಟಾಂಗಾ ನಿಂತಾಗ ಪಂತರು ಮೊದಲು ಕೆಳಗಿಳಿದು ಮುಂದೆ ಹೋಗಬೇಕು. ನಂತರ ಆನಂದೀಬಾಯಿ ಹಿಂದಿನಿಂದ ಹೋಗಬೇಕು. ತಿರುಗಿ ಬರುವಾಗ ಸಹ ಇದೇ ತರಹ. ಇಬ್ಬರೂ ಭುಜಕ್ಕೆ ಭುಜ ಹಚ್ಚಿ ಎಂದೂ ಅಡ್ಡಾಡಲೇ ಇಲ್ಲ. ಅದಕ್ಕೂ ಒಂದು ಕಾರಣವಿತ್ತು. ಹದಿನಾಲ್ಕನೆಯ ವಯಸ್ಸಿನಲ್ಲಿ, ಇಪ್ಪತ್ನಾಲ್ಕು ವಯಸ್ಸಿನ ಪಂತರೊಡನೆ ಆನಂದೀಬಾಯಿಯವರ ಮದುವೆಯಾಯ್ತು. ಹದಿನೆಂಟು ತುಂಬುವಷ್ಟರಲ್ಲಿ ಆನಂದೀಬಾಯಿ ಪಂತರಿಗಿಂತ ನಾಲ್ಕು ಬೆರಳು ಹೆಚ್ಚು ಬೆಳೆದರು. ಮೈಯೂ ಸ್ವಲ್ಪ ಸ್ಥೂಲವಾಯಿತು. ಪಂತರು ಮಾತ್ರ ಮೊದಲು ಇದ್ದ ಹಾಗೇ ಉಳಿದರು. ಅಂತೆಯೇ ಗಂಡನಿಗಿಂತ ಹೆಚ್ಚು ಎತ್ತರ ಇದ್ದುದು ಜನರ ಲಕ್ಷ್ಯಕ್ಕೆ ಬರಬಾರದೆಂದು ಆನಂದೀಬಾಯಿ ಕಾಳಜಿ ತೆಗೆದುಕೊಳ್ಳುತ್ತಾರೆ. ಎತ್ತರಿದ್ದರೂ ಇನ್ನೂ ಮುಖ ನೋಡಿ ಅವರೆಂದೂ ಪಂತರಿಗೆ ತಿರುಗಿ ಉತ್ತರ ಕೊಟ್ಟವರಲ್ಲ.

ಹೋದವಾರ ತವರುಮನೆಯಿಂದ ಸೊಸೆ ಬಂದಾಗಲೇ ಅವಳು ಮಂಗಳ ಸೂತ್ರ ಬೇರೆ ಮಾಡಿಸಿಕೊಂಡದ್ದು ಆನಂದೀಬಾಯಿಯವರ ಲಕ್ಷ್ಯಕ್ಕೆ ಬಂದಿತ್ತು. ಅವಳ ಮದುವೆಯಲ್ಲಿ ಅವಳಿಗೆ, ಗಟ್ಟಿಮುಟ್ಟಾದ ಉದ್ದವಾದ ಮಂಗಳ ಸೂತ್ರವನ್ನು ಅವರು ಮಾಡಿಸಿದ್ದರು. ಎರಡು ತೊಲೆ ಬಂಗಾರ ಕೇವಲ ಮಂಗಳ ಸೂತ್ರಕ್ಕೇನೇ ಹತ್ತಿತ್ತು. ಈಗ ನೋಡಿದರೆ ಮಂಗಳ ಸೂತ್ರದ ಕೊಂಡಿಯ ಹತ್ತಿರದ ದಪ್ಪವಾದ ಚೈನೇ ಕಾಣಲೊಲ್ಲದು. ಆನಂದೀಬಾಯಿಯವರಿಗೆ ಕಸಿವಿಸಿಯಾಯಿತು. ಕೊನೆಗೆ ಕೇಳಿಯೇ ಬಿಟ್ಟರು. ಆಗ ಸೊಸೆ "ಛೆ, ನನಗದು ಸೇರಿರಲಿಲ್ಲ. ಯಾವತ್ತೂ ಹೆರಳಿನಲ್ಲಿ ಕೊಂಡಿ ಸಿಗುತ್ತಿತ್ತು. ಕೊನೆಗೆ ಚೈನು ತೆಗೆಸಿ ಬಿಟ್ಟೆ. ಆ ಕೊಂಡಿ ಇತ್ತ ಎಡಗಡೆ ಮಾಡಿಸಿಕೊಂಡಿದ್ದೇನೆ" ಎಂದಳು.

ಆನಂದೀಬಾಯಿ ಸುಮ್ಮನಾದರು. ಮಗನಿಗೆ ಮಾವನ ಮನೆಯಿಂದ ಸಂಕ್ರಾಂತಿಗೆ ಕರೆ ಬರಬಹುದೆಂದೂ ಅವನೊಡನೆ ಕಳಿಸಿಕೊಡಲೆಂದೂ ಸೊಸೆಯ ಸಲುವಾಗಿ ಒಂದು ಸೀರೆ ಖಣ ತರಿಸಿಟ್ಟಿದ್ದರು ಒಬ್ಬ ಬಡ ಹೆಂಗಸಿಗೆ ರೊಕ್ಕ ಕೊಟ್ಟು ಸೊಸೆಯ ಸಲುವಾಗಿ ಎಳ್ಳಿನ ಒಡವೆ ಮಾಡಿಸಿದ್ದರು. ಸಂಕ್ರಾಂತಿಗೆಂದು ಸೊಸೆ ಹತ್ತು ಹದಿನೈದು ದಿನ ಮೊದಲೇ ಅದನ್ನೆಲ್ಲ ತೆಗೆದುಕೊಂಡು ತವರಿಗೆ ಹೋದಳು. ಮಗನು ಅದನ್ನೆಲ್ಲ ಹೇಗೆ ಸಂಭಾಳಿಸಿಕೊಂಡು ಒಯ್ದಾನು, ಸೊಸೆಯೇ ಅದನ್ನು ಒಯ್ಯುವುದು ಉಚಿತವೆಂದು ಆನಂದೀಬಾಯಿಯವರಿಗನಿಸಿತು. ನಂತರ ಸೊಸೆಯ ತಂದೆಯ ಪತ್ರದ ಹಾದಿ ಕಾಯುತ್ತ ಕುಳಿತರು. ಕೊನೆಗೂ ಪತ್ರ ಬರಲೇ ಇಲ್ಲ. ಮಗನಿಗೆ ಆ ರೀತಿಯಾಗಿ ಅಂದು ತೋರಿಸಿದರೆ, ಆತ ಅವರಿಗೆ "ನೀನೂ ಭಾಳ ಇದ್ದಿ ಅವ್ವಾ, ಈಗಿನ ದಿವಸೇನು ಕಾಲೇನು? ಅಲ್ಲs ನಾವು ಇಷ್ಟು ಕಲಿತದ್ದು ಯಾತಕ್ಕೆ ಮತ್ತ? ಮಾವಂದಿರ ಮನೆ ಸುಳೀಲಿಕ್ಕೇನು? ನಿನ್ನ ಇಚ್ಛೆ ಇತ್ತಂತ ನೀನು ನಿನ್ನ ಸೊಸೆಗೆ ಎಲ್ಲ ಕೌತುಕ ಮಾಡಿದಿ, ಆತು. ಅವರೂ ಆ ರೀತಿಯಾಗಿ ಮಾಡಬೇಕು ಅಂತ ನಾವು ಇಚ್ಛಾನರೆ ಯಾಕ ಮಾಡಬೇಕು?" ಎಂದ.

ಆನಂದೀಬಾಯಿಯವರು ಹುಟ್ಟಿದ್ದು ಹಳ್ಳಿಯಲ್ಲಿ. ಬೆಳೆದದ್ದೂ ಹಳ್ಳಿಯಲ್ಲೆ. ಆದರೆ ಸೊಸೆಯ ತಂದೆತಾಯಿಗಳು ಶಹರದವರು. ಆಚಾರ ವಿಚಾರಗಳಲ್ಲಿ ಅಂತರವಿರದೆ ಹೋದೀತೆ?

ಸೊಸೆ ತಮ್ಮ ಸಲುವಾಗಿ ಒಂದು ವಾರು ಅರಿವೆ ತರದೇ ಹೋದರೂ ತನ್ನ ಗಂಡನ ಸಲುವಾಗಿ ಒಂದು ಬೆಳ್ಳಿಯ ಬಟ್ಟಲವನ್ನೂ ತರಲಿಲ್ಲವೆಂದು ಅವರಿಗೆ ಸ್ವಲ್ಪ ಅಸಮಾಧಾನವಾಯ್ತು.

ಮದುವೆಯೊಳಗಿನ ಮಂಗಳಸೂತ್ರ ನಿನಗೆ ಸೇರದಿದ್ದರೆ ನೀನು ಇಲ್ಲಿ ಯಾಕೆ ಮುರಿಸಿ ಮಾಡಿಸಿಕೊಳ್ಳಲಿಲ್ಲ ಎಂದು ಕೇಳಬೇಕೆಂದು ಆನಂದಿಬಾಯಿಯವರಿಗೆ ಅನಿಸಿತ್ತು. ಆದರೆ ಅಂಗ್ಯೆ ತೋರಿಸಿ ಅವಲಕ್ಷಣ ಹೇಳಿಸಿಕೊಳ್ಳುವುದು ಯಾಕೆ ಎಂದು ಬಿಟ್ಟರು. ತಾವು ತವರುಮನೆಗೆಂದು ಮೊದಲ ಸಲ ಹೊರಟಾಗಿನ ದೃಶ್ಯ ಅವರ ಕಣ್ಣೆದುರು ಬಂತು. ದೇವರಿಗೆ ನಮಸ್ಕಾರ ಮಾಡಲೆಂದು ಬಗ್ಗಿದಾಗ ಮಾವನವರು ಮೈದುನನಿಗೆ ಹೇಳುತ್ತಿದ್ದರು: "ಗೋಟು ಪಾಟ್ಲಿ ಎಲ್ಲ ಇಲ್ಲಿಯೇ ಇಟ್ಟು ಹೋಗೆಂದು ಹೇಳು. ಸುಮ್ಮನೆ ಅವರ ಮೇಲೆ ಜವಾಬ್ದಾರಿ ಬೇಡ." ಪುನಃ ಹೇಳಿಸಿಕೊಳ್ಳುವ ವೇಳೆಯೇ ಬರಲಿಲ್ಲ. ಪ್ರತಿ ಸಲ ತವರು ಮನೆಗೆ ಹೋಗುವಾಗ ತಾವಾಗಿಯೇ ಎಲ್ಲ ದಾಗಿನೆ ಮೈದುನನ ಕಡೆ ಕೊಡುತ್ತಿದ್ದರು. ಬಡವರಿದ್ದರೂ ತವರುಮನೆಯವರು ಪ್ರತಿಷ್ಠಿತರಿದ್ದಾರೆ. ಅಂದರೂ ಇವರಿಗೆ ಅವರ ಮೇಲೆ ವಿಶ್ವಾಸವಿಲ್ಲವಲ್ಲ ಎಂದು ಕೆಡಕೆನಿಸಿತ್ತು.

*

ತಿರುಗಾಡಲು ಹೋಗುವ ವೇಳೆಯಾಗಿತ್ತು. ಸೊಸೆ ಹೆರಳು ಹಾಕಿ ಮುಖ ತೊಳೆದು ಸ್ನೋ ಪೌಡರ್ ಕುಂಕುಮ ಹಚ್ಚಿಕೊಂಡು ಅತ್ತೆಯ ಕಡೆಗೆ ಬಂದು ಕೇಳಿದಳು:

"ನಿಮ್ಮ ಆ ಅಂಜೀರಿ ಬಣ್ಣದ ಸೀರೆ ನನಗೆ ಉಡಲು ಕೊಡಿ. ನನಗೆ ಅದು ತುಂಬಾ ಸೇರಿದೆ."

"ಅಲ್ಲಾs, ಅದು ಒಂಭತ್ತು ವಾರಿ ಸೀರೆ ಅದ."

"ಇರಲಿ, ನನಗೆ ಒಂಭತ್ತು ವಾರಿ ಸೀರೆ ಉಡುವುದು ಸೇರುತ್ತದೆ. ಹೆಂಗಸರು ಮೇಲಿಂದ ಮೇಲೆ ಒಂಭತ್ತು ವಾರಿ ಸೀರೆ ಉಡಬೇಕು. ಅಂದರೆ ಮೈಕಟ್ಟು ಚೆನ್ನಾಗಿ ಉಳಿಯುತ್ತ**ದೆ.**"

ಆನಂದೀಬಾಯಿಯವರಿಗೆ ಆ ಸೀರೆ ಬಹಳೇ ಸೇರುತ್ತಿದ್ದರೂ ಸೊಸೆ ಅದನ್ನು ಕೇಳಿ ಇಸಿದುಕೊಂಡು ಉಟ್ಟಾಗ ಅವರಿಗೆ ಅಸಮಾಧಾನವೇನೂ ಆಗಲಿಲ್ಲ. ಅವರ ಮಗ ತಾಯಿಯ ಸಲುವಾಗಿ ತಂದ ಗರ್ಭರೇಶಮಿ, ಮುಗವಿ ಚೌಕಟ್ಟಿನ ಜರದ ಅಂಚಿನ ಸುಂದರವಾದ ಇಂದೂರಿ ಸೀರೆ ಅದು. ಪೂರ್ಣ ಅರುವತ್ತು ರೂಪಾಯಿ ಕೊಟ್ಟು ಆ ಸೀರೆ ತಂದು, ಆಯುಷ್ಯದಲ್ಲಿ ತಾಯಿಯ ಇದೊಂದು ಇಚ್ಛೆಯನ್ನು ಮಗನು ಪೂರೈಸಿದ್ದ. ಈ ಸೀರೆಯ ಇಚ್ಛೆಯೂ ತಾಯಿಗೆ ಸಹಜಾಸಹಜಿ ಪೂರ್ಣವಾಗಿರಲಿಲ್ಲ. ಪೂರ್ಣ ಮೂವತ್ತು ವರ್ಷ ದಾರಿ ಕಾಯಬೇಕಾಗಿ ಬಂದಿತ್ತು.

ಮೊದಲನೆಯ ಸಲ "ದಿವಸ ಹೋದಾಗ" ಆನಂದೀಬಾಯಿ ಇಂತಹ ಸೀರೆಯನ್ನು ಮಾಮಲೇದಾರನ ಹೆಂಡತಿ ಉಟ್ಟಿದ್ದನ್ನು ನೋಡಿದ್ದರು. ಆನಂದೀಬಾಯಿಯ ಮಾವನ ಮನೆಯಲ್ಲಿ ತಿಂದುಉಂಡು ಎಲ್ಲರೂ ಸುಖವಾಗಿದ್ದರು ಬೆಳ್ಳಿ ಬಂಗಾರ ಬಹಳ ಇತ್ತು. ಆದರೆ ಪಂತರಿಗೆ ಮಾತ್ರ ಹೇಳಿಕೊಳ್ಳುವಷ್ಟು ಪಗಾರವಿರಲಿಲ್ಲ. ಹೆಚ್ಚು ಕಲಿತವರಲ್ಲ. ಎಂದಾದರೂ ತಂದೆ ಸಿಟ್ಟಿನ ಭರದಲ್ಲಿ ಮನೆ ಬಿಟ್ಟು ಹೊರಗೆ ಹಾಕಿದರೆ, ಹೆಂಡತಿಯ ಹೊಟ್ಟೆ ತುಂಬುವುದು ಮಾತ್ರ ಅವರಿಗೆ ಸಾಧ್ಯವಿತ್ತು. ಆದರೆ ವಸ್ತು-ಒಡವೆ, ಬೆಲೆಯುಳ್ಳ ಸೀರೆಗಳನ್ನು ಕೊಡಿಸುವುದು ಅವರಿಗೆ ಅಸಾಧ್ಯವಿತ್ತು. ಆದರೆ ತಂದೆಯಿಂದ ಮನೆ ಬಿಟ್ಟು ಹೊರಗೆ ಹಾಕಿಸಿಕೊಳ್ಳುವ ಪ್ರಸಂಗವೆಂದೂ ಪಂತರಿಗೆ ಬರಲಿಲ್ಲ. ಸ್ವತಃದ ವ್ಯಕ್ತಿತ್ವವನ್ನು ಕಳೆದುಕೊಂಡ ಪಂತರಿಂದ ಸೀರೆ ಕುಪ್ಪಸವನ್ನು ಬೇಡುವುದರಲ್ಲಿ ಅರ್ಥವಿರಲಿಲ್ಲ "ನನಗೆ ಅಂಜೀರಿ ಬಣ್ಣದ ಸೀರೆ ಉಡಬೇಕೆಂದು ಅನಿಸುತ್ತದೆ"ಂದು ಆನಂದೀಬಾಯಿ ಯಾರ ಬಳಿ ಹೇಳಬೇಕು? "ನಿನಗೆ ಯಾವ ಬಯಕೆ?" ಎಂದು ಕೇಳುವವರೂ ಯಾರೂ ಇರಲಿಲ್ಲ.

ತಿನಿಸು ಉಣಿಸುಗಳ ಬಯಕೆ ಮಾತ್ರ ತಂದೆ ತಾಯಿಗಳಿಂದ ಪೂರ್ಣವಾಗಿತ್ತು. ಅತ್ತೆಯ ಮನೆಯಲ್ಲಿ ಅತ್ತೆಯು ಇರಲಿಲ್ಲ. ಅತ್ತೆಯ ಮನೆಯಲ್ಲಿ 'ಕುಪ್ಪುಸ' ಮಾಡಿದಾಗ ಕೇಳಿದರಾಯ್ತು ಎಂದು ಬಿಟ್ಟರು. ಆದರೆ ಅವರ ದೂರದ ಅತ್ತೆ ಅವರಿಗೆ ಮಾವನವರು ಹೇಳಿದ್ದನ್ನು ಹೇಳಿದರು: "ನಮ್ಮ ಮನೆಯಲ್ಲಿ 'ಕುಪ್ಪುಸ' ಮಾಡುವ ಪದ್ಧತಿ ಇಲ್ಲ. ಗಂಡು ಮಗು ಹುಟ್ಟಿದರೆ ಮಗುವಿಗೆ ಎಲ್ಲ ಬಂಗಾರದ ದಾಗಿನೆ, ನಿನಗೆ ಜರದ ಶಾಲು ಕೊಡಿಸುವೆವು. ಆದರೆ ಹೆಣ್ಣು ಹುಟ್ಟಿದರೆ ಮಾತ್ರ ನಿನ್ನ ತವರಿಗೆ ಯಾರೂ ಕಾಲು ಹಾಕುವುದಿಲ್ಲ"

ಮಾವನವರ ಮಾತು ನಿಜವಾಯ್ತು. ಮೊದಲಿನದು ಹೆಣ್ಣಾಯಿತು. ಎರಡನೆಯದೂ ಹೆಣ್ಣಾಯಿತು. ಮೂರನೆಯ ಸಲ ಗಂಡು ಹುಟ್ಟಿತು. ಆಗ ಮಾತ್ರ ಮಗುವಿಗೆ ಎಲ್ಲ ಬಂಗಾರದ ಒಡವೆ ದೊರೆತವು. ಆನಂದೀಬಾಯಿಯವರಿಗೂ ಜರದ ಶಾಲೇ ಸಿಗಲಿತ್ತು. ಆದರೆ ದೂರದ ಅತ್ತೆಯನ್ನು ಮುಂದೆ ಮಾಡಿ ತಮ್ಮ ಅಂಜೀರಿ ಬಣ್ಣದ ಸೀರೆಯ ಇಚ್ಛೆಯನ್ನು ವ್ಯಕ್ತಮಾಡಿದರು. ಆದರೆ ಕೂಸಿಗೆ ಹೆಸರಿಡುವ ದಿನ ಸೀರೆ ಸಿಗಲಿಲ್ಲ. ಮುಂದೆ ಕೆಲಸದ ಸಲುವಾಗಿ ಮಾವನವರು ಮುಂಬೈಗೆ ಹೋದಾಗ ಅಲ್ಲಿಂದ ಆ ಸೀರೆ ತಂದರು. ಅಂಜೀರಿ ಬಣ್ಣದ, ರೇಶಮಿ, ಜರದ ಅಂಚಿನ ಸೀರೆ.

ಆದರೇನು? ಆಗಿನ ಕಾಲಕ್ಕೆ ಈಗಿನಂತೆ ಬೇಕಾದಾಗ ಹೊಸ ಸೀರೆಯ ಗಳಿಗೆ ಮುರಿಯುವುದು ಶಕ್ಯವಿರಲಿಲ್ಲ. ಅದಕ್ಕೆ ಮುರಿಯಲೂ ಶುಭ ಮುಹೂರ್ತ ಬೇಕು. ಅಲ್ಲದೆ ಒಂದೇ ತಿಂಗಳಿನ ಬಾಣಂತಿ ಬೇರೆ. ಕೊನೆಗೆ ಪಂಚಾಂಗ ನೋಡಿ, ಒಳ್ಳೆಯ ದಿನ ಗೊತ್ತುಮಾಡಿ, ಅಂದು ಆ ಸೀರೆ ಉಟ್ಟುಕೊಂಡು ಮಗುವಿನೊಡನೆ ಗುಡಿಗೆ ಹೋಗುವವರಿದ್ದರು. ಅಷ್ಟರಲ್ಲೇ ಅವರ ಮೈದುನನ ಮದುವೆ ನಿಶ್ಚಯವಾಯಿತು. ಮದುವೆ ಮುಂದೂಡುವುದು ಮಾವನವರಿಗೆ ಸರಿಬರದ್ದರಿಂದ ಮದುವೆಯೂ ಆಯ್ತು. ಪಂತರ ತಮ್ಮ ಪಂತರಿಗಿಂತ ಹೆಚ್ಚು ಕಲಿತವ. ಹೆಚ್ಚು ಗಳಿಸುತ್ತಿದ್ದ. ಸರಕಾರಿ ನೌಕರಿ ಬೇರೆ. ಶ್ರೀಮಂತರ ಹುಡುಗಿ ಹೇಳಿ ಬಂದಳು. ತಂದೆಯಿಲ್ಲದ ಮಗು. ಮಗಳೆಂದರೆ ತಾಯಿಗೆ ಜೀವ. ಅದರಿಂದ ಆನಂದಿಬಾಯಿಗಿಂತ ಈ ಚಿಕ್ಕ ಸೊಸೆಯನ್ನು ಮನೆಯಲ್ಲಿ ಬೇರೆ ರೀತಿಯಲ್ಲಿ ನಡೆಸಿಕೊಂಡರು. ಅವಳ ಇಚ್ಛೆಯಂತೆ ಎಲ್ಲ ನಡೆಯುತ್ತಿತ್ತು. ಅಲ್ಲದೆ ಅವಳ ಗಂಡನೆಂದರೆ ಮಾವನವರ ಕಡೆಯ ಮಗ. ರಜೆ ಮುಗಿದ ಬಳಿಕ ಅವರಿಬ್ಬರೂ ನೌಕರಿ ಇದ್ದ ಊರಿಗೆ ಹೋಗುವವರು. ನಾಲ್ಕು ದಿನದ ಸಲುವಾಗಿ ಮದುಮಗಳನ್ನು ಯಾರೂ ನೋಯಿಸಬಾರದು ಎಂದು ಮಾವನವರ ಅಪ್ಪಣೆ!

ಗುಡಿಗೆ ಹೋಗುವ ದಿನ ಬಂತು. ಆನಂದೀಬಾಯಿಯವರ ಜೊತೆಗೆ ಅವರ ನೆಗೆಣ್ಣಿ ಸಹ ಹೋಗುವವಳಿದ್ದಳು. ಆನಂದೀಬಾಯಿಯವರ ಅಂಜೀರಿ ಸೀರೆ ನೋಡಿ ನೆಗೆಣ್ಣಿ ಕೇಳಿದಳು.

"ಯಾರು ತಂದರು ಈ ಸೀರೆಯನ್ನು?"

"ಮಾವನವರು."

"ಹಾಗಾದರೆ ನನಗೆ ಇದನ್ನು ಕೊಡಿ. ನಾನು ಗಳಿಗೆ ಮುರಿಯುತ್ತೇನೆ. ನನಗೆ ಇದು ಬಹಳ ಸೇರಿತು. ನೀವು ಬೇರೆ ಯಾವುದನ್ನಾದರೂ ಉಡಿ" ಎನ್ನುತ್ತ ತನ್ನ ಕೋಣೆಗೆ ಹೋಗಿ ಒಂದು ಹೊಸ ಸೀರೆಯನ್ನು ತಂದು ಆನಂದೀಬಾಯಿಯವರಿಗೆ ಉಡಲು ಕೊಟ್ಟು ಅಂಜೀರಿ ಶೀರೆಯನ್ನು ಎತ್ತಿಕೊಂಡಳು. ಹೋದ ಮೂರು ನಾಲ್ಕು ವಾರಗಳಿಂದ ಆನಂದೀಬಾಯಿ ಆ ಸೀರೆಯನ್ನು ಪ್ರತಿದಿನವೂ ಕೈಹಚ್ಚಿ ನೋಡುತ್ತಿದ್ದರು. ಅದರ ಅಂಚನ್ನು ನಿರೀಕ್ಷಿಸುತ್ತಿದ್ದರು. ಗುಡಿಗೆ ಹೋಗುವ ದಿನ ಎಂದು ಬರುತ್ತದೆಯೋ ಎಂದು ಕಾಯುತ್ತಿದ್ದರು. ಆ ಸೀರೆಯ ಮೋಹ ಅವರಿಗೆಲ್ಲೂ ಕಡಿಮೆಯಾಗಲೊಲ್ಲದು.

"ನಾನು ಬೇಕೆಂದೇ ತರಿಸಿಕೊಂಡಿದ್ದೇನೆ. ಇದನ್ನು ಇಂದು ನಾನು ಉಡುತ್ತೇನೆ. ನೀವು ನಿಮ್ಮ ಮಂಗಳಗೌರಿಯ ಪೂಜೆಯ ದಿನ ಉಡಿ" ಎನ್ನುತ್ತ ನೆಗೆಣ್ಣಿಯ ಕೈಯಿಂದ ಆ ಸೀರೆಯನ್ನು

ತೆಗೆದುಕೊಂಡರು.

ನೆಗೆಣ್ಣಿ ಏನೂ ಮಾತನಾಡಲಿಲ್ಲ. ಗಂಡನ ಖೋಲಿಗೆ ಹೋಗಿ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಅವಳ ಇಚ್ಛೆ ಈಡೇರಲಿಲ್ಲ. ಎಂತಹ ಅವಮಾನ! ಅದರಲ್ಲೂ ಬಡವರ ಮನೆಯ ಅಶಿಕ್ಷಿತ, ಆನಂದೀಬಾಯಿಯವರಿಂದ! ತಾನು ಅವಳಿಗಿಂತ ಹೆಚ್ಚು ಸುಂದರಳು, ಹೆಚ್ಚು ಕಲಿತವಳು, ಶ್ರೀಮಂತರ ಮಗಳು, ತನ್ನ ಗಂಡನೆಂದರೆ ಮಾವನವರ ಮುದ್ದುಮಗ. ಇಷ್ಟಿದ್ದೂ ತನಗೆ ಇಂತಹ ಘೋರ ಅವಮಾನ! ಛೆ......! ಆ ಸೀರೆ ಸಿಗದಿದ್ದರೆ ಅನ್ನ ನೀರು ಬೇಡವೆಂದು ಅವಳು ಹಟ ಹಿಡಿದಳು.

ಸಂಜೆಯಾಯ್ತು, ಗುಡಿಗೆ ಹೋಗುವುದು ಉಳಿದೇ ಹೋಯ್ತು, ಮೈದುನ ಬಂದು ಅತ್ತಿಗೆಗೆ ಹೇಳಿದ:

"ಕೊಟ್ಟುಬಿಡಿ ಅತ್ತಿಗೆ ಅದರ ಇಮ್ಮಡಿ ಕಿಮ್ಮತ್ತಿನ ಸೀರೆಯನ್ನು ನಾನು ತಂದುಕೊಡುತ್ತೇನೆ."

"ಇದೇ ಮಾತು ನಿಮ್ಮ ಹೆಂಡತಿಗೆ ಹೇಳಿ-ದರೆ? ಮನೆಗೆ ಅವಳು ಬಂದು ಇನ್ನೂ ಏಳು ದಿನಗಳಾಗಲಿಲ್ಲ. ಏಳು ವರ್ಷ ಕಳೆದರೂ ಒಮ್ಮೆಯೂ ಯಾರೂ 'ನಿನಗೆ ಏನು ಬೇಕು' ಎಂದು ನನಗೆ ಎಂದೂ ಕೇಳಲಿಲ್ಲ."

ನೆಗೆಣ್ಣಿ ಇನ್ನೂ ಊಟ ಮಾಡಿರಲಿಲ್ಲ.

ದಾಳಿಂಬಿ ಬಣ್ಣದ ಜರದ ಚೌಕಡಿಯ ಹೊಸ ಸೀರೆ ತಂದು ಮಾವನವರು ಬಾಣಂತಿಯ ಖೋಲಿಯ ಬಾಗಿಲಿಗೆ ಬಂದು, "ಅವಳನ್ನು ಅಳಿಸಬೇಡ. ಅವಳಿನ್ನೂ ಚಿಕ್ಕವಳು. ನೀನು ಹಿರಿಯಳು ಈ ಸೀರೆ ಉಟ್ಟುಕೊಂಡು, ಅವಳನ್ನು ಕರೆದುಕೊಂಡೇ ಗುಡಿಗೆ ಹೋಗಿ ಬಾ" ಎಂದರು.

ಆನಂದಿಬಾಯಿಯವರಿಗೆ ದುಃಖ ತಡೆಯಲಿಲ್ಲ. ಈ ಮನೆಗೆ ಬಂದು ಏಳು ವರ್ಷಗಳಾದವು. ಹಿರಿಯರ ಸೇವೆಯನ್ನು ಅವರು ಪೂಜ್ಯ ಭಾವನೆಯಿಂದ ಮಾಡುತ್ತ ಬಂದಿದ್ದರು. ಮನೆಯಲ್ಲಿ ಕುಳಿತು ಉಣ್ಣುವಷ್ಟು ಸಂಪತ್ತು ಇದ್ದರೂ ಮುಸುರೆ ತಿಕ್ಕುವವಳನ್ನು ಬಿಟ್ಟರೆ ಮತ್ತೆ ಬೇರೆ ಆಳು ಮನೆಯಲ್ಲಿ ಇರಲಿಲ್ಲ. ಬರುವವರು, ಹೋಗುವವರು ಯಾವತ್ತೂ ಮನೆಯಲ್ಲಿ ನಡೆಯುತ್ತಿತ್ತು. ಆದರೂ ಆನಂದೀಬಾಯಿ ಎಂದೂ ಸಿಡುಕು ಮಾಡಲಿಲ್ಲ. ಕೆಲಸಕ್ಕೆ ಬೇಸರಿಸಲಿಲ್ಲ. ಆದರೂ ಮನೆಯಲ್ಲಿ ಅವರಿಗೆ ಪ್ರೀತಿ ಸಿಗಲಿಲ್ಲ. ಇಂದಿನ ಈ ಅನ್ಯಾಯ ಅವಳನ್ನು ತುಂಬಾ ಅಳಿಸಿತು.

ಅಂಜೀರಿ ಸೀರೆಗೆ ಕುಂಕುಮ ಹಚ್ಚಿ ದೇವರ ಮುಂದಿಟ್ಟು, ನಂತರ ಗಳಿಗೆ ಬಿಚ್ಚಿ, ನಿರಿಗೆ ಮಾಡಿ, ನೆಗೆಣ್ಣಿಯ ಹತ್ತರ ಬಂದು ಅವಳ ಕೈ-ಯಲ್ಲಿ ಕೊಡುತ್ತ, "ತಪ್ಪಾಯ್ತು. ಬಡವರ ಮನೆಯವಳು ನಾನು. ಯಾವಾಗ್ಗೆ ಹೇಗೆ ನಡೆದುಕೊಳ್ಳಬೇಕು ಎಂಬುದು ತಿಳಿಯುವುದಿಲ್ಲ, ಕ್ಷಮಿಸು, ಊಟಕ್ಕೆ ನಡೆ" ಎಂದು ಅವಳನ್ನು ಕೈ ಹಿಡಿದು ತಂದು ಮಣೆಯ ಮೇಲೆ ಕೂಡಿಸಿದರು.

ಅಂದು ಮಾತ್ರ ಆನಂದೀಬಾಯಿ ಏಳು ವರ್ಷದಲ್ಲಿ ಮೊದಲನೆಯ ಸಲ ಮಾವನವರ ಮಾತನ್ನು ಮೀರಿದರು. ತಾಯಿ ಕೊಟ್ಟ ಹಸಿರು ಬಣ್ಣದ ಟೋಪ ಸೆರಗಿನ, ಖಂಬಾಯತಿ ಸೀರೆ ಉಟ್ಟು ಅಂಜೀರಿ ಸೀರೆ ಉಟ್ಟ ನೆಗೆಣ್ಣಿಯ ಜೊತೆಗೆ ಗುಡಿಗೆ ಹೋಗಿ ಬಂದರು. ಮಾವನವರು ತಂದ ದಾಳಿಂಬಿ ಬಣ್ಣದ ಸೀರೆ ಟ್ರಂಕಿನಲ್ಲಿ ಉಳಿಯಿತು. ಅದು ಇನ್ನೂ ಹಾಗೆಯೇ ಉಳಿದಿದೆ.

ದೇವರು ಅವರಿಗೆ ಒಂದು ಗಂಡು ಮಗು ಕೊಟ್ಟು ಅವರ ಮಾನ ಉಳಿಸಿದ. ನಂತರ ಅವರಿಗೆ ಮಕ್ಕಳಾಗಲಿಲ್ಲ. ಮಗನ ಮುಂಜಿವೆ, ಹೆಣ್ಣು ಮಕ್ಕಳ ಮದುವೆ ಯೋಗ್ಯ ವೇಳೆಗೆ ಆಯಿತು.

ಮಗ ದೊಡ್ಡವನಾದ. ಹೆಚ್ಚು ಪಗಾರದ ನೌಕರಿ ಹಿಡಿದು ಮೊದಲನೆಯ ಪಗಾರ ಕೈಯಲ್ಲಿ ಬಂದಾಗ ಮಗ "ಅವ್ವ, ನಿನಗೇನು ಬೇಕು ಹೇಳು. ನನ್ನ ಮೊದಲನೆಯ ಪಗಾರ ಬಂದಿದೆ. ನಿನಗೇನಾದರೂ ತೆಗೆದುಕೊಳ್ಳಬೇಕೆಂದು ನನ್ನ ಮನಸ್ಸಿನಲ್ಲಿ ಇದೆ."

ಮಗ ಚಿಕ್ಕವನಿದ್ದಾಗ ಆನಂದೀಬಾಯಿ ಅವನನ್ನು ತಮ್ಮ ಹೃದಯಕ್ಕೆ ಅಪ್ಪಿಕೊಂಡು "ಮಗು, ನಿನ್ನದೆ ನನಗೆ ಆಧಾರ. ನನಗೆ ಯಾರದೂ ಏನೂ ಬೇಕಿಲ್ಲ. ನೀನು ದೊಡ್ಡವನಾಗಿ ನನಗೆ ಅಂಜೀರಿ ರೇಶಿಮೆ ಸೀರೆ ತಂದು ಕೊಡು" ಎನ್ನುತ್ತಿದ್ದರು. ಈಗ ಆ ಮಗು ದೊಡ್ಡವನಾಗಿ ಕೇಳುತ್ತಿದ್ದಾನೆ ! "ಅವ್ವ, ನಿನಗೇನು ಬೇಕು ? ಏನು ತರೋಣ ? ನಿನಗೇನು ಸೇರುತ್ತದೆ ?"

ಆನಂದೀಬಾಯಿ ಕಳೆದ ಇಪ್ಪತ್ತೈದು ವರ್ಷದ ಕಾಲವನ್ನು ಮರೆತರು. "ಹೇಳಲೆ ? ನನಗೊಂದು ಗರ್ಭ ರೇಶಮಿಯ, ಜರದ ಅಂಚಿನ, ಅಂಜೀರಿ ಬಣ್ಣದ ಇಂದೂರಿ ಸೀರೆ ತಂದು ಕೊಡು."

"ಇಷ್ಟೇನೇ ? ಅಗದಿ ಅಂತಹ ಶೀರೆಯನ್ನೇ ತಂದು ಕೊಡುತ್ತೇನೆ. ಅಂತಹದು ಸಿಗದೆ ಹೋದರೆ ನೇಯಿಸಲು ಹೇಳಿ ತಂದುಕೊಟ್ಟರಾಯ್ತು ಹೌದಲ್ಲೊ ?"

ನಿಜವಾಗಿಯೂ ಮಗನು ತಾಯಿಯ ಇಚ್ಛೆ ಪೂರೈಸಿದ. ಬಯಕೆಯಂತೆಯೆ ಆನಂದೀಬಾಯಿಯವರಿಗೆ ಸೀರೆ ದೊರೆಯಿತು. ಅದನ್ನು ಉಟ್ಟಾಗ ಸರದಾರ ಸಂಸ್ಥಾನಿಕನ ಹೆಂಡತಿಯಂತೆ ಕಾಣುತ್ತಿದ್ದರವರು. ಆ ಸೀರೆಯ ಮೇಲೆ ಅವರಿಗೆ ಅತಿ ಪ್ರೀತಿ. ಅಂತೆಯೇ ಸೊಸೆಗೆ ಉಡಲು ಕೊಟ್ಟರೂ ಎಲ್ಲಿ ಪಿನ್ ಹಚ್ಚಿ ಹರಿಯುತ್ತಾಳೋ, ಎಲ್ಲಿ ಕಾಲೊಳಗೆ ಸಿಕ್ಕಿಸಿಕೊಂಡು ಹೊಲಸು ಮಾಡುತ್ತಾಳೋ ಎಂದು ಅವರ ಮನಸ್ಸಿಗೆ ಚಡಪಡಿಕೆ.

ಮರುದಿನ ಶನಿವಾರ. ಮಗ ಆಫೀಸಿನಿಂದ ಬೇಗನೇ ಬಂದ. ಅವನ ಹೆಂಡತಿ ಆತನ ದಾರಿಯನ್ನೇ ಕಾಯುತ್ತಿದ್ದಳು. ಸಿನೇಮಾಕ್ಕೆ ಹೋಗುವ ತಯಾರಿಯಾಗಿತ್ತು. ಮಗ ಖೋಲಿಯೊಳಗೆ ಹೋದ. ಸ್ವಲ್ಪ ಹೊತ್ತಿನಲ್ಲೆ ಇಳಿಮುಖ ಮಾಡಿಕೊಂಡು ತಾಯಿಯ ಸಮೀಪಕ್ಕೆ ಬಂದ.

"ಅವ್ವ, ನಿನ್ನ ಆ ಅಂಜೀರಿ ಸೀರೆಯನ್ನು ನಿನ್ನ ಸೊಸೆಗೇ ಕೊಟ್ಟುಬಿಡು. ಮುಂದಿನ ವಾರ ಆಫೀಸಿನ ಕೆಲಸದ ಸಲುವಾಗಿ ಮುಂಬಯಿಗೆ ಹೋಗುವವನಿದ್ದೇನೆ. ಬರುವಾಗ ಅಂತಹದೇ ಬೇರೆ ಸೀರೆ ನಿನಗೆ ತಂದುಕೊಡುತ್ತೇನೆ."

"ಇಷ್ಟು ಸೇರಿದೆಯೇನು ಅವಳಿಗೆ ಆ ಸೀರೆ ? ಅಂದಮೇಲೆ ಉಟ್ಟುಕೊಳ್ಳಲಿ ಅವಳು. ನಿನ್ನೆಯಿಂದ ಅವಳ ಹತ್ತಿರವೇ ಇದೆ ಅದು. ಮತ್ತೆ ಬೇರೆ ಸೀರೆ ತರುವುದು ಯಾಕೆ ? ನಾವಿಬ್ಬರೂ ಒಮ್ಮೊಮ್ಮೆ ಉಟ್ಟುಕೊಳ್ಳುತ್ತೇವೆ. ಅವಳಾದರೂ ಎಲ್ಲಿ ಸದಾ ಒಂಬತ್ತು ವಾರಿನ ಸೀರೆ ಉಡುತ್ತಾಳೆ ?"

"ಅಲ್ಲ ಖರೆ... ಆಕೆ ಆ ಸೀರೆ ಹರಿದು ಐದು ವಾರಿ ಮಾಡ್ಯಾಳ."

"ಹೂಂ. ಏನಂದಿ ?" ಎಂದು ದುಃಖದಿಂದ, ಆಶ್ಚರ್ಯದಿಂದ ಆನಂದಿಬಾಯಿ ಮಗನ ಕಡೆಗೆ ನೋಡಿದರು.

ಮಗ ತಾಯಿಯ ಕಡೆಗೆ ನೋಡಿದ. ಮಾತನಾಡಲು ಏನೂ ಹೊಳೆಯಲಿಲ್ಲ. ಆದರೂ...... "ನಿನ್ನ ಅಚ್ಚೆಯ ಸೊಸೆ ಅವಳು... ಅಂದರೂ ನಾನು ಅಂದೆ, ನಿನ್ನ ಕೇಳದೆ ಯಾಕೆ ಸೀರೆ ಹರಿದಿ ಅಂತ" ಎಂದು ತಡವರಿಸುತ್ತ ಮಗ ನುಡಿದ.

ಅಷ್ಟರಲ್ಲೇ ಆ ಅಂಜೀರಿ ಸೀರೆ ಹರಿದು ಐದು ವಾರಿ ಮಾಡಿದ್ದನ್ನು ಉಟ್ಟುಕೊಂಡು ಸೊಸೆಯೇ ಬಂದಳು.

ಆನಂದೀಬಾಯಿಯವರ ಮನಸ್ಸಿಗಾದ ನೋವಿನ ಹಕ್ಕಳಿ ಉದುರಿತು. ದುಃಖದ ರಕ್ತ ಹರಿಯತೊಡಗಿತು. ಅತಿ ಪ್ರಯತ್ನದಿಂದ ಅವರು ಆ ನೋವನ್ನು ಮರೆತರು. ನಗುತ್ತ ಹೋಗಿ, ತಮ್ಮ ಟ್ರಂಕ್ ತೆಗೆದು ದಾಳಿಂಬಿ ಬಣ್ಣದ ಜರದ ಕಡ್ಡಿಯ ಸೀರೆ ತಂದು ಸೊಸೆಯ ಕೈಯಲ್ಲಿ ಕೊಡುತ್ತ, "ಇದು ಸಹ ನಿನಗೆ ಸುಂದರವಾಗಿ ಕಾಣಬಹುದು, ನೋಡು" ಎಂದರು.

"ವ್ಹಾ, ಎಷ್ಟು ಮಸ್ತ ಅದ ಈ ಸೀರಿ" ಎನ್ನುತ್ತ ತನಗೆ ಅದು ಹೇಗೆ ಕಾಣಬಹುದು ಎಂದು ನೋಡಲು ಸೊಸೆ ಕೋಣೆಗೆ ಓಡಿದಳು.

ಮಗ ತಾಯಿಯ ಕಡೆಗೆ ನೋಡುತ್ತ,

"ಅವ್ವಾ, ಸಿಟ್ಟಿಗೆದ್ದಿಯೇನು ?" ಎಂದ.

ಒಂದು ನಿಟ್ಟುಸಿರು ಬಿಟ್ಟು ಆನಂದೀಬಾಯಿ ಅಂದರು:

"ಛೀ, ಸಿಟ್ಟಿಗೇಳುವ ಕಾರಣವೇನು? ಅವಳ ವಯಸ್ಸೇ ಅಂತಹದು. ಆ ಸೀರಿನರೆ ಏನು? ನನ್ನ ತಂದೆ ಕೊಂಡು ಕೊಟ್ಟದ್ದಲ್ಲ. ಅಥವಾ ನನ್ನ ಗಂಡ ತಂದದ್ದಲ್ಲ. ನೀನೇ ತಂದದ್ದು. ಗಂಡಸು ತಂದ ಸೀರೆಯ ಮೇಲೆ ಹೆಂಡತಿಯ ಅಧಿಕಾರವಿಲ್ಲವೆ? ಉಡಲಿ, ಅವಳಿಗೇ ಅದು ಸುಂದರವಾಗಿ ಕಾಣುತ್ತದೆ."

ಆನಂದಿಬಾಯಿ ಒಳಗೆ ಹೊರಟು ಹೋದರು. ಮಗ ತನ್ನ ಕೋಣೆಗೆ ಹೋದ. ಇದನ್ನೆಲ್ಲ ಕೇಳುತ್ತ ಪಂತರು ಹೊರಗೆ ತೆಕ್ಕೆಗೆ ಆತು ಕುಳಿತು ಕಾಲಿನ ಉಗುರು ಕತ್ತರಿಸುತ್ತಿದ್ದರು. ಇನ್ನೂ ಎರಡು ಬೆರಳಿನ ಉಗುರು ಕತ್ತರಿಸುವುದಿತ್ತು. ಕೂಡಲೇ ಎದ್ದರು. ಕೋಟು, ಟೊಪ್ಪಿಗೆ ಹಾಕಿಕೊಂಡು, ಕಾಲೊಳಗೆ ಚಪ್ಪಲಿ ಹಾಕಿಕೊಂಡು ಪಂತರು ಹೊರಗೆ ಹೋದರು.

ಆನಂದೀಬಾಯಿ ತಮ್ಮ ಟ್ರಂಕು ತೆಗೆದರು. ಆ ಟ್ರಂಕಿನಲ್ಲಿ, ಎರಡೂ ಹೆಣ್ಣು ಮಕ್ಕಳ ಮದುವೆಯಲ್ಲಿ "ತಾಯಿ ಹೊಟ್ಟೆತಣ್ಣಗೆ" ಮಾಡಿದ ಸೀರೆ ಇದ್ದವು. ಮಗನ ಮುಂಜಿವೆಯಲ್ಲಿ ಮಾವ ತಂದುಕೊಟ್ಟ ಸೀರೆ ಇತ್ತು. ತಂದೆಯವರು ಉಡುಗೊರೆ ಮಾಡಿದ ಸೀರೆ ಇತ್ತು. ಆದರೆ ಮೊಮ್ಮಗನ ಮದುವೆ ನೋಡಲು ಅವರ ತಂದೆ ಬರಲಿಲ್ಲ. ಆದರೂ ಅವರ ತಾಯಿ, ಅಗ್ಗದ್ದಾದರೂ ಅವರಿಗೆ ಒಂದು ಸೀರೆ ಉಡಿಸಿದ್ದರು. ಅದನ್ನು ನೋಡಿದಾಗ ಆನಂದೀಬಾಯಿಯವರಿಗೆ ದುಃಖ ತಡೆಯದಾಯಿತು. ಅದನ್ನು ಉಟ್ಟುಕೊಳ್ಳಬೇಕು. "ತಾಯಿಯ ಪ್ರೀತಿಯ ಕೈ ನನ್ನ ಮೆಯ್ಮೇಲೆಲ್ಲ ಆಡಲಿ" ಎಂದು ಅವರು ಆ ಸೀರೆಯನ್ನು ಉಟ್ಟುಕೊಂಡರು. ಮುಖ ತೊಳೆದುಕೊಂಡರು. ಮುಖ ಒರೆಸುತ್ತ ತಿರುಗಿದಾಗ, ಪಂತರು ಹೊಸ ಸೀರೆಯ ಗಳಿಗೆ ಮುಂದೆ ಮಾಡುತ್ತ, "ಅಗದಿ ಅಂತಹದೇ ಸಿಗಲಿಲ್ಲ. ಬಣ್ಣ ಮಾತ್ರ ಅಂತಹದು ತಂದೀನಿ. ನೋಡು ಉಡತೀ ಇದನ್ನ?" ಎಂದರು. ಆನಂದಿಬಾಯಿ ಅವರ ಕೈಯೊಳಗಿನ ಸೀರೆ ತಕ್ಕೊಂಡರು. ಅವರ ಕಣ್ಣಲ್ಲಿ ಆನಂದಾಶ್ರು ಸುರಿಯುತ್ತಿತ್ತು. ಅವರಿಗೆ ಸೀರೆಯ ಬಣ್ಣವೂ ಕಾಣಿಸಲಿಲ್ಲ. ಜರದ ಅಂಚೂ ದೃಷ್ಟಿಗೆ ಬೀಳಲಿಲ್ಲ. ಆದರೂ ಆನಂದದಿಂದ, "ಹೋ ಸೇರಿತು. ಇದು ನನಗೆ ಬಹಳೇ ಸೇರಿತು" ಎಂದರು. "ಹಾಗಾದರೆ ಉಟ್ಟುಕೊ," ಎಂದು ಪಂತರು ಸೀರೆಯ ಗಳಿಗೆ ಮುರಿದು ನಿರಿಗೆ ಮಾಡಿ ಹೆಂಡತಿಯ ಕೈಯಲ್ಲಿ ಕೊಟ್ಟರು. "ನಾನು ಅದುವರೆಗೆ ಮುಖ ತೊಳೆದುಕೊಂಡು ಬರುತ್ತೇನೆ. ನಂತರ ನಾವು ದೇವರಿಗೆ ಹೋಗಿ ಬರೋಣ."

ಸ್ವಲ್ಪ ಹೊತ್ತಿನಲ್ಲೆ ಅವರಿಬ್ಬರು ತಯಾರಾಗಿ ಬಾಗಿಲ ಹತ್ತಿರ ಬಂದರು. ಕಾಲೊಳಗೆ ಚಪ್ಪಲಿ ಸರಿಸುತ್ತ ಪಂತರು ಮಗನನ್ನುದ್ದೇಶಿಸಿ, "ಏ, ಮೋಹನ, ನಾವಿಬ್ಬರೂ ಅಡ್ಡಾಡಲು ಹೋಗ್ತೀವಿ. ಹಂ, ಈಕಿ ಇನ್ನೂ ಆ ಪೋಲೀಸ್ ನಾಕಾದ ಹತ್ತಿರದ ಪಾರ್ಕ್ ನೋಡಿಲ್ಲಂತ. ಅದನ್ನು ತೋರಿಸಿಕೊಂಡು ಬರ್ತೀನಿ."

ಆನಂದೀಬಾಯಿಯವರಿಗೆ ಹೇಗೆ ಹೇಗೊ ಆಯಿತು. ಮಗ ಸೊಸೆಯೂ ಹೊರಗೆ ಹೋಗಲಿದ್ದರು! ಆದರೆ ಪಂತರು "ಏ, ನಡಿಯಲ್ಲ ನಿಂತಿಯಾಕ? ಏ ಮೋಹನ, ಇಲ್ನೋಡು, ನಾವು ಬಹುತೇಕ ತಡಾ ಮಾಡಿ ಬರ್ತೀವಿ. ಪರಸ್ಪರ ಸಿನೇಮಾಕ್ಕ ಹೋದರೂ ಹೋದ್ವಿ. ಊಟಕ್ಕೇನು ಹಾದಿ ನೋಡಬ್ಯಾಡ್ರಿ" ಎನ್ನುತ್ತ ಹೊರಟರು.

ಮಗ ನೋಡುತ್ತಲೇ ನಿಂತ.

ದಾರಿಯಲ್ಲಿ ಪಂತರು ಶಕ್ಯವಿದ್ದಷ್ಟು ಕಡಿಮೆ ಅಂತರವಿಟ್ಟು ಆನಂದೀಬಾಯಿಯವರೊಡನೆ ನಡೆಯುತ್ತಿದ್ದರು, ಹೆಂಡತಿ ತನಗಿಂತ ಎತ್ತರವಿರುವುದರ ಪರವೆ ಇಲ್ಲದೆ. ಐವತ್ತೈದು ವರ್ಷ ಕಳೆದ ಬಳಿಕ ಆಯುಷ್ಯದಲ್ಲಿ ಇಂದು ಅವರಿಗೆ ಸ್ವಂತದ ವ್ಯಕ್ತಿತ್ವ ದೊರೆತಿತ್ತು. *

# ಪ್ರಾಚೀನ ಕಾಲದಲ್ಲಿ ಅನ್ನ ಸತ್ಯಾಗ್ರಹ

ಉದಯ ನಾರಾಯಣ ತಿವಾರಿ

ಆರ್ಥಿಕ ಮತ್ತು ನೈತಿಕ ಜಗತ್ತಿನಲ್ಲಿ ತುಂಬ ಪರಿವರ್ತನೆಗಳಾಗುತ್ತ ನಡೆದಿವೆ. ಪರಂಪರಾಗತವಾದ ಮೂಲ್ಯಗಳು ಹೊಸ ಮಾನದಂಡದಿಂದ ಅಳೆಯಲ್ಪಡುತ್ತಿವೆ. ಹಾಗಿದ್ದರೂ ಹಳೆಯ ಕಾಲದ ವಿಚಾರಗಳು ಜನರ ಹೃದಯದಲ್ಲಿ ಹಾಗೆಯೆ ಉಳಿದುಕೊಂಡಿರುತ್ತವೆ. ಭಾರತದಲ್ಲಿ ಆಗುತ್ತಿರುವ ಪರಿವರ್ತನೆಗಳ ನಿಜವಾದ ಬೆಲೆಯನ್ನರಿಯಲು ಕಲ್ಹಣನ "ರಾಜತರಂಗಿಣಿ" ಒಂದು ಮಹತ್ವಪೂರ್ಣವಾದ ಹಿನ್ನೆಲೆಯನ್ನು ಒದಗಿಸುತ್ತದೆ.

ಕವಿ ಕಲ್ಹಣನು ಅನಶನದ ಅಂದರೆ ಉಪವಾಸದ ಚರ್ಚೆಯನ್ನು ಮಾಡಿದ್ದಾನೆ. ಆತ ಅದನ್ನು 'ಪ್ರಾಯೋಪವೇಶ' ಎಂದು ಕರೆದಿದ್ದಾನೆ. 'ಅನಶನ'ವು ಬಲಿಷರ ವಿರುದ್ಧ ದುರ್ಬಲರು ಎತ್ತುವ ಶಸ್ತ್ರವೆಂದು ಆತ ವರ್ಣಿಸಿದ್ದಾನೆ. 'ರಾಜತರಂಗಿಣಿ'ಯ ನಾಲ್ಕನೆಯ




'ತ್ರಿಪಥಗಾ' ದಿಂದ

ಸರ್ಗದಲ್ಲಿ ಒಂದೆಡೆ ಈ ಮುಂದಿನ ಘಟನೆಯು ಉಲ್ಲೇಖಿಸಲ್ಪಟ್ಟಿದೆ:

ಯಾವಳೋ ಒಬ್ಬ ಬ್ರಾಹ್ಮಣ ಸ್ತ್ರೀ ಉಪವಾಸ ಕೈಕೊಂಡಿರುವಳೆಂಬ ವಾರ್ತೆ ಅರಸನಿಗೆ ತಲುಪುತ್ತದೆ. ಅಧಿಕಾರಿಗಳು ಆ ಬಗ್ಗೆ ವಿಚಾರಿಸಿದಾಗ ಬ್ರಾಹ್ಮಣಿ ಹೇಳಿದಳು: "ಮಹಾರಾಜ, ತಾವು ಸಕಲ ಬಗೆಯ ಅಪರಾಧಿಗಳನ್ನು ನಾಶ ಮಾಡುತ್ತೀರಿ. ಆದರೆ ತಮ್ಮ ರಾಜ್ಯದಲ್ಲಿ ನನ್ನ ಪತಿಯನ್ನು ಆತ ಮಲಗಿದ್ದಾಗ ಯಾವನೊ ಒಬ್ಬ ಅಜ್ಞಾತವ್ಯಕ್ತಿ ಕೊಲೆ ಮಾಡಿದ್ದಾನೆ. ಯಾವುದೇ ಸದಾಚಾರಿ ರಾಜನಿಗೆ ಇದು ನಾಚಿಕೆ ತರುವಂಥ ಕಾರ್ಯ. ಇದು ಉಳಿದೆಲ್ಲ ಅಪರಾಧಗಳಿಗಿಂತ ದೊಡ್ಡ ಅಪರಾಧ. ತಾವಿದನ್ನು ಹೇಗೆ ಸಹಿಸುವಿರಿ? ನಾನೆಷ್ಟು ವಿಚಾರಮಾಡಿದರೂ ನನ್ನ ಪತಿಯ ಶತ್ರುಗಳಾರು ಎಂದು ನಿರ್ಣಯಿಸಲಾರದೆ ಹೋದೆ. ಏಕೆಂದರೆ ನನ್ನ ಪತಿ ತುಂಬ ಸಾಧು ಸ್ವಭಾವದವರಾಗಿದ್ದರು. ಈರ್ಷೆ, ಗರ್ವಗಳು ಅವರನ್ನು ಸ್ಪರ್ಶಿಸಿರಲಿಲ್ಲ. ಅವರು ಮೃದುಭಾಷಿಗಳಾಗಿದ್ದು ಸದ್ಗುಣಗಳನ್ನು ಪ್ರೀತಿಸುತ್ತಿದ್ದರು. ಯಾವ ಮೋಹವೂ ಅವರಿಗಿರಲಿಲ್ಲ. ಯಾರೂ ಅವರನ್ನು ದ್ವೇಷಿಸುತ್ತಿರಲಿಲ್ಲ. ಆದರೆ ನನ್ನ ಪತಿಯ ಸಮವಯಸ್ಕನಾದ ಬ್ರಾಹ್ಮಣನೊಬ್ಬನಿದ್ದು ಅವನು ವಿದ್ಯಾಭ್ಯಾಸದಲ್ಲಿ ನನ್ನ ಪತಿಗಿಂತ ಹಿಂದಿದ್ದ. ಆತ ಮಾಕ್ಸಿಕಸ್ವಾಮಿನದಲ್ಲಿರುತ್ತಾನೆ. ಅವನು ಮಂತ್ರ-ಮಾಟಗಳಲ್ಲಿ ಪ್ರವೀಣನಿದ್ದು ಅವನೊಬ್ಬನ ಮೇಲೆಯೆ ಸಂಶಯಪಟ್ಟುಕೊಳ್ಳುವಂತಿದೆ. ಖ್ಯಾತಿ ಸಂಪಾದನೆಯಲ್ಲಿ ಹಿಂಮುಳಿದು ತಮ್ಮ ಪ್ರತಿಭಾಹೀನತೆಗಾಗಿ ಸಂತಾಪಪಟ್ಟುಕೊಳ್ಳುತ್ತ ನಿದ್ರಾವಂಚಿತರಾಗಿ ಚಡಪಡಿಸುತ್ತಿರುವ ಇಂಥ ಕ್ಷುದ್ರಜೀ ಪ್ರತಿಭಾವಂತರಿಗೆ ಕೇಡುಂಟುಮಾಡುತ್ತಾರೆ."

ಬ್ರಾಹ್ಮಣಿಯ ಮಾತುಗಳನ್ನು ಕೇಳಿದ ರಾಜನು ಆ ಬ್ರಾಹ್ಮಣನನ್ನು ಕರೆಯಿಸಿದನು. ಆಗ ಬ್ರಾಹ್ಮಣಿ "ಮಹಾರಾಜ, ಈತ ಮಂತ್ರ-ಮಾಟಗಳಲ್ಲಿ ಅತ್ಯಂತ ಪ್ರವೀಣನಿದ್ದು ತಮ್ಮ ಅಲೌಕಿಕ ನ್ಯಾಯದಾನಕ್ಕೂ ವ್ಯತ್ಯಯ ತರಬಹುದು" ಎಂದಳು.

"ಅಪರಾಧ ಸಿದ್ಧವಾಗದಿದ್ದರೆ ಏನು ಮಾಡಬೇಕೆಂಬ ನಿರ್ಣಯವನ್ನು ನನಗೆ ಬಿಟ್ಟುಕೊಡು. ಅಪರಾಧ ಸಿದ್ಧವಾಗುವ ಮೊದಲು ಒಬ್ಬ ತೀರ ಸಾಮಾನ್ಯ ಮನುಷ್ಯನಿಗೂ ಶಿಕ್ಷೆ ವಿಧಿಸಲು ಬಾರದು. ಅಂದಮೇಲೆ ಅಪರಾಧ ಸಿದ್ಧವಾದರೂ ಮರಣ ದಂಡನೆಯನ್ನು ವಿಧಿಸಲು ಬಾರದಂಥ ಬ್ರಾಹ್ಮಣನಿಗೆ ಶಿಕ್ಷೆಯನ್ನು ವಿಧಿಸುವುದು ಹೇಗೆ ಸಾಧ್ಯ? ಹೇಳು" ಎಂದ ರಾಜ.

"ರಾಜಾಧಿರಾಜಾ, ನಾನು ನಾಲ್ಕು ದಿನಗಳಿಂದ ಏನನ್ನೂ ತಿಂದಿಲ್ಲ. ಕೊಲೆಗಡಕನ ಸೇಡು ತೀರಿಸಿಕೊಳ್ಳಬೇಕೆಂದೇ ನಾನು ನನ್ನ ಪತಿಯೊಂದಿಗೆ ಇಹಲೋಕ ತ್ಯಜಿಸಿ ಹೋಗಲಿಲ್ಲ. ಆ ಬ್ರಾಹ್ಮಣನಿಗೆ ಶಿಕ್ಷೆ ವಿಧಿಸದಿದ್ದರೆ ನಾನು ಉಪವಾಸದಿಂದ ಪ್ರಾಣ ಬಿಡುವೆ" ಬ್ರಾಹ್ಮಣಿ ಹೇಳಿದಳು.

ಬ್ರಾಹ್ಮಣಿಯ ನಿಶ್ಚಯವನ್ನು ಕಂಡು ರಾಜ ತಾನೂ ಅನಶನವನ್ನಾರಂಭಿಸಿದ. ಆತ ತ್ರಿಭುವನ ಸ್ವಾಮಿಯ ಮೂರ್ತಿಯೆದುರು ಹೋಗಿ ಕುಳಿತ. ಮೂರು ದಿನಗಳ ನಂತರ ಗರುಡವಾಹನನು ರಾಜನ ಸ್ವಪ್ನದಲ್ಲಿ ಕಾಣಿಸಿಕೊಂಡು "ರಾಜಾ, ಸತ್ಯಶೋಧನೆಯ ಮಾರ್ಗ ಇದಲ್ಲ. ಮಧ್ಯರಾತ್ರಿಯ ಹೊತ್ತಿಗೆ ನನ್ನ ಮಂದಿರದಲ್ಲಿ ನಿನಗೆ ಜ್ಞಾನೋದಯವಾಗುವುದು" ಎಂದ.

ರಾಜ ಹಾಗೆಯೆ ಮಾಡಿದ. ಆ ಬ್ರಾಹ್ಮಣನ ಅಪರಾಧ ಸಿದ್ಧವಾಯಿತು. ರಾಜ ಆತನಿಗೆ ಶಿಕ್ಷೆ ವಿಧಿಸಿದ. ಬ್ರಾಹ್ಮಣನಾದ್ದರಿಂದ ಅವನಿಗೆ ಮೃತ್ಯು ದಂಡನೆಯನ್ನು ರಾಜ ವಿಧಿಸಲಿಲ್ಲ.

ಇದರಿಂದ ಆ ಕಾಲದಲ್ಲಿ ಉಪವಾಸವು ವ್ಯಕ್ತಿ ಅಥವಾ ಸಮಾಜದ ಕೈಯಲ್ಲಿ ಒಂದು ಪ್ರಬಲ ರಾಜನೈತಿಕ ಶಸ್ತ್ರವಾಗಿತ್ತೆಂದು ತಿಳಿಯುವುದು. ಈ ಅಸ್ತ್ರದ ಸಹಾಯದಿಂದ ಜನ ತಮ್ಮ ಹಕ್ಕುಗಳ ರಕ್ಷಣೆ ಮಾಡಿಕೊಳ್ಳುತ್ತಿದ್ದರು. ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಿದ್ದರು

ಯಾವುದಾದರೂ ಅನ್ಯಾಯದ ಕಾಯದೆಯನ್ನು ಪ್ರತಿಭಟಿಸುತ್ತಿದ್ದರು. ಇಂಥ ಉಪವಾಸ ಪ್ರಕರಣಗಳ ವಿಚಾರಣೆಗಾಗಿ ಕಾಶ್ಮೀರದಲ್ಲಿ ಪ್ರತ್ಯೇಕ ಅಧಿಕಾರಿಗಳಿರುತ್ತಿದ್ದರು. ದುಃಖಿ ಮತ್ತು ದಲಿತರು ಉಪವಾಸ ಶಸ್ತ್ರವನ್ನು ತಮ್ಮ ಹಿತಕ್ಕಾಗಿ ಎತ್ತುತ್ತಿದ್ದರು.

'ರಾಜ ತರಂಗಿಣಿಯ' ಆರನೆಯ ಸರ್ಗದಲ್ಲಿಯೂ ಅನಶನದ ಇನ್ನೊಂದು ಪ್ರಕರಣದ ಉಲ್ಲೇಖವಿದೆ.

ಆದರೆ ಕಲ್ಹಣನು ಸಂಘಟಿತರಾಗಿ ಉಪವಾಸ ಕೈಕೊಳ್ಳುವ ಜನರನ್ನು ಗೇಲಿ ಮಾಡಿದ್ದಾನೆ. ಸಾಮಾನ್ಯವಾಗಿ ಪುರೋಹಿತರು ಮತ್ತು ಪೂಜಾರಿಗಳು ಈ ಬಗೆಯ ಸಂಘಟಿತ ಉಪವಾಸವನ್ನು ಕೈಕೊಳ್ಳುತ್ತಿದ್ದರು. ಉಪವಾಸವನ್ನು ಒಂದು ಉದ್ಯೋಗವನ್ನಾಗಿ ಮಾಡಿಕೊಂಡಿರುವ ಜನ ಇವರು ಎಂದು ಆತ ಅಂದಿದ್ದಾನೆ.

ಪಾಶ್ಚಾತ್ಯ ದೇಶಗಳಲ್ಲಿ ಉಪವಾಸ ಸತ್ಯಾಗ್ರಹವು ಅನುಚಿತವಾದ ಒತ್ತಾಯವೆಂದು ತಿಳಿಯುತ್ತಾರೆ. ಆದರೆ ಭಾರತೀಯರು ಇದರ ಉದ್ದೇಶ ಹೃದಯಪರಿವರ್ತನೆಯೆಂದು ಭಾವಿಸುತ್ತಾರೆ. ಗಾಂಧೀಜಯವರು ಇದೇ ಅಭಿಪ್ರಾಯವನ್ನುಳ್ಳವರಾಗಿದ್ದರು. 'ರಾಜ ತರಂಗಿಣಿ'ಯು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಯಾವುದಾದರೊಂದು ಪ್ರಕರಣದಲ್ಲಿ ನ್ಯಾಯದಾನ ಮಾಡುವುದು ಸಾಧ್ಯವಾಗದಾಗ ಪ್ರಾಯಶ್ಚಿತ್ತಕ್ಕಾಗಿ ಮತ್ತು ಜ್ಞಾನೋದಯಕ್ಕಾಗಿ ಉಪವಾಸವ್ರತ ಕೈಕೊಳ್ಳುವ ಒಬ್ಬ ರಾಜನ ವಿಚಾರವನ್ನು ಕಲ್ಹಣ ಹೇಳಿದ್ದಾನೆ.

ಕಲ್ಹಣನ ಕಾಲದಲ್ಲಿ ಜನಾಭಿಪ್ರಾಯ ತುಂಬ ಶಕ್ತಿಯುತವಾಗಿತ್ತು. ರಾಜರು ಪ್ರಜೆಗಳ ಬಗೆ ತಮ್ಮ ಕರ್ತವ್ಯದ ವಿಚಾರದಲ್ಲಿ ಜಾಗೃತರಿದ್ದರು ಎಂಬುದರಲ್ಲಿ ಸಂದೇಹವಿಲ್ಲ.

ಬೌದ್ಧ ಧರ್ಮದ ಆತ್ಮತ್ಯಾಗ ಮತ್ತು ಅಹಿಂಸೆಯ ಆದೇಶಗಳ ಪ್ರಭಾವದಿಂದ ಕಾಶ್ಮೀರದಲ್ಲಿ ಉಪವಾಸ ಸತ್ಯಾಗ್ರಹದ ವಿಕಾಸವಾಯಿತು ಎಂದರೆ ತಪ್ಪಾಗಲಿಕ್ಕಿಲ್ಲ. ಬುದ್ಧ ಜಾತಕಗಳಲ್ಲಿ ಇಂಥ ಕಥೆಗಳಿವೆ; ಇನ್ನೊಬ್ಬರ ಪೀಡಾ ನಿವಾರಣೆಗಾಗಿ ಆತ್ಮ ಬಲಿದಾನ ಮಾಡಿದವರ ಉದಾಹರಣೆಗಳು ಬುದ್ಧ ಜಾತಕಗಳಲ್ಲಿವೆ.

ಗಾಂಧೀಜಯವರ ಜನ್ಮಭೂಮಿಯಾದ ಕಾಠೆವಾಡದಲ್ಲಿ ಏಳನೆಯ ಶತಮಾನದಲ್ಲಿ ಶಾಂತಿದೇವನೆಂಬ ಬೌದ್ಧ ಭಿಕ್ಷು ಹುಟ್ಟಿದ. ಈತ ಕಾಠೆವಾಡದ ರಾಜನ ಪುತ್ರ. ರಾಜಕುಮಾರನ ಪಟ್ಟಾಭಿಷೇಕದ ಸಮಯದಲ್ಲಿ ಬೋಧಿಸತ್ವ ಮಂಜುಶ್ರೀಗೆ ಬಂದನೆಂದು ಹೇಳುತ್ತಾರೆ. ಆತನ ಪ್ರಭಾವಕ್ಕೊಳಗಾದ ರಾಜಕುಮಾರನು ಪಟ್ಟವೇರಲು ನಿರಾಕರಿಸಿದ. ತನ್ನೆಲ್ಲ ಅಧಿಕಾರ ಸಂಪತ್ತುಗಳನ್ನು ತ್ಯಜಿಸಿ ಅಡವಿಗೆ ಹೊರಟು ಹೋದ. ಮುಂದೆ ಆತನಿಗೆ ಶಾಂತಿದೇವನೆಂಬ ಹೆಸರು ಬಂತು. ಈತನ ಸೂಕ್ತಿಗಳಿನ್ನೂ ಪ್ರಚಲಿತವಿವೆ. ಈತ ತನ್ನ ಭಾವನೆಗಳನ್ನು ಹೀಗೆ ಪ್ರಕಟಿಸಿದ್ದಾನೆ :

" ನಾನು ನನ್ನ ಶರೀರವನ್ನು ಸರ್ವರಿಗಾಗಿ ಮೀಸಲಾಗಿಟ್ಟಿದ್ದೇನೆ. ಅವರು ನನ್ನ ಚೇಷ್ಟೆ ಮಾಡಲಿ, ನನ್ನ ಮೇಲೆ ಧೂಳೆರಚಲಿ, ನನ್ನ ಶರೀರವನ್ನು ಆಟದ ವಸ್ತುವನ್ನಾಗಿ ಮಾಡಿಕೊಳ್ಳಲಿ, ಏನೇ ಮಾಡಲಿ, ನಾನು ನನ್ನ ಶರೀರವನ್ನು ಅವರಿಗೆ ಅರ್ಪಿಸಿದ್ದೇನೆ. "

---

ಶ್ರೀ ರಾಮಕೃಷ್ಣ ಪರಮಹಂಸರು ಒಮ್ಮೆ ಅವಿಚ್ಛಿನ್ನವಾಗಿ ಆರು ಮಾಸಗಳ ಕಾಲ ಸಮಾಧಿಯಲ್ಲಿದ್ದರು. ಆಗ ಅವರಿಗೆ ಕಾಲ ಕಾಲಕ್ಕೆ ಆಹಾರ, ಪಾನೀಯ, ಸ್ನಾನ ಏನಲಿಲ್ಲ. ಅವರ ಸ್ಥಿತಿಯನ್ನು ನೋಡಿ ದಕ್ಷಿಣೇಶ್ವರಕ್ಕೆ ಬಂದ ಸಾಧುವೊಬ್ಬನು ಅವರ ಶುಶ್ರೂಷೆಗೆ ನಿಂತನು. ಸಮಾಧಿಯಿಂದ, ರಾಮಕೃಷ್ಣರನ್ನು ಬಹಿರ್ಮುಖರನ್ನಾಗಿ ಮಾಡಲು ಕೆಲವು ಸಾರಿ ಸಾಧ್ಯವಾಗದೆ ಇದಾಗ ಬಡಿಗೆಯಿಂದ ಅವರ ಬೆನ್ನ ಮೇಲೆ ಬಡಿದು ಬಾಯಿಗೆ ಆಹಾರ ತುರುಕುತ್ತಿದ್ದನಂತೆ. —ರವೀಂದ್ರನಾಥ ಎಸ್. ಬಿ.

# ಸಂಗೀತ, ಮನೋರಂಜನೆ ಹಾಗೂ ಆನಂದದ ಹೊಸ ಲೋಕವನ್ನೆ ನಿರ್ಮಿಸುವ ಸೌಂದರ್ಯ-ಪೂರ್ಣ

# ನ್ಯಾಷನಲ್ ಎಕ್ಕೋ



## ರೇಡಿಯೋಗಳು

ಒಂದು ನ್ಯಾಷನಲ್-ಎಕ್ಕೋ ರೇಡಿಯೋವನ್ನು ಇಂದೇ ಕೊಳ್ಳಿರಿ. ಅದು ಸಂಗೀತ, ಮನೋರಂಜನೆ ಹಾಗೂ ಆನಂದದಿಂದ ತುಂಬಿರುವ ಹೊಸದೊಂದು ಲೋಕಕ್ಕೆ ನಿಮ್ಮನ್ನು ಕೊಂಡೊಯ್ಯುವುದು! ರೇಡಿಯೋಗಳಲ್ಲಿ ಅನೇಕ ಸುಧಾರಣೆಗಳನ್ನು ಉಂಟುಮಾಡಿದ ಇಂಜಿನಿಯರರಿಂದ ನಿರ್ಮಿಸಲ್ಪಡುವ ನ್ಯಾಷನಲ್-ಎಕ್ಕೋ ಸೆಟ್‌ಗಳು ಅತ್ಯಂತ ಶಕ್ತಿಶಾಲಿ ಹಾಗೂ ವಿಶ್ವಾಸಾರ್ಹವಾಗಿವೆ. ಬೇಕಾದ ಸ್ಟೇಶನ್ನನ್ನು ಇಡಲು ಸುಲಭ. ಅವನ್ನು ಉಚಿತವಾಗಿ ಹಾಕಿ ತೋರಿಸಲು ನಿಮ್ಮ ನ್ಯಾಷನಲ್-ಎಕ್ಕೋ ವ್ಯಾಪಾರಿಗೆ ಇಂದೇ ಹೇಳಿರಿ!

**ಮಾಡೆಲ್ ಯು-730:**
ಎಸಿ/ಡಿಸಿ ಸೆಟ್. ಬೇಕಾದ ಸ್ಟೇಶನ್ನನ್ನು ಸುಲಭವಾಗಿ ಇಡಲು ಹೊಸ 'ಮ್ಯಾಗ್ನಿ-ಬ್ಯಾಂಡ್' ಟ್ಯೂನಿಂಗ್ ವ್ಯವಸ್ಥೆ. 41 ಮೀಟರ್ ಬ್ಯಾಂಡ್ ವಿಶೇಷವಾಗಿ ಬ್ಯಾಂಡ್‌ಸ್ಪ್ರೆಡ್ ಮಾಡಲ್ಪಟ್ಟಿದೆ. 9 ವಾಲ್ವ್‌ಗಳ ಕೆಲಸ ಮಾಡುವ 6 ವಾಲ್ವ್‌ಗಳು, 8 ಬ್ಯಾಂಡ್‌ಗಳು. ಮರದ ಕ್ಯಾಬಿನೆಟ್. 'ಮಾನ್ಸೂನೈಸ್ಡ್' ಮಾಡೆಲ್ ಎ-730. ಎಸಿ ಸೆಟ್.

ರೂ. 570/00








**ಮಾಡೆಲ್ ಯು-755 :**
ಎಸಿ/ಡಿಸಿ ಸೆಟ್. 9 ವಾಲ್ವ್‌ಗಳ ಕೆಲಸ ಮಾಡುವ 6 ವಾಲ್ವ್‌ಗಳು, 3 ಬ್ಯಾಂಡ್‌ಗಳು, ಟೋನ್ ಕಂಟ್ರೋಲ್. ಮರದ ಕ್ಯಾಬಿನೆಟ್. 'ಮಾನ್ಸೂನೈಸ್ಡ್'. ಮಾಡೆಲ್ ಬಿ-755: ಬ್ಯಾಟರಿ ಸೆಟ್. 5 ವಾಲ್ವ್‌ಗಳು, 3 ಬ್ಯಾಂಡ್‌ಗಳು. ಬ್ಯಾಟರಿ ಬಹಳ ಕಡಿಮೆ ಖರ್ಚಾಗುತ್ತದೆ.

ರೂ. 355/00

ಬೆಲೆಗಳಲ್ಲಿ ಎಕ್ಸೈಸ್ ಡ್ಯೂಟಿ ಸೇರಿದೆ; ಮಾರಾಟದ ತೆರಿಗೆ ಪ್ರತ್ಯೇಕ.

ಮಾರಾಟ ಮತ್ತು ಸರ್ವಿಸಿಂಗ್ ಮಾಡಲು ದೇಶದಲ್ಲೆಲ್ಲ 600ಕ್ಕಿಂತಲೂ ಹೆಚ್ಚು ಅಧಿಕೃತ ವ್ಯಾಪಾರಿಗಳಿದ್ದಾರೆ.




**ಜನರಲ್ ರೇಡಿಯೋ ಅಂಡ್ ಅಪ್ಲಯನ್ಸಸ್ ಲಿಮಿಟೆಡ್**
ಬೊಂಬಾಯಿ . ಕಲ್ಕತ್ತ . ಮದರಾಸು . ದೆಹಲಿ . ಪಾಟ್ನ
ಬೆಂಗಳೂರು . ಸಿಕಂದರಾಬಾದು

JWT/GRA 3547

ಒಟ್ಟು ಕ್ಷೇತ್ರಫಲ ಕೇವಲ ೧/೪ ಇಂಚು ಹೆಚ್ಚಾದದ್ದಕ್ಕೆ ಇಷ್ಟು ಪರಿಭೇದವೆ?

# ನಾನು, ನನ್ನ ಮೂಗು ಮತ್ತು ನೀವು

ಟಿ ಎನ್. ಗಲಗಲಿ

ಡೊಣ್ಣೆ ಮೂಗಿನ ಅಣ್ಣ ಎಂದು ನನ್ನ ತಮ್ಮ ತಂಗಿಯರು ಕೂಗಿಕೊಂಡೇ ಚೇಷ್ಟೆ ಮಾಡಿದರೆ, ಹೆಂಡತಿಯಾದವಳು "ಗುಂಡು ಮೂಗಿನ ಗಂಡ" ಎಂದು ಈಗೀಗ ಮನಸ್ಸಿನಲ್ಲಾದರೂ ಅಂದು ಕೊಳ್ಳುತ್ತಿರಬೇಕು.

ನನ್ನ ಮೂಗಿಗೆ ಡೊಣ್ಣೆ ಮೂಗು ಎಂಬ ಬಿರುದು ಏಕೆ ಬಂದಿದೆ? ಉದ್ದ ಅಗಲಗಳು ಒಂದೇ ಇರುವುದೇ ಇದಕ್ಕೆ ಕಾರಣ. ಸಾದಾ ಮೂಗಿನವರೆಂದು ಹೇಳಿಕೊಳ್ಳುವವರ ಮೂಗಿನ ಅಳತೆಗಳನ್ನು (ಅವರು ಮಲಗಿದ್ದಾಗ) ತೆಗೆದು ಕೊಂಡಿದ್ದೇನೆ. ಸಾದಾ ಮೂಗಿನ ಅಳತೆ ಸಾಮಾನ್ಯವಾಗಿ ೨ ಇಂಚು ಉದ್ದ, ೧ ಇಂಚು ಅಗಲ. ಆದರೆ ನನ್ನ ಈ ಸ್ಪೆಶಲ್ ಮೂಗಿನಲ್ಲಿ ಉದ್ದದ ಅರ್ಧ ಇಂಚು ಕಡಿಮೆಯಾಗಿ ಅಗಲ ದಲ್ಲಿ ಸೇರಿದೆ. ಹೀಗಾಗಿ ೨ ಚದರ ಇಂಚು ಕ್ಷೇತ್ರ ಮುಖದ ಮೇಲೆ ಪಸರಿಸುವುದರ ಬದಲು ೨। ಚದರ ಇಂಚು ಕ್ಷೇತ್ರವಾಗಿದೆ. ಕೇವಲ ಕಾಲು ಚೌರಸ ಇಂಚು ಸ್ಥಳ ಹೆಚ್ಚು ಆಕ್ರಮಿಸಿದ ತಪ್ಪಿಗಾಗಿ ನನ್ನದು ದಪ್ಪ ಮೂಗು ಎನಿಸಿಕೊಳ್ಳ ಬೇಕಾಗಿದೆ. ೬೦ ಚೌರಸ ಇಂಚು ಕ್ಷೇತ್ರದ ನನ್ನ ದೊಡ್ಡ ಮುಖದ ಮೇಲೆ ಕೇವಲ ೧॥ ಇಂಚು ಉದ್ದ ೧॥ ಇಂಚು ಅಗಲವಾದ ಮೂಗಿನ ಮೇಲಿಯೇ ಎಲ್ಲರ ಗಮನ ಬೀಳಬೇಕೇ? ನಾಲ್ಕು ಜನರಲ್ಲಿ ನಾನು ಎದ್ದು ಕಾಣದೆ ನನ್ನ ಮೂಗೇ ಎದ್ದು ಕಾಣುತ್ತದೆ. ಎಲ್ಲರೂ ನನ್ನನ್ನು ನೋಡಿಯೋ ಅಥವಾ ನನ್ನ ಮೂಗನ್ನು ನೋಡಿಯೋ ತಮ್ಮ ಮೂಗನ್ನು ಮುರಿದುಕೊಳ್ಳುತ್ತಾರೆ.

ಕೂದಲು ಬೆಳೆಯದೇ ಬಕ್ಕತಲೆ ಎನಿಸಿಕೊಂಡಿದ್ದರೆ ಟೊಪ್ಪಿಗೆ ಧರಿಸಿ ಮುಚ್ಚಿಕೊಳ್ಳಬಹುದು. ಕತ್ತೆಗಿರುವಂತೆ ಉದ್ದುದ್ದ ಕಿವಿಗಳಿದ್ದರೆ ರುಮಾಲು ಸುತ್ತಿಕೊಂಡು ಮುಚ್ಚಿಕೊಳ್ಳಬಹುದು. ಮೆಳ್ಳಗಣ್ಣಿದ್ದರೆ ಕಪ್ಪು ಕನ್ನಡಕ ಹಾಕಿಕೊಂಡು ಡೌಲು ಕೂಡ ಮಾಡಬಹುದು. ಹರಿದು ಹೋದ ತುಟಿಯ ಭಾಗವನ್ನು ಜೊಂಡ ಮೀಸೆ ಬಿಟ್ಟುಕೊಂಡು ಕಾಣದಂತೆ ಮಾಡಿಕೊಂಡವರೂ ಇದ್ದಾರೆ. ಆದರೆ ನನ್ನ ಮೂಗಿನ ಡೊಣ್ಣೆತನವನ್ನು ಮುಚ್ಚಿಕೊಳ್ಳುವುದು ಹೇಗೆ ಎಂಬುದೇ ಬಿಡಿಸಲಾರದ ಸಮಸ್ಯೆಯಾಗಿದೆ. ಮೂಗಿನ ಕೆಳಗೆ ಬರುವ ಮೀಸೆಗಳಾಗಲೀ, ಒಳಗೆ ಬೆಳೆಯುವ ಅಲ್ಪ ಸ್ವಲ್ಪ ಕೂದಲುಗಳಾಗಲೀ ಮೂಗಿನ ಮೇಲೆಯೇ ಬೆಳೆಯುವಂತಿದ್ದರೆ ಇದಕ್ಕೆ ಸಹಾಯಕಾರಿಯಾಗುತ್ತಿತ್ತೇನೋ?

ನನ್ನಂಥ ಡೊಣ್ಣೆ ಮೂಗಿನವರು, ಹಲ್ಲು ಮುಂದೆ ಹಾಯ್ದು (ನಾನಲ್ಲ ಮತ್ತೆ) ಇತರರು,

ಅದರಂತೆ ಕಪ್ಪು ಬಣ್ಣದವರು— ಈ ರೀತಿ ಚಿತ್ರವಿಚಿತ್ರವಾಗಿ ಮಾನವರನ್ನು ಸೃಷ್ಟಿಸುವುದ ರಲ್ಲಿ ಆ ಬ್ರಹ್ಮದೇವನಿಗೆ ಏನು ಆನಂದವೊ! ಆಕಳು ಎಮ್ಮೆಗಳಿಗೂ ಹಲ್ಲು ಮೂಗುಗಳಿರುತ್ತವೆ. ಆದರೆ ಹಲ್ಲು ಮುಂದೆ ಹಾಯ್ದ ಆಕಳುಗಳಿಲ್ಲ. ಡೊಣ್ಣೆ ಮೂಗಿನ ಎಮ್ಮೆಗಳಿಲ್ಲ. ಕೆಂಪು ಬಣ್ಣದ ಆಕಳಿನಷ್ಟೇ ಕಪ್ಪು ಬಣ್ಣದ ಆಕಳೂ ಸಹ ಸುಂದರವಾಗಿರುತ್ತದೆ. ಈ ಪಕ್ಷಪಾತ-ವೇಕೆ? ಯಾವ ಭೇದಭಾವವಿಲ್ಲದೇ ಎಲ್ಲರ ಮೂಗಿನಂತೆಯೇ ನನ್ನ ಮೂಗನ್ನೂ ಇಟ್ಟಿದ್ದರೆ ನಾನು ಅಷ್ಟೊಂದು ಚಿಂತೆ ಮಾಡಬೇಕಾಗಿರಲಿಲ್ಲ. ಅಥವಾ ನನ್ನ ಡೊಣ್ಣೆ ಮೂಗಿನಂತೆಯೇ ಎಲ್ಲರ ಮೂಗನ್ನು ನಿರ್ಮಿಸಿದ್ದರೂ ನನ್ನ ಅಭ್ಯಂತರವಿರಲಿಲ್ಲ.

ಮೂಗನ್ನು ಸಂಪಿಗೆ ಹೂವಿಗೆ ಹೋಲಿಸಲು ಮೊಟ್ಟಮೊದಲು ಪ್ರಾರಂಭಿಸಿದ ಕವಿ ಯಾರೇ ಇರಲಿ, ಅವನು ನಿತಾಂತ ಕಲ್ಪನಾವಿಹೀನನೆಂದು ನನ್ನೆಣಿಕೆ. ನನ್ನೆಣಿಕೆಯಲ್ಲಿ ಮೂಗನ್ನು ಮೆಣಸಿನಕಾಯಿಗೆ ಹೋಲಿಸುವುದೇ ಯೋಗ್ಯ. ಉದ್ದ ಮೂಗನ್ನು ಉದ್ದ ಮೆಣಸಿನಕಾಯಿಗೂ ಗಿಡ್ಡ ಮೂಗನ್ನು ಗಿಡ್ಡ ಮೆಣಸಿನಕಾಯಿಗೂ ನನ್ನಂಥ ಡೊಣ್ಣೆ ಮೂಗನ್ನು ಡೊಣ್ಣೆ ಮೆಣಸಿನಕಾಯಿಗೂ ಹೋಲಿಸಲು ಬರುತ್ತಿತ್ತು. ಅದು ಮಲ್ಟಿಪರ್ಪಸ್ ಉಪಮೆಯೆನಿಸಬಹುದಿತ್ತು.

ಆದರೆ ಈ ಮೂಗಿನಿಂದ ಏನೂ ಅನುಕೂಲವಿಲ್ಲೆಂದಲ್ಲ. ಬಾಯಿಯಿಂದ ಸಿಗರೇಟ್ ಸೇದಿ ಮೂಗಿನಿಂದ ಹೊಗೆ ಬಿಡುವ ಕಲೆ ಎಂಥ ಅಮೇಚೂರರಿಗೂ ಸಾಧಿಸಬಹುದು. ಬಾಯಿಯು ಮಾಡುವ ಈ ಕೆಲಸವನ್ನು ಮೂಗಿಗೆ ಎಂದಾದರೂ ಒಪ್ಪಿಸಿ ನೋಡಿದ್ದೀರಾ? ಮೂಗಿನಿಂದ ಸೇದಿ ಬಾಯಿಯಿಂದ ಹೊಗೆ ಬಿಡುವ ವಿದ್ಯೆ ನನ್ನಂಥ ಮೂಗಿನವರಿಗಲ್ಲದೇ ಬೇರೆಯವರಿಗೆ ಸಾಧ್ಯವಿಲ್ಲವೆಂದು ಕಾಣುತ್ತದೆ.

ಶಾಪಗ್ರಸ್ತನಾದ ನಳರಾಜನ ಪಾತ್ರವಹಿಸಲು ಒಮ್ಮೆ ನನ್ನನ್ನೇ ಆರಿಸಿದ್ದರು. "ಅಡ್ಡ ಮೋರೆಯ ಗಂಟು ಮೂಗಿನ ಜಡ್ಡು ದೇಹದ . . . . ." ಆ ನಳನ, ಪಾತ್ರವನ್ನು ವಿಶೇಷ ಮೇಕ್‌ಅಪ್ ಇಲ್ಲದೇ ಬಹಳ ಯಶಸ್ವಿಯಾಗಿ ಅಭಿನಯಿಸಿದ್ದೆನಂತೆ.

ಗುರುಗಳಿಂದ ಮೂಗು ಹಿಡಿಸಿಕೊಂಡು ಕಪಾಳಕ್ಕೆ ಹೊಡೆಯಿಸಿಕೊಳ್ಳುವುದು ಕನ್ನಡ ಶಾಲೆಯಲ್ಲಿ ನಮಗೆ ದೊರೆಯುತ್ತಿದ್ದ ಸಾದಾ ಶಿಕ್ಷೆ. ಉಳಿದವರ ಸಣ್ಣ ಸಣ್ಣ ಮೂಗುಗಳಿಗಿಂತಲೂ ಕೈ ಹಿಡಿತಕ್ಕೆ ಸರಿಯಾಗಿ ಸಿಗುತ್ತಿದ್ದ ನನ್ನ ಡೊಣ್ಣೆ ಮೂಗಿನ ಮೇಲೆ ಅವರ ಪ್ರೀತಿ ಬಹಳ. ಯಾವ ಸಣ್ಣ ಕಾರಣಕ್ಕೂ ನನ್ನ ಡೊಣ್ಣೆ ಮೂಗನ್ನು ಹಿಡಿಯದೇ ಇರುತ್ತಿರಲಿಲ್ಲ. ಅದರಿಂದ ತಪ್ಪಿಸಿಕೊಳ್ಳಲು ಒಂದು ಉಪಾಯ ಮಾಡಿದೆ. ಮೂರು ದಿನ ದಿನಕ್ಕೆ ಮೂರು ಸಾರೆಯಂತೆ ತಪ್ಪದೇ ತಣ್ಣೀರಿನ ಸ್ನಾನ ಮಾಡಿದೆ. ನೆಗಡಿ ಬಂದೇ ಬಿಟ್ಟಿತು. ಅದನ್ನು ದೂರದಿಂದಲೇ ಕಂಡ ಗುರುಗಳು ಅಂದಿನಿಂದ ನನ್ನ ಹತ್ತಿರ ಬರುವುದನ್ನೇ ಬಿಟ್ಟರು.

ನೌಕರಿಗೆ ಬಂದು ನಾಲ್ಕು ವರ್ಷಗಳಾಗಿದ್ದರೂ ಬ್ರಹ್ಮಚಾರಿಯಾಗಿಯೇ ಉಳಿದಿದ್ದೆ. "ನಿನ್ನ ಮೂಗನ್ನು ಮೆಚ್ಚಿಕೊಂಡು ಯಾವ ಪುಣ್ಯಾತ್ಮಳು ಕೈ ಹಿಡಿಯಲು ಮುಂದೆ ಬರುವಳೋ?" ಎಂದು ಎಲ್ಲರೂ ಅಧೈರ್ಯ ತುಂಬುತ್ತಿದ್ದರು. ಲಗ್ನವಾಗುತ್ತದೆಯೆಂಬ ಧೈರ್ಯವೇನೋ ನನಗೆ ಇತ್ತು. ನನ್ನಂಥ ಡೊಣ್ಣೆ ಮೂಗುಳ್ಳ ಒಬ್ಬ ಕನ್ಯಾಮಣಿ ಇರಲಿಕ್ಕಿಲ್ಲವೆ? ಅವಳಿಗೇನು ನನ್ನ ಕೈ ಹಿಡಿಯಲು ಧಾಡಿ? ಆದರೂ ನನಗೆ ಡೊಣ್ಣೆ ಮೂಗಿನ ಹೆಣ್ಣನ್ನು ಮದುವೆಯಾಗಲು ಹೆದರಿಕೆಯಾಗುತ್ತಿತ್ತು. ನಾಳೆ ಹುಟ್ಟುವ ಮಕ್ಕಳ ಮೂಗುಗಳು, ನಮ್ಮಿಬ್ಬರ ಮೂಗಿನ ಸಂಯುಕ್ತ ಪರಿಣಾಮದಿಂದ ಡಬಲ್ ಡೊಣ್ಣೆ ಮೂಗಾದರೆ ಅವರ ಗೋಳು ಹೇಳುವುದು ಬೇಡ. ಸದ್ಯದ ಅಡ್ಡ ಹೆಸರಿನ ಬದಲು "ಡೊಣ್ಣೆ ಮೂಗಿನವರ" ಎಂದು ಹೆಸರು ಬದಲಾಯಿಸಬೇಕಾಗುತ್ತಿತ್ತು.

ಈಗ ಅಂಥ ಹೆದರಿಕೆಯಿಲ್ಲ. ನೀಳಾದ ಮೂಗಿನವಳೊಟ್ಟಿಗೇ ನನ್ನ ಲಗ್ನವಾಗಿದೆ. ಮೂಗಿನ ಒಂದೇ ಒಂದು ವಿಷಯದಲ್ಲಿ ಮಾತ್ರ ಮಕ್ಕಳು ಮಾತೆಯನ್ನೇ ಹೋಲಲಿ ಎಂದು ದೇವರಿಗೆ ಬೇಡಿಕೊಳ್ಳುತ್ತಿದ್ದೇನೆ. ಅಂಥವಳು ಇಂಥವನನ್ನು ಹೇಗೆ ಲಗ್ನವಾದಳೆಂದು ಎಲ್ಲರಿಗೂ ಕುತೂಹಲವಿರಬೇಕು. ನನಗೂ ಇದ್ದ ಅಂಥ ಕುತೂಹಲವನ್ನು ನಾನೇ ತರ್ಕಿಸಿ ನಿವಾರಣೆ ಮಾಡಿಕೊಂಡಿದ್ದೇನೆ. ಅವಳನ್ನೇ ಹೇಗೆ ಕೇಳುವುದು?

ಕನ್ಯೆ ತೋರಿಸಲು ಅವಳ ಅಪ್ಪ ನಮ್ಮಲ್ಲಿಗೆ ಬಂದಾಗಿನ ವಿಷಯ. ನನ್ನೊಬ್ಬ ಸ್ನೇಹಿತನ ಮೂಗು ಬಾಯಿಗಳೊಡನೆ ಮಗುವೊಂದು ಗೋಲಿಗುಂಡುಗಳನ್ನು ಹಿಡಿದು ಆಡುತ್ತಿತ್ತು. ಗುಂಡುಗಳು ನನ್ನ ಸ್ನೇಹಿತನ ಮೂಗಿನ ಹೊರಳೆಗಳಿಗೆ ಸರಿಯಾಗಿ ಹೊಂದಿಕೆಯಾಗುವವೆಂದು ಅದು ಕಂಡುಹಿಡಿಯಿತು. ಸ್ನೇಹಿತನಿಗೆ ಒಮ್ಮೆಲೆ ಉಸಿರು ಕಟ್ಟಿದಂತಾಗಿ ಕಣ್ಣು ಬೆಳ್ಳಗೆ ಮಾಡಹತ್ತಿದ. ಕೈಕಾಲು ಸೆಟೆಸಿ ಕಣ್ಣುಗುಡ್ಡೆಗಳನ್ನು ಬೆಳ್ಳಗೆ ಮಾಡಿ ಕಸಿವಿಸಿ ಪಡಲು ಪ್ರಾರಂಭಿಸಿದ. ಮೂಗನ್ನು ಮೇಲೆ ಎಬ್ಬಿಸಿ ಕೆಳಗಿನಿಂದ ಬಗ್ಗಿ ನೋಡಿದರೆ ಹಸಿರು ಗೋಲಿ ಕಾಣುತ್ತಿತ್ತು. ಆದರೆ ಅದನ್ನು ಹೊರಗೆ ತೆಗೆಯುವ ಬಗೆ ಹೇಗೆ? ದಾರದ ಎಳೆಯೂ ಒಳಗೆ ಹೋಗಲು ಆಸ್ಪದವಿಲ್ಲ. ಇನ್ನು ಆಪರೇಶನ್ನೇ ಗತಿ. ಎಲ್ಲಿ ಪ್ರಾಣ ಬಿಡುವನೋ ಎನ್ನುವಂತಾಗಿತ್ತು. ಅವಳಂತೂ ನನ್ನ ಸ್ನೇಹಿತನ ಪರಿಸ್ಥಿತಿ ನೋಡಿ ಹೌಹಾರಿಬಿಟ್ಟಿದ್ದಳು. "ಅಯ್ಯೋ ಗೋಲಿ ಇದಕ್ಕೂ ಸ್ವಲ್ಪ ಚಿಕ್ಕದಿದ್ದಿದ್ದರೆ ಎಂಥದಾದರೂ ಕಡ್ಡಿ ಹಾಕಿ ತೆಗೆಯಬಹುದಿತ್ತಲ್ಲ" ಎಂದು ಯಾರೋ ಅಂದರು...

ಬಹುಶಃ ಆಗ ನನ್ನವಳಿಗೆ ಇನ್ನೊಂದು ವೈಕಲ್ಪಿಕ ಉಪಾಯ ಹೊಳೆದಿರಬೇಕು. "ಮೂಗೇ ಸ್ವಲ್ಪ ಅಗಲವಾಗಿ ದೊಡ್ಡದಿದ್ದಿದ್ದರೆ..." ಅಂತೆಯೇ ನನ್ನ ಮೂಗು ನೋಡಿ ಸಮಾಧಾನದ ಉಸಿರು ಬಿಟ್ಟಿರಬೇಕು. ಇಲ್ಲವಾದರೆ ಅದು ಹೇಗೆ ನನ್ನನ್ನು ಒಪ್ಪಿದಳು? ಅಂತೂ ಅವಳೊಡನೆ ಲಗ್ನವಾಗಲು ನನ್ನ ಡೊಣ್ಣೆ ಮೂಗು ಅಡ್ಡ ಬರದೇ ಅನುಕೂಲವಾಗಿಯೇ ವರ್ತಿಸಿತೆಂದು ನನ್ನ ತರ್ಕ.

ನನ್ನ ಡೊಣ್ಣೆ ಮೂಗನ್ನು ನೋಡಿ ಸಮಾಧಾನ ಹೊಂದಿದ ಬೇರೆಯವರೂ ಇದ್ದಾರೆ. ಲಗ್ನ ಹೊಂದಿಸುವಂಥ ಕಲ್ಯಾಣ ಕಾರ್ಯಕ್ಕೆ ಅದು ಸಹಾಯಕವಾಗಿದೆ. ನಮ್ಮ ಪಕ್ಕದ ಮನೆಯ ಪದ್ಮಾವತಿಗೆ ಗಂಡು ಗೊತ್ತುಮಾಡುವವರಿದ್ದರು. ಆದರೆ ಹುಡುಗಿ ವರನ ಮೂಗನ್ನು ನೋಡಿ ಒಲ್ಲೆ ಎಂದಿದ್ದಳು. ಮತ್ತೊಬ್ಬರು ಅವಳಿಗೆ ತಿಳಿಸಿ ಹೇಳುತ್ತಿದ್ದರಂತೆ "ಸರಿಯಾಗಿಯೇ ಇದೆ, ಪದ್ಮಾ. ಬಾಜೂ ಮನೆಯ ರಾಯರ ಮೂಗಿನಷ್ಟು...... ಇಲ್ಲವಲ್ಲ" ಎಂದು. ಜೋಲು ತುಟಿಯ ಗಂಡನ ಕೈ ಹಿಡಿದ ಅವಳ ಗೆಳತಿಯೊಬ್ಬಳು "ಮತ್ತೆ ಆ ರಾಯರ ಹೆಂಡತಿಯನ್ನು ನೋಡಿದ್ದೀಯಲ್ಲ, ನಿನಗಿಂತಲೂ ಚೆನ್ನಾಗಿದ್ದಾಳೆ. ನೋಡು







ವುದಕ್ಕೆ" ಎಂದೂ ಹೇಳಿದಳಂತೆ ಅಂತೂ ಆ ಹುಡುಗಿ ಒಪ್ಪಿಕೊಂಡಳು. ನೋಡಿದಿರಾ ? ನನ್ನ ಮೂಗಿನ ಮಹಿಮೆಯಿಂದಲೇ ಅವನ ಲಗ್ನ ಅವಳೊಡನೆ ಆಯಿತು. ಡೊಣ್ಣೆ ಮೂಗುಗಳಲ್ಲಿ ನನ್ನದು ಸ್ಟ್ಯಾಂಡರ್ಡ್ ಮೂಗು, ಎಂದು ನನಗೂ ಅಭಿಮಾನವೆನಿಸಿತು.

ಆದರೆ ಸಮಾಜದಲ್ಲಿ ಡೊಣ್ಣೆ ಮೂಗಿನವರಿಗೆ ಯಾವ ಸ್ಥಾನಮಾನಗಳಿಲ್ಲ. ಜನರಲ್ಲಿ ಅವರ ಬಗ್ಗೆ ಆದರದ ಭಾವನೆ ಇಲ್ಲವೇ ಇಲ್ಲ. ಎಲ್ಲರೂ ನಮ್ಮ ಮೂಗನ್ನು ನೋಡಿ ಅವಹೇಳನೆ ಮಾಡುತ್ತಾರೆ. ನಮ್ಮನ್ನು ಕೀಳು ದರ್ಜೆಯವರೆಂದು ತಿಳಿಯುತ್ತಾರೆ. ಹೀಗಾಗಿ ನಾವೇನಾದರೂ ಸಾಧಿಸಹೋದರೆ ಅದಕ್ಕೆ ತಕ್ಕ ಆಸ್ಪದ ದೊರೆಯುವುದಿಲ್ಲ. ಪತ್ರಿಕೆಗಳಲ್ಲಿ ಬರುವ ಮಂತ್ರಿಗಳ ಮುಂದಾಳುಗಳ ಮಹಾಪುರುಷರ ಸಿನೇಮಾ ನಟ ನಟಿಯರ ಚಿತ್ರಗಳನ್ನು ನೋಡುತ್ತಿದ್ದೇನೆ. ಯಾರದೂ ಹೆಚ್ಚಾಗಿ ಡೊಣ್ಣೆ ಮೂಗಲ್ಲ. ಡೊಣ್ಣೆ ಮೂಗಿನವರಾದ ನಾವು ಅಷ್ಟೊಂದು ಅಯೋಗ್ಯರೇ?

ಇದಕ್ಕೆ ಮುಖ್ಯ ಕಾರಣವೆಂದರೆ ಈ ಸಂಪಿಗೆ ಹೂವಿನಂಥ ಮೂಗಿನವರು. ಇವರಿಂದಾಗಿಯೇ ನಮಗೆ ಶೋಚನೀಯ ಪರಿಸ್ಥಿತಿ ಬಂದಿದೆ. ತಾವೇ ಮಹಾಪುರುಷರು ತಮ್ಮ ಮೂಗೇ ಶ್ರೇಷ್ಠ ಎಂದು ಇವರಿಗೆ ಗರ್ವ ಅಹಂಕಾರ ಬಹಳ. ನನ್ನಂಥ ಮೂಗಿನವರೆದುರು ಇವರಿಗೆ ದಿಮಾಕು ಜಾಸ್ತಿ. ಈ ಸಂಪಿಗೆ ಮೂಗಿನವರು ಸ್ವಾರ್ಥಿಗಳು. ಅದರಲ್ಲೂ ಪಂಡಿತ ನೆಹರೂರಂಥ ಮೂಗಿನವರು ಹೆಚ್ಚು ಸ್ವಾರ್ಥಿಗಳು. ೫೪ ಜನ ಮಂತ್ರಿಗಳನ್ನು ಆಯುವಾಗ ಅದರಲ್ಲಿ ಡೊಣ್ಣೆ ಮೂಗಿನ ಒಬ್ಬನನ್ನಾದರೂ ಸೇರಿಸಿ ಕೊಳ್ಳಬಾರದೇ? ಇನ್ನು ಹೆಚ್ಚು ದಿನ ನಾವು ಸುಮ್ಮನಿರಲು ಆಗುವುದಿಲ್ಲ. ಡೊಣ್ಣೆ ಮೂಗಿನವರ ಉದ್ಧಾರವಾಗಲು ಏನಾದರೂ ಮಾಡಲೇಬೇಕು.

ಒಬ್ಬರೇ ಏನನ್ನೂ ಸಾಧಿಸಲಾಗುವುದಿಲ್ಲ. ವಿಧವಾ ಸಮಾಜ, ಹಜಾಮರ ಸಂಘ, ಶಾಕಾಹಾರಿ ಸಂಸ್ಥೆ, ಕುರುಡರ ಅಸೋಶಿಯನ್‌ಗಳು ಇರುವಾಗ ನಮ್ಮದೂ ಒಂದು ಸ್ಥಾಪಿತವಾಗಬೇಕು. "ಅಖಿಲ ಭಾರತ ಡೊಣ್ಣೆ ಮೂಗಿನವರ ಸಂಘ" ಮತ್ತು ಅದರ ಶಾಖೆಗಳು ಕೂಡಲೇ ತಲೆಯೆತ್ತಬೇಕು.

ಈ ಸಂಪಿಗೆಹೂವಿನ ಮೂಗಿನವರನ್ನು ನಮ್ಮಿಂದ ಕಣ್ಮರೆ ಮಾಡಿಬಿಟ್ಟರೆ ನಮ್ಮ ಅವಹೇಳನೆ ಮಾಡುವವರೇ ಇಲ್ಲ. ಜಾತೀಯ ತಳಹದಿಯ ಮೇಲೆ ಪ್ರಾಂತ ರಚನೆಯಾಗಬೇಕೆಂದು ಎಷ್ಟೋ ಜನರು ವಾದಿಸಿದ್ದರು. ಭಾಷಾವಾರು ಪ್ರಾಂತ ರಚನೆಯಾಗಿ ಏನೇನು ಅನಾಹುತ ನಡೆದಿದೆಯೆಂದು ಎಲ್ಲರಿಗೂ ಗೊತ್ತು. ನಾಗಾ ಜನರು ತಮಗಾಗಿ ನಾಗಾಲ್ಯಾಂಡ್ ಕೇಳುತ್ತಿದ್ದಾರೆ. ಅಕಾಲಿಗಳದೂ ಒಂದು ಪ್ರತ್ಯೇಕ ಬೇಡಿಕೆಯಿದೆ. ಅಂಥದೇ ಬೇಡಿಕೆ ನಮ್ಮದೂ ಇದೆ. ಡೊಣ್ಣೆ ಮೂಗಿನವರೆಲ್ಲರನ್ನೂ ಕೂಡಿ ಹಾಕಿ ನಮಗಾಗಿ ಬೇರೆಯೇ ಒಂದು ಪ್ರಾಂತವನ್ನು ಮಾಡಿಕೊಡಲಿ. ಸಂಪಿಗೆ ಮೂಗಿನವರ ಉಪದ್ರವದಿಂದ ದೂರವೇ ಇರುತ್ತೇವೆ. ಅಂದರೆ ಮಾತ್ರ ನಮ್ಮ ಕಲ್ಯಾಣ ಮಾಡಿದಂತೆ ಆಗುವುದ. *

# ದೃಷ್ಟಿ ದೋಷದ ಬಗ್ಗೆ ನಿಮಗೇನು ಗೊತ್ತಿದೆ ?

WHO ಮತ್ತು ಇತರ ಮೂಲಗಳಿಂದ

ಈ ಜಗತ್ತಿನಲ್ಲಿಂದು ಕುರುಡರ ಸಂಖ್ಯೆ ಒಂದು ಕೋಟಿಗಿಂತಲೂ ಹೆಚ್ಚಿಗಿದೆ. ನಮ್ಮ ಭಾರತದಲ್ಲೆ ೨೦ ಲಕ್ಷ ಕುರುಡರಿದ್ದಾರೆ. ಕುರುಡಿಯಾಗಿದ್ದರೂ ತನ್ನ ಇಚ್ಛಾಶಕ್ತಿಯಿಂದ ಕಣ್ಣಿದ್ದವರ ಜೀವನವನ್ನೇ ಹೆಚ್ಚು ಕಡಿಮೆ ಸಾಗಿಸುತ್ತ ಜಗತ್ಪ್ರಸಿದ್ಧಳಾಗಿರುವ ಹೆಲೆನ್ ಕೆಲರ್ ಅನ್ನುತ್ತಾಳೆ: "ಈ ಒಂದು ಕೋಟಿ ಕುರುಡರಲ್ಲಿ ಏನಿಲ್ಲೆಂದರೂ ೮೦ ಲಕ್ಷ ಕುರುಡರ ಭಾರವನ್ನು ಸಮಾಜ ಹೊರಬೇಕಾಗುವುದು. ಇವರೆಲ್ಲರ ಹೊಟ್ಟೆ ಬಟ್ಟೆಯ ವೆಚ್ಚ ವರ್ಷಕ್ಕೆ ಕನಿಷ್ಠ ೪೦ ಕೋಟಿ ಡಾಲರಗಳಷ್ಟಾಗಬಹುದು. ಇದರಲ್ಲಿ ಕೊನೆಗೆ ಒಂದು ಹತ್ತಾಂಶದಷ್ಟು ಹಣವನ್ನಾದರೂ ಕುರುಡತನವನ್ನು ಪ್ರತಿಬಂಧಿಸಲು ಉಪಯೋಗಿಸಿದೆವಾದರೆ ಜಗತ್ತಿನಲ್ಲಿಯ ಕುರುಡರ ಸಂಖ್ಯೆಯು ಕಡಿಮೆಯಾದೀತು, ಆಗುವ ವ್ಯರ್ಥ ವೆಚ್ಚದಲ್ಲಿ ಬಹುಭಾಗ ಸದ್ವಿನಿಯೋಗವಾದೀತು."

ಶ್ರೀಮತಿ ಹೆಲೆನ್ ಕೆಲರ್ ಹೇಳುವ ಮಾತು ಯಥಾರ್ಥವಾದದ್ದು. ಕುರುಡರಾದವರೂ ವಿದ್ಯಾವಂತರಾಗಿ ನಾನಾವಿಧದ ಕೈಕಸಬುಗಳಲ್ಲಿ ಪ್ರವೀಣರಾಗಿ ಸಂಪಾದನೆ ಮಾಡಿಕೊಳ್ಳಬಲ್ಲರು. ಇತರ ಸಾಮಾನ್ಯ ಜನರಂತೆ ಕಾರಖಾನೆ ಮುಂತಾದವುಗಳಲ್ಲೂ ದುಡಿಯಬಲ್ಲರು ಎಂದು ಇಂದು ಸಿದ್ಧವಾಗಿದೆ. ಕುಡುಡರನ್ನು ಈ ಬಗೆಯಲ್ಲಿ ಕಾರ್ಯಕ್ಷಮರನ್ನಾಗಿ ಮಾಡಲು ತಕ್ಕ ತರಬೇತಿ ಕೊಡುವ ಹಲವಾರು ಸಂಸ್ಥೆಗಳು ಇಂದು ಜಗತ್ತಿನಲ್ಲಿವೆ. ಬಿಕ್ಕೆ ಬೇಡಿಯೋ ಪರಾಧೀನರಾಗಿಯೋ ನರಕಸದೃಶ ಬಾಳನ್ನು ಸಾಗಿಸಬೇಕಾಗಿದ್ದ ಸಹಸ್ರಾರು ಜನ ಕುರುಡರು ಇಂದು ಗೌರವಪೂರ್ಣವಾದ ಬಾಳನ್ನು ಬಾಳುತ್ತಿದ್ದಾರೆ. ಆದರೆ ಇಂಥವರ ಸಂಖ್ಯೆ ತೀರ ಕಡಿಮೆ. ಹೆಚ್ಚಿನ ಕುರುಡರ ಅವಸ್ಥೆಯಿನ್ನೂ ದೈನ್ಯಾವಸ್ಥೆಯಾಗಿಯೆ ಇದೆ. ಕುರುಡರ ಸಹಾಯಕ್ಕಾಗಿ ಸರಕಾರಗಳೂ ಜನರೂ ಮಾಡುವ ಕಾರ್ಯ ಇನ್ನೂ ನೂರಾರು ಪಟ್ಟು ಹೆಚ್ಚಬೇಕಾಗಿದೆ.

ರೋಗ ಬಂದಮೇಲೆ ಚಿಕಿತ್ಸೆ ಮಾಡುವದಕ್ಕಿಂತ ಅದು ಬರದಂತೆ ಜಾಗ್ರತೆ ವಹಿಸುವದೇ ಒಳ್ಳೆಯದು. ಕುರುಡರಲ್ಲಿ ಜನ್ಮಾಂಧರಾಗಿ ಹುಟ್ಟುವವರಿಗಿಂತಲೂ ಹುಟ್ಟಿದ ಮೇಲೆ ನಾನಾ ಕಾರಣಗಳಿಗಾಗಿ ಕಣ್ಣು ಕಳೆದುಕೊಳ್ಳುವವರೇ ಹೆಚ್ಚು. ಆದ್ದರಿಂದ ಅಂಧತ್ವ ಹೇಗೆ ಬರುತ್ತದೆ, ಅದನ್ನು ಪ್ರತಿಬಂಧಿಸುವ ಉಪಾಯಗಳೇನು, ಎಂಬ ಜ್ಞಾನ ಜನಸಾಮಾನ್ಯರಿಗಿದ್ದರೆ ಅದರಿಂದ ತುಂಬಾ ಪ್ರಯೋಜನವಾದೀತು. ಪ್ರಾರಬ್ಧವನ್ನು ಕೆಲವರ ಮಟ್ಟಿಗಾದರೂ ತಿದ್ದಬಹುದು

ಎಂದು ಕಂಡುಬಂದೀತು.

## ಆನುವಂಶಿಕ ಕಾರಣಗಳು

ಅಂಧತ್ವಕ್ಕೆ—ಜನ್ಮಾಂಧನಿರಲಿ, ಅಥವಾ ಆ ಮೇಲೆ ಕಣ್ಣು ಕಳೆದುಕೊಂಡವನಿರಲಿ- ವಂಶ ಪರಂಪರಾಗತ ಕಾರಣವೂ ಇರಬಹುದು. ಆನುವಂಶಿಕ ಜಾಡ್ಯಗಳ ಸಂದೇಹವಿರುವ ತಂದೆ-ತಾಯಿಗಳು ಡಾಕ್ಟರರಿಂದ ಪರೀಕ್ಷೆ ಮಾಡಿಸಿಕೊಂಡಲ್ಲಿ ಅಂಗಹೀನ ಸಂತಾನವನ್ನು ತಡೆಗಟ್ಟಲು ತುಂಬ ಸಹಾಯವಾಗುವುದು. ಸಗೋತ್ರ ಸಂಬಂಧ ಮತ್ತು ಆನುವಂಶಿಕ ಜಾಡ್ಯಗಳಲ್ಲಿರುವ ಸಂಬಂಧವು ಪ್ರಮಾಣ ಸಿದ್ಧವಾದ ಮಾತಾಗಿದೆ. ಸಗೋತ್ರ ದಂಪತಿಗಳಿಗೆ ಹುಟ್ಟುವ ಸಂತಾನದಲ್ಲಿ ಆನುವಂಶಿಕ ಜಾಡ್ಯದ ಪ್ರಮಾಣ ಇತರ ಸಾಮಾನ್ಯ ಮಕ್ಕಳಿಗಿಂತ ಇಪ್ಪತ್ತು ಪಟ್ಟು ಹೆಚ್ಚಿಗಿರುವುದು ಕಂಡುಬಂದಿದೆ. ಆದ್ದರಿಂದಲೇ ಸಗೋತ್ರ ವಿವಾಹ ಕೂಡದು ಎಂಬ ನಿಷೇಧವಿದೆ. ರಕ್ತಸಂಬಂಧಿಗಳಲ್ಲಿ ನಡೆಯುವ ವಿವಾಹಗಳಿಂದ ಹುಟ್ಟುವ ಮಕ್ಕಳಿಗೆ ಮಾನಸಿಕ ವ್ಯಾಧಿ, ಅಂಗವಿಕಲತೆ ಮುಂತಾದವುಗಳ ಭಯ ತಪ್ಪಿದ್ದಲ್ಲ. ವಿದ್ಯಾರ್ಥಿಗಳಿಗೆ ಈ ಮಾತನ್ನು ತಿಳಿಸಿ ಹೇಳುವುದರಿಂದ ಈ ಬಗೆಯ ತಪ್ಪು ತಿದ್ದಿಕೊಳ್ಳಬಹುದು.

ಗೊಬ್ಬರ ಅಂಥ ಭಯಂಕರ ರೋಗವೇನಲ್ಲ. ಅದು ಸೌಮ್ಯ ಸ್ವರೂಪದ್ದೆ ಆಗಿರುವುದರಿಂದ ಜನ ಅದರ ಬಗ್ಗೆ ಅಷ್ಟೊಂದು ವಿಚಾರ ಮಾಡುವುದಿಲ್ಲ. ಆದರೆ ಇದೇ ಗೊಬ್ಬರ ತಾಯಿಗೆ ಗರ್ಭ ನಿಂತು ಎರಡು ತಿಂಗಳೊಳಗಾಗಿ ಆದರೆ ಅದರ ಕೆಟ್ಟ ಪರಿಣಾಮ ಹುಟ್ಟುವ ಮಗುವಿನ ಮೇಲೆ ಆಗುವ ಸಂಭವ ಹತ್ತರಲ್ಲೊಂದು ಪಾಲು ಇರುತ್ತದೆ. ಆ ಮಗು ಕುರುಡನಾಗಿ ಹುಟ್ಟಬಹುದು ಮಾತ್ರವಲ್ಲ, ಜೊತೆಗೆ ಕಿವುಡುತನ, ದುರ್ಬಲ ಹೃದಯಗಳಿಂದ ಕೂಡಿಯೂ ಹುಟ್ಟಬಹುದು. ಈ ಸಂಭವ ನಿವಾರಣೆಗೆ ಇರುವ ಒಂದೇ ಒಂದು ಉಪಾಯವೆಂದರೆ ಹುಡುಗಿಯರಿಗೆ ಅವರ ಕೌಮಾರ್ಯಾವಸ್ಥೆಯಲ್ಲಿಯೆ ಗೊಬ್ಬರ ಆಗಿ ಹೋಗುವಂತೆ ನೋಡಿಕೊಳ್ಳುವುದು.

## ಅಕಾಲ ಜನ್ಮ

ಆರು ತಿಂಗಳಲ್ಲಿ ಏಳು ತಿಂಗಳಲ್ಲಿ- ಒಂಬತ್ತು ತಿಂಗಳ ಮುಂಚೆಯೆ —ಹುಟ್ಟುವ ಶಿಶುಗಳು ತೀರ ಅಶಕ್ತವಾಗಿರುತ್ತವೆ. ಅವುಗಳ ಬೆಳವಣಿಗೆ ಪೂರ್ಣವಾಗಿರುವುದಿಲ್ಲವಾದ್ದರಿಂದ ಅವು ಬದುಕುವ ಸಂಭವ ಕಡಿಮೆಯಾಗಿರುತ್ತದೆ. ವಿಜ್ಞಾನ ಇಂಥ ಶಿಶುಗಳನ್ನು ಬದುಕಿಸಲು ಪರಿಣಾಮಕಾರಿಯಾದ ವಿಧಾನವನ್ನು ಒದಗಿಸಿದೆ. ಈ ಶಿಶುಗಳನ್ನು ಇನ್‌ಕ್ಯುಬೇಟರ್‌ಗಳಲ್ಲಿಟ್ಟು ಸಾಮಾನ್ಯ ಸ್ಥಿತಿಗೆ ಬರುವವರೆಗೂ ಬೆಳೆಸುತ್ತಾರೆ. ಆದರೆ ಈ ಬಗೆಯಲ್ಲಿ ಒಂದು ದೋಷ, ಒಂದು ಗಂಡಾಂತರವಿರುವುದೂ ಕಂಡುಬಂದಿದೆ. ಪ್ರಾಣವಾಯುವಿನ ಪೂರೈಕೆ ಅತಿ ಹೆಚ್ಚಾಗಿ ಅಥವಾ ಸರಿಯಾಗಿ ಆಗದೆ ಹೋಗಿ ಶಿಶುಗಳ ಕಣ್ಣುಗಳಲ್ಲಿ ಪರೆ ಬೆಳೆದು ಅವು ಕುರುಡಾಗುವವು. ಈಗ ಕೆಲ ವರ್ಷಗಳ ಹಿಂದಿನವರೆಗೂ ಇನ್‌ಕ್ಯುಬೇಟರಿನಲ್ಲಿ ಬೆಳೆದ ಶಿಶುಗಳಲ್ಲಿ ನೂರಕ್ಕೆ ೨೦ ರಷ್ಟು ಈ ಕಾರಣದಿಂದಲೇ ಕುರುಡಾಗಿ ಬಿಡುತ್ತಿದ್ದವು. ಆದ್ದರಿಂದ ಈಗ ಅನೇಕ ದೇಶಗಳಲ್ಲಿ ಇನ್‌ಕ್ಯುಬೇಟರಿನಲ್ಲಿ ಪ್ರಾಣವಾಯುವಿನ ಸಲಕರಣೆಯನ್ನು ಉಪಯೋಗಿಸುವುದರ ಮೇಲೆ ಬಿಗಿಯಾದ ನಿಯಂತ್ರಣವಿಟ್ಟಿದ್ದಾರೆ.

ಪ್ರಮೇಹ ಮತ್ತು ಉಪದಂಶ ರೋಗಪೀಡಿತ ತಂದೆ-ತಾಯಿಗಳ ಮಕ್ಕಳಿಗೂ ಅಂಧತ್ವದ ಭಯ ಬಿಟ್ಟದ್ದಲ್ಲ. ಯುರೋಪಿನಲ್ಲಿಯಂತೂ ಚಿಕ್ಕಮಕ್ಕಳು ಕುರುಡಾಗುವುದಕ್ಕೆ ಇದೇ ಮುಖ್ಯ ಕಾರಣವಾಗಿತ್ತು. ಆದರೆ 'ಕ್ರೀಡೆ' ಪ್ರತಿಬಂಧಕೋಪಾಯ ಬಳಕೆಗೆ ಬಂದನಂತರ ಮಕ್ಕಳು ಈ ಕಾರಣದಿಂದ ಕುರುಡರಾಗುವುದು ತೀರ ಕಡಿಮೆಯಾಗಿದೆ.

ಕೂಸು ಇನ್ನೂ ಎಳೆಯದಿರುವಾಗ, ವಿಶೇಷತಃ ಕೂಸು ಒಂದು ತಿಂಗಳದಿರುವಾಗ ಅದರ ಕಣ್ಣು

## ಕಷ್ಟದ ದಿನಗಳಲ್ಲಿ...










# ಸಾರಿಡಾನ್

'ರೋಶ್'

### ಉಪಶಮನ, ಆರಾಮ ಮತ್ತು ಉಲ್ಲಾಸವನ್ನು ನೀಡುತ್ತದೆ

ಸಾರಿಡಾನ್ ನೋವುಗಳನ್ನೂ, ಸಿಡಿತಗಳನ್ನೂ ಬಲು ಬೇಗನೆ, ನಿಶ್ಚಿತವಾಗಿ ಮತ್ತು ನಿರಪಾಯಕರವಾಗಿ ಉಪಶಮನಗೊಳಿಸುತ್ತದೆ. ತಲೆನೋವು, ಮೈಕೈನೋವು, ಹಲ್ಲುನೋವು, ಮೈ ಬಿಸಿಯಾಗುವುದು, ಸಾಮಾನ್ಯ ಅಸ್ವಸ್ಥತೆ— ಇವುಗಳಿಗೆ ಸಾರಿಡಾನ್ ತೆಗೆದುಕೊಳ್ಳಿರಿ.




**ಒಂದೇ ಒಂದು ಮಾತ್ರೆ ಸಾಕು**

ಒಂದು ಮಾತ್ರೆಗೆ 13 ನ. ಪೈಸೆ

'ರೋಶ್' ಉತ್ಪಾದನ

ಸೋಲ್ ಡಿಸ್ಟ್ರಿಬ್ಯೂಟರ್ಸ್: ವೋಲ್ಟಾಸ್ ಲಿಮಿಟೆಡ್

JWT VT 3527

ಗಳು ತೀರ ವಿಶಾಲವಾಗಿರುವುದನ್ನು ಕಂಡು ತಂದೆತಾಯಿಗಳು ಹಿಗ್ಗುವುದುಂಟು. ಆದರೆ ವಸ್ತುಸ್ಥಿತಿ ಬೇರೆಯೆ ಇರುತ್ತದೆ. ವಿಶಾಲ ಕಂಗಳು ಗಂಡಾಂತರ ಸೂಚಕವಾಗಿರುವುದು ಹೆಚ್ಚು. ಅವು ಗ್ಲೊಕೋಮಾ (ಕಣ್ಣಿನೊಳಗೆ ಆಗುವ ಅಧಿಕ ಒತ್ತಡ) ರೋಗದ ಲಕ್ಷಣವಾಗಿರ ಬಹುದು. ಗ್ಲೊಕೋಮಾ ರೋಗಕ್ಕೆ ಸಕಾಲದಲ್ಲಿ ಚಿಕಿತ್ಸೆಯೊದಗದಿದ್ದರೆ ಅದು ಅಂಧತ್ವಕ್ಕೆ ಕಾರಣವಾಗುವುದು.

ಇನ್ನು ಕೆಲ ಮಕ್ಕಳ ದೃಷ್ಟಿ ವಕ್ರ (ಮೆಳ್ಳ ಗಣ್ಣು) ವಾಗಿರುತ್ತದೆ. ಅವರು ಬಲಬದಿಯನ್ನು ನೋಡುವಾಗ ಎಡಬದಿಯನ್ನು ನೋಡುತ್ತಿರು ವಂತೆ ಭಾಸವಾಗುತ್ತದೆ. ನೋಡುವಾಗ ಎರಡೂ ಕಣ್ಣು ಗುಡ್ಡೆಗಳು ಕಣ್ಣಿನ ಯಾವುದೊಂದು ಮೂಲೆಯನ್ನು ಸೇರಿರುತ್ತವೆ. ಕೆಲ ಮಕ್ಕಳಿಗೆ ಇದು ಹುಟ್ಟಾ ಇರಬಹುದು. ಕೆಲವರಲ್ಲಿ ಮುಂದೆ ಕಾಣಿಸಿಕೊಳ್ಳಬಹುದು. ಗೊಬ್ಬರದಂಥ ರೋಗವೂ ಇದಕ್ಕೆ ಕಾರಣವಾಗುತ್ತದೆ. ಇದನ್ನು ಹೀಗೆಯೆ ಉಳಿಯಗೊಟ್ಟರೆ ಮುಂದೆ ದೃಷ್ಟಿ ಮಾಂದ್ಯವುಂಟಾಗುವುದರಿಂದ ಈ ವಿಷಯದಲ್ಲಿ ತತ್‌ಕ್ಷಣ ಚಿಕಿತ್ಸೆ ಮಾಡಿಸಬೇಕು. ತನ್ನಷ್ಟಕ್ಕೆ ತಾನೇ ಈ ವಿಕಾರ ಸುಧಾರಿಸೀತೆಂಬುದು ಭ್ರಮೆ. ಕೆಲ ಸಲ ಯೋಗ್ಯ ಕನ್ನಡಕಗಳನ್ನು ಧರಿಸುವುದರಿಂದ ವಿಕಾರ ಹೋಗಬಹುದು. ಇನ್ನು ಕೆಲ ಸಂದರ್ಭಗಳಲ್ಲಿ ಶಸ್ತ್ರಚಿಕಿತ್ಸೆ, ಕಣ್ಣಿನ ವ್ಯಾಯಾಮ ಬೇಕಾಗಬಹುದು. ದೋಷ ಪ್ರತಿಯೊಬ್ಬನಲ್ಲೂ ಭಿನ್ನ ಭಿನ್ನ ಸ್ವರೂಪದ್ದಿರು ವುದರಿಂದ ತಜ್ಞ ಕಣ್ಣಿನ ಡಾಕ್ಟರರಲ್ಲಿ ತಪಾಸಿಸಿ ಕೊಂಡೇ ಚಿಕಿತ್ಸೆ ಮಾಡಿಸಬೇಕು.

## ಆಲಸಿ ಕಣ್ಣುಗಳು

ಇನ್ನು ಕೆಲವರಲ್ಲಿ ಯಾವುದೊಂದು ಕಣ್ಣು ಮಾತ್ರ ಆಲಸಿಯಾಗಿ ಸಮರ್ಪಕ ಕಾರ್ಯ ಮಾಡುವುದಿಲ್ಲ. ಈ ಕಣ್ಣು ಮುಂದೆ ನಿರುಪಯೋಗಿಯಾಗಿ ಬಿಡದಂತೆ ನೋಡಿಕೊಳ್ಳುವುದಕ್ಕಾಗಿ ಚೆನ್ನಾಗಿರುವ ಕಣ್ಣನ್ನು ಮುಚ್ಚಿಕೊಂಡು ಆಲಸಿ ಕಣ್ಣಿನಿಂದ ಕೆಲಸಮಾಡಿಸಿ ಅದಕ್ಕೆ ತಕ್ಕ ವ್ಯಾಯಾಮವನ್ನು ಕೊಟ್ಟು ಕಾರ್ಯಕ್ಷಮವನ್ನಾಗಿ ಮಾಡಬೇಕು.

ಕೆಲಮಕ್ಕಳು ಒಂದು ವರ್ಷದವರಿರುವಾಗ ಯಾವುದೊಂದು ವಸ್ತುವನ್ನು ಕಣ್ಣಿನ ತೀರ ಹತ್ತಿರಕ್ಕೆ ಹಿಡಿದು ನೋಡುತ್ತಿದ್ದರೆ ಅವಕ್ಕೆ 'ಸಮೀಪದೃಷ್ಟಿ' ಇರುವುದೆಂದು ತಿಳಿಯಬಹುದು. ವಿಕಾರ ಹೆಚ್ಚದಂತೆ ತಡೆಗಟ್ಟಲು ಆದಷ್ಟು ಬೇಗ ಮಕ್ಕಳಿಗೆ ಕನ್ನಡಕ ಹಾಕಬೇಕು. ಕನ್ನಡಕ ಹಾಕಿಕೊಂಡರೆ ಹೆಚ್ಚು ಚೆನ್ನಾಗಿ ಕಾಣಿಸುವ ಅನುಭವ ಬರುವುದರಿಂದ ಮಕ್ಕಳು ಕನ್ನಡಕವನ್ನು ಕಿತ್ತೆಸೆಯಲು ಸಹಸಾ ಪ್ರಯತ್ನಿಸುವುದಿಲ್ಲ.

ಚಿಕ್ಕಮಕ್ಕಳ ಕಣ್ಣಿನಲ್ಲಿ ಬಿಳಿಯ ಮೋಡದಂಥ ಲಕ್ಷಣ ಕಾಣಿಸುವುದೆಂದರೆ ಅದೊಂದು ನೇತ್ರವ್ರಣ (ಗ್ಲಿಯೋಮಾ) ದ ಲಕ್ಷಣವಾಗಿರುವ ಸಂಭವವಿರುತ್ತದೆ. ಇಂಥ ಪ್ರಸಂಗದಲ್ಲಿ ಡಾಕ್ಟರರ ಸಲಹೆ ಪಡೆಯಬೇಕು.

ಮಕ್ಕಳ ತಲೆನೋವಿನಲ್ಲಿ ಒಂದು ವೈಶಿಷ್ಟ್ಯವಿದೆ. ಮಗು ನಿರಾಶವಾದಾಗ, ಚಿಂತೆಗೀಡಾದಾಗ, ಅಸ್ವಸ್ಥವಾದಾಗ ವಾಂತಿ ಮಾಡಿಕೊಳ್ಳುವುದುಂಟು. ಅದರ ತಲೆನೋವು ಎಂದರೆ ಅದಕ್ಕೆ ಕನ್ನಡಕಗಳ ಅಗತ್ಯವಿದೆ ಎಂದೇ ಹೆಚ್ಚಾಗಿ ಅರ್ಥವಾಗುತ್ತದೆ.

ಜಗತ್ತಿನಲ್ಲಿಯ ಅಂಧತ್ವಕ್ಕೆ ಹೆಚ್ಚಾಗಿ ಟ್ರೆ-ಕೋಮಾ ಎಂಬ ವ್ಯಾಧಿಯೆ ಕಾರಣವೆಂದು ಗೊತ್ತಾಗಿದೆ. ಜಾಗತಿಕ ಆರೋಗ್ಯ ಸಂಸ್ಥೆ ಜಗತ್ತಿನಲ್ಲಿಯ ೫೦ ಕೋಟಿ ಜನರು (ಒಟ್ಟು ಜನಸಂಖ್ಯೆಯ ಆರರಲ್ಲೊಂದು ಪಾಲು) ಈ ವ್ಯಾಧಿ ಪೀಡಿತರಾಗಿದ್ದಾರೆ ಎಂದು ಅಂದಾಜು ಮಾಡಿದೆ. ಸಾಮಾನ್ಯವಾಗಿ ಈ ವ್ಯಾಧಿಯ ಗುರುತು ಶಾಲಾ ವಯಸ್ಸಿನಲ್ಲಿ ಪತ್ತೆಯಾದರೂ ವ್ಯಾಧಿ ಇನ್ನೂ ಪೂರ್ವದಲ್ಲಿಯೆ ಅಂಟಿಕೊಂಡಿರುತ್ತದೆ. ಉತ್ತರ ಆಫ್ರಿಕದ ದೇಶಗಳಲ್ಲಿ ಒಂದು ವರ್ಷವಾಗುವ

ದರೊಳಗಾಗಿ ಹತ್ತರಲ್ಲಿ ಒಂಬತ್ತು ಮಕ್ಕಳಿಗೆ ಈ ವ್ಯಾಧಿ ತಗಲಿರುತ್ತದೆ. ಇಡೀ ಹಳ್ಳಿಯಲ್ಲಿ ಒಬ್ಬನೇ ಒಬ್ಬ ಕಣ್ಣುಳ್ಳ ಪ್ರೌಢನು ಕಾಣಸಿಗದಿರುವಂಥ ಹಳ್ಳಿಗಳೂ ಇವೆ.

"ಚಾಳೀಸು"

೪೦ ವರ್ಷ ವಯಸ್ಸಾದ ನಂತರ ಅನೇಕರಿಗೆ ದೃಷ್ಟಿ ಶಕ್ತಿ ಕುಗ್ಗಿ ಕನ್ನಡಕಗಳ ಅವಶ್ಯಕತೆಯುಂಟಾಗುತ್ತದೆ. ಈ ವಯಸ್ಸಿನ ನಂತರ ನಮ್ಮ ಎಲುವುಗಳು ಕಠಿಣವಾಗಹತ್ತುತ್ತವೆ ಮತ್ತು ದೇಹದ ನರಗಳು ಹಾಗೂ ಅವಯವಗಳು ಕುಗ್ಗತೊಡಗುತ್ತವೆ; ಆದರೆ ಕಣ್ಣಿನ ಲೆನ್ಸ್ ಮಾತ್ರ ಕುಗ್ಗದೆ ಕಠಿಣವಾಗಿ ಸ್ಥಿತಿಸ್ಥಾಪಕತ್ವ ಗುಣವನ್ನು ಕಳೆದುಕೊಳ್ಳುತ್ತದೆ. ಇದರಿಂದ ಮೊದಲಿದ್ದ ದೃಷ್ಟಿ ಸಾಮರ್ಥ್ಯ ತಗ್ಗುತ್ತದೆ. ೪೫ ವರ್ಷವಾಗುವಾಗ ನಾವು ಓದಬೇಕಾದರೆ ಪುಸ್ತಕಗಳನ್ನು ದೂರ ದೂರ ಹಿಡಿಯಬೇಕಾಗುತ್ತದೆ. ವಯಸ್ಸಾದಂತೆ, ಲೆನ್ಸ್ ಹೆಚ್ಚು ಕಠಿಣವಾದಂತೆ ಸಮೀಪವಿರುವುದನ್ನು ನೋಡಲು ಹೆಚ್ಚೆಚ್ಚು ತೊಂದರೆಯಾಗುತ್ತದೆ. ಕಣ್ಣಿನ ಈ ವಿಕಾರಕ್ಕೆ ಪ್ರೆಸ್‌ಬಾಯೋಪಿಯ (ಮುದಿದೃಷ್ಟಿ) ಎಂದು ಹೆಸರು. ಇದರ ಪರಿಮಾರ್ಜನೆಗಾಗಿ ಕನ್ನಡಕದ ಸಹಾಯ ತೆಗೆದುಕೊಳ್ಳಬೇಕಾಗುತ್ತದೆ.

೪೦ ವರ್ಷದ ನಂತರ ಇದೊಂದೇ ತೊಂದರೆಯಾದರೆ ನಾವು ಸುದೈವಿಗಳೇ ಎನ್ನಬೇಕು. ಆದರೆ ಅನಂತರ ಇನ್ನೂ ಕೆಲ ಬಗೆಯ ದೃಷ್ಟಿ ದೋಷಗಳು ಬರಬಹುದು. ಈ ದೋಷಗಳಲ್ಲೆಲ್ಲ ಸಾಮಾನ್ಯವಾದುದೆಂದರೆ ಕ್ಯಾಟರಾಕ್ಟ್ (ಕಣ್ಣಿನ ಪರೆ). ಜನ ತಿಳಿದಂತೆ ಇದೇನೂ ಅಂಥ ಭಯಾನಕವಾದದ್ದಲ್ಲ. ಕಣ್ಣುಗುಡ್ಡೆಯ ಎದುರು ಪರೆ ಬೆಳೆಯುತ್ತದೆ ಎಂದು ಜನ ತಿಳಿದಿರುವುದೂ ತಪ್ಪು. ಕ್ಯಾನ್ಸರ್ ಮಾದರಿಯ ರೋಗವೂ ಇದಲ್ಲ. ಕಣ್ಣಿನ ಲೆನ್ಸ್‌ಗಳಲ್ಲಿ ನಿಧಾನವಾಗಿ, ವೇದನಾರಹಿತವಾಗಿ ಮಂಜು

ಮುಸುಕಿದಂತಾಗುವುದೇ ಇದರ ವಾಸ್ತವಾಂಶ. ಕೆಲ ಸಲ ಮಕ್ಕಳೂ ಈ ವಿಕಾರ ಸಹಿತರಾಗಿಯೆ ಹುಟ್ಟುವುದುಂಟು. ಪ್ರೌಢರಲ್ಲಿ ಅಪಘಾತಗಳಿಂದಾದ ಶಾರೀರಕ ನೋವು, ಬಹುಮೂತ್ರ, ಕ್ಷಾರಗಳ ಅಭಾವ, ಕ್ಯಾಟರಾಕ್ಟಿಗೆ ಕಾರಣವಾಗಬಹುದು. ಆದರೆ ವಯಸ್ಸಾದ ಕಾರಣದಿಂದ ಬರುವ ಸೆನ್ಯಾಲ್ ಕ್ಯಾಟರಾಕ್ಟೇ ಮುಖ್ಯವಾಗಿದೆ.

೩೦ ವರ್ಷಗಳ ಸಂಶೋಧನೆಯ ನಂತರವೂ ಈ ಬಗೆಯ ಕ್ಯಾಟರಾಕ್ಟ್ ಬರಲು ಕಾರಣವೇನೆಂದು ತಿಳಿದಿಲ್ಲ. ಆನುವಂಶಿಕವಾಗಿ ಹೀಗೆ ನಡೆದು ಬರುವ ಉದಾಹರಣೆಗಳಿದ್ದರೂ ಇದೇನೂ ಸಾಮಾನ್ಯ ನಿಯಮವಲ್ಲ. ಆದರೆ ೪೦ ರ ನಂತರ ೬೦ ವರ್ಷವಾಗುವುದರೊಳಗಾಗಿ ನೂರಕ್ಕೆ ೬೫ ರಷ್ಟು ಜನರಿಗೆ ಕ್ಯಾಟರಾಕ್ಟಿನ ಬಾಧೆಯಾಗಿರುತ್ತದೆ ಎನ್ನಬಹುದು.

ವಿಚಿತ್ರವೆಂದರೆ ಕ್ಯಾಟರಾಕ್ಟಿನ ಆರಂಭದ ಲಕ್ಷಣವನ್ನು ಜನ ಸ್ವಾಗತಿಸುವುದೂ ಉಂಟು. ಏಕೆಂದರೆ ಲೆನ್ಸ್ ದಪ್ಪವಾಗುತ್ತಿರುವಾಗ ಅದರ ಫೋಕಸಿಂಗ್ ಶಕ್ತಿ ಹೆಚ್ಚುತ್ತದೆ. ; ಇದರಿಂದ ಕನ್ನಡಕದ ಅಗತ್ಯ ಕಡಿಮೆಯಾದಂತಾಗುವುದು ಮುಂದವಾದ ತಮ್ಮ ದೃಷ್ಟಿ ಮರಳಿತೆಂಬ ಹಿಗ್ಗಿನಿಂದ ಜನ ಕನ್ನಡಕವನ್ನು ತೆಗೆದಿಡುತ್ತಾರೆ ಆದರೆ ಕ್ರಮೇಣ ಲೆನ್ಸಿನಲ್ಲಿ ಮಂಜುಗವಿದು ದೃಷ್ಟಿಶಕ್ತಿ ತೀರ ಕುಗ್ಗಿ ಹೋಗುತ್ತದೆ.

ಕ್ಯಾಟರಾಕ್ಟ್ ನಿವಾರಣೆಗೆ ಶಸ್ತ್ರಚಿಕಿತ್ಸೆಯೊಂದೇ ಖಚಿತ ಉಪಾಯ. ಕೆಲ ವರ್ಷಗಳ ಹಿಂದಿನ ವರೆಗೂ ಕಣ್ಣಿನ ಪರೆ ಹಣ್ಣಾಗುವ ವರೆಗೂ ಶಸ್ತ್ರಚಿಕಿತ್ಸೆ ಮಾಡಲಾಗದು ಎಂಬ ನಂಬಿಕೆಯಿತ್ತು. ರೋಗಿಗಳು ಹಾದಿ ಕಾಯುತ್ತ ತಿಂಗಳುಗಟ್ಟಲೆ, ವರ್ಷಗಟ್ಟಲೆ ಸರಿಯಾಗಿ ನೋಡಲಾರದೆ ಪರಿತಪಿಸಬೇಕಾಗುತ್ತಿತ್ತು. ಆದರೆ ಶಸ್ತ್ರಚಿಕಿತ್ಸೆಯಲ್ಲಿ ಆದ ಸುಧಾರಣೆಯಿಂದ ಈಗ ರೋಗಿಗೆ ನಿತ್ಯವ್ಯವಹಾರ ನಡೆಸಲು ತೊಂದರೆಯಾದೊಡನೆಯೆ ಶಸ್ತ್ರಚಿಕಿತ್ಸೆ ಮಾಡುತ್ತಾರೆ. ಕಣ್ಣಿನ ಆಪರೇಶನ್‌ಗಳಲ್ಲಿ ಕ್ಯಾಟರಾಕ್ಟ್ ಆಪರೇಶನ್ನೇ ಹೆಚ್ಚಾಗಿರುವುದು. ಈ ಆಪರೇಶನ್ ಈಗಿಗಿಂತಲೂ ಸುಲಭವೂ ಅಪಾಯಹೀನವೂ ಆಗುವಂತೆ ಈಗ ಹೊಸ ತಂತ್ರವೊಂದು ಬಳಕೆಯಲ್ಲಿ ಬರತೊಡಗಿದೆ.

ಆದರೆ ವಯಸ್ಸಾದವರಿಗೆ ಬರುವ ಗ್ಲೊಕೋಮಾ ರೋಗ ಹೆಚ್ಚು ಅಪಾಯಕಾರಿಯಾಗಿದೆ. ಈ ರೋಗ ವೇದನಾರಹಿತವಾಗಿದ್ದು ರೋಗಿಗೆ ಅದರ ಕಲ್ಪನೆಯು ಇರುವುದಿಲ್ಲ. ಅದರಿಂದ ಕಣ್ಣು ಕುರುಡಾಗುವವರೆಗೂ ರೋಗಿ ನಿಶ್ಚಿಂತೆಯಿಂದಲೆ ಇದ್ದುಬಿಡುತ್ತಾನೆ.

ಆದ್ದರಿಂದ ಯಾವುದೊಂದು ವಸ್ತುವನ್ನು ನೋಡಿದಾಗ ಮಸಕುಮಸುಕಾಗಿ ಕಾಣುವುದು, ಪುನಃಪುನಃ ಅಪರಿಚಿತ ಬಗೆಯ ತಲೆನೋವು ಬರುವುದು, ದೀಪಗಳ ಸುತ್ತಲೂ ಬಣ್ಣದ ಉಂಗುರಗಳು ಕಂಡಂತೆ ಭಾಸವಾಗುವುದು ಮುಂತಾದ

ಲಕ್ಷಣಗಳು ಕಾಣತೊಡಗಿದೊಡನೆ ಜಾಗ್ರತರಾಗಬೇಕು. ಇವುಗಳಲ್ಲೆಲ್ಲ ಬಣ್ಣದ ಉಂಗುರಗಳು ಕಂಡಂತಾಗುವುದೇ ಹೆಚ್ಚು ಸ್ಪಷ್ಟವಾದ ಮತ್ತು ಗಂಡಾಂತರಕಾರಿಯಾದ ಲಕ್ಷಣವಾಗಿದೆ ಏನೋ ಕಾರಣದಿಂದ ಹೀಗೆಲ್ಲ ಆಗುತ್ತಿದೆ ಎಂಬ ಭ್ರಮೆಯಿಂದ ಅಲಕ್ಷ್ಯ ಮಾಡಿದ್ದಾದರೆ ಸಂಪೂರ್ಣ ದೃಷ್ಟಿ ಕಳೆದುಕೊಳ್ಳುವ ಪ್ರಸಂಗ ಬರುವುದು. ಗ್ಲೊಕೋಮಾ ರೋಗಕ್ಕೆ ಪ್ರಾರಂಭದಲ್ಲೇ ಚಿಕಿತ್ಸೆಯಾಗದಿದ್ದರೆ ಮುಂದದು ಕೈಮೀರಿದ್ದಾಗುವುದು.

ಗ್ಲೊಕೋಮಾ, ಕ್ಯಾಟರಾಕ್ಟ್ ಮತ್ತು ಪ್ರೆಸ್‌ಬಾಯೋಪಿಯಾಗಳಲ್ಲದೆ ಮಧ್ಯ ವಯಸ್ಸಿನವರು ಅಕ್ಷಿಪಟ (ರೆಟಿನಾ) ದ ಸರಿಯುವಿಕೆ, ಕಣ್ಣುಗುಡ್ಡೆಯ ಪಾರದರ್ಶಕ ಪಟಲದ ವ್ರಣ, ಕನೀನಿಕಾ ಪಟಲ (ಐರಿಸ್) ದ ದಾಹಗಳಿಂದಲೂ ಜಾಗ್ರತರಾಗಿರಬೇಕು. ೪೦ ವರ್ಷ ವಯಸ್ಸಿನ ನಂತರ ಕಣ್ಣಿನ ತೊಂದರೆ ಬಂದವರೆಲ್ಲ ತಜ್ಞರಿಂದ ನೇತ್ರ ಪರೀಕ್ಷೆ ಮಾಡಿಸಿಕೊಳ್ಳುವುದೇ ಈ ಎಲ್ಲ ಅಪಾಯಗಳಿಂದ ರಕ್ಷಿಸಿಕೊಳ್ಳುವ ಮುಖ್ಯೋಪಾಯವಾಗಿದೆ.

ಕಾರಣಾಂತರಗಳಿಂದ ಕುರುಡರಾಗಿರುವವರಿಗೆ ಇಂದಿನ ಆಧುನಿಕ ಜಗತ್ತಿನಲ್ಲಿ ಮೊದಲಿನಷ್ಟು ನಿರಾಶೆಯುಳಿದಿಲ್ಲ. ಈಗೆರಡು ಶತಮಾನಗಳ ಹಿಂದೆ ಫ್ರಾನ್ಸಿನಲ್ಲಿ ವೆಲೆಂಟಿನ್ ಹಾಏ ಎಂಬಾತ ಕುರುಡರಿಗಾಗಿ ಶಾಲೆ ತೆರೆದು ಯೋಗ್ಯ ರೀತಿಯ ಶಿಕ್ಷಣವಿತ್ತಲ್ಲಿ ಕುರುಡರು ಕೇವಲ ಪರಾಧೀನ ಜೀವಿಗಳಾಗಿ ಬದುಕಬೇಕಾಗಿಲ್ಲ ಎಂದು ಸಿದ್ಧ ಮಾಡಿಕೊಟ್ಟ. ಲುಯಿಸ್ ಬ್ರೇಲ್ (೧೮೦೯–೧೮೫೨) ಎಂಬ ಇನ್ನೊಬ್ಬ ಫ್ರೆಂಚ್ ಮನುಷ್ಯ ಕುರುಡರಿಗೆ ಓದು-ಬರೆಯಲು ಅನುಕೂಲವಾ[...]ಲೆಂದು ಬ್ರೇಲ್ ಲಿಪಿಯನ್ನು ಕಂಡುಹಿಡಿ[...] ಮಹದುಪಕಾರ ಮಾಡಿದ್ದಾನೆ. ಈಗ ರಶಿಂ[...]ದಲ್ಲಿ ಕುರುಡರಿಗೆ ಕಾರಖಾನೆಗಳಲ್ಲಿ ಕೆಲ[...] ಮಾಡುವ ತರಬೇತಿ ಕೊಡಲು ೨೮೬ ವರ್ಕ್‌ಶಾಪ್ ಶಾಲೆಗಳಿವೆ. ಜಪಾನಿನಲ್ಲಿ ೩೫,೦೦[...]ಕ್ಕಿಂತಲೂ ಹೆಚ್ಚಿಗೆ ಕುರುಡರು ಉದ್ಯೋಗಗಳ[...]ಲ್ಲಿದ್ದಾರೆ. ಇಂಗ್ಲಂಡ್, ಅಮೇರಿಕ, ಜರ್ಮ[...] ಮೊದಲಾದವುಗಳಲ್ಲೂ ಅಧಿಕ ಸಂಖ್ಯೆಯಲ್ಲಿ ಕುರುಡರು ಸ್ವಾವಲಂಬಿಗಳಾಗಿ ಇತರ ಸಾಮಾ[...]ನ್ಯರಂತೆ ಯಶಸ್ವಿ ಜೀವನ ನಡೆಸುತ್ತಿದ್ದಾರೆ.

ಆದರೆ ಏಶಿಯ, ಆಫ್ರಿಕ ಮತ್ತು ಲ್ಯಾಟಿನ[...] ಅಮೇರಿಕಗಳಲ್ಲಿ ಮಾತ್ರ ಕುರುಡರ ಸ್ಥಿತಿ ಸುಧಾ[...]ಸಿಲ್ಲ. ಜಗತ್ತಿನಲ್ಲಿ ಈ ಮಿತಿಗೆ ಏನಿಲ್ಲೆಂದರೂ ೬,೫೦,೦೦೦ ಕುರುಡ ಮಕ್ಕಳಿದ್ದು ಅವರಲ್ಲಿ ಕೇವಲ ೪೦,೦೦೦ ಹುಡುಗರು ಮಾತ್ರ ಶಿಕ್ಷಣ ಪಡೆಯುತ್ತಿದ್ದಾರೆಂದರೆ ಈ ಅನಾಹುತದ ವ್ಯಾಪ್ತಿಯ ಅರಿವಾಗಬಹುದು.

ಈ ದಿಶೆಯಲ್ಲಿ ಕಾರ್ಯ ನಡೆದಿದೆ. ೧೯೫೧ ರಲ್ಲಿ ಸ್ಥಾಪಿತವಾಗಿರುವ ಕುರುಡರ ಕಲ್ಯಾಣದ ಜಾಗತಿಕ ಮಂಡಳಕ್ಕೆ ೫೦ ಕ್ಕಿಂತಲೂ ಹೆಚ್ಚು ದೇಶಗಳು ಸದಸ್ಯವಾಗಿವೆ. ಅದರಂತೆ ಕುರುಡತನ ಪ್ರತಿಬಂಧಿಸುವುದಕ್ಕಾಗಿ ಇರುವ ಇಂಟರ್‌ನ್ಯಾಶನಲ್ ಅಸೋಸಿಯೇಶನ್ ಫಾರ್ ದಿ ಪ್ರಿವೆನ್ಶನ್ ಆಫ್ ಬ್ಲೈಂಡ್‌ನೆಸ್ ಸಂಸ್ಥೆಯು ಚೆನ್ನಾಗಿ ಕೆಲಸ ಮಾಡುತ್ತಿದೆ. ಮೊದಲನೆಯದು ಕುರುಡರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿದ್ದರೆ ಎರಡನೆಯದು ಅಂಧತ್ವವನ್ನು ತಡೆಗಟ್ಟಲು ಪ್ರಯತ್ನ ಮಾಡುತ್ತಿದೆ.

---

ಕನ್ನಡಿಯನ್ನು ಮತ್ತೂ ಮತ್ತೂ ಬೂದಿಯಿಂದ ಉಜ್ಜಿದಾಗ ಕೈಯೇ ಕೊಳೆಯಾಗುತ್ತದೆ ವಿನಾ ಕನ್ನಡಿಯ ಕಾಂತಿ ಕುಗ್ಗುವುದಿಲ್ಲ; ಅದು ಮತ್ತಷ್ಟು ಶುಭ್ರವಾಗಿ ಹೊಳೆಯುವುದು. ಸಜ್ಜನರನ್ನು ದೂಷಕರು ಎಷ್ಟು ನಿಂದಿಸಿದರೂ ಅವರ ಕೀರ್ತಿ ಮತ್ತಷ್ಟು ಹೆಚ್ಚಿ ಅಂತ್ಯದಲ್ಲಿ ದೂಷಕರೇ ದೂರಿಗೆ ಗುರಿಯಾಗುವರು.

—ಸಂಸ್ಕೃತ ಸುಭಾಷಿತ

ಅವರ ಸೌಮ್ಯರೂಪದ ಹಿಂದೆ
ದೃಢ ವ್ಯಕ್ತಿತ್ವವಿದೆ

# ಉ ಥಾಂಟ್:
# ವಿಶ್ವಸಂಸ್ಥೆಯ ಬರ್ಮೀ ಕಾರ್ಯದರ್ಶಿ



ರಾಜಕಾರಣದಲ್ಲಿ ಪ್ರಬಲಶಕ್ತಿಗಳು ಒಂದಕ್ಕೊಂದು ಎದುರಾಗಿ ಎಳೆದಾಡುತ್ತಿರುವಾಗ ಕೆಲವೊಮ್ಮೆ ಅಜ್ಞಾತ ಅಪ್ರಸಿದ್ಧ ವ್ಯಕ್ತಿಗಳು ಅಧಿಕಾರದ ಗದ್ದುಗೆಯೇರುವುದುಂಟು. ಹೀಗೆ ಒಂದು ರಾಜ್ಯದಲ್ಲಿ ಮಂತ್ರಿಮಂಡಲದ ಮೇಲೆ ಹಿಡಿತ ಪಡೆಯಲು ಎರಡೋ ಮೂರೋ ಸಮಶಕ್ತಿಯ ಗುಂಪುಗಳು ಸ್ಪರ್ಧಿಸುತ್ತಿರುವಾಗ ಯಾವ ಗುಂಪಿಗೂ ಸೇರದ ದುರ್ಬಲ ವ್ಯಕ್ತಿಯೊಬ್ಬನನ್ನು ಮುಖ್ಯಮಂತ್ರಿ ಪದವಿಗೇರಿಸಬಹುದು. ಈತ ದುರ್ಬಲ ಮತ್ತು ಬೆಂಬಲರಹಿತನಾಗಿರುವುದರಿಂದ ಅವನನ್ನು ತಮಗೆ ಬೇಕಾದಂತೆ ಉಪಯೋಗಿಸಿಕೊಳ್ಳಬಹುದೆಂದು ಪ್ರತಿಯೊಂದು ಗುಂಪು ಎಣಿಸಿಕೊಂಡು ಅವನನ್ನು ಮೂರ್ಧನ್ಯನಾಗಿ ಮಾಡಿಕೊಳ್ಳುತ್ತವೆ. ಆದರೆ ಅಪರೂಪವಾಗಿ, ಈ ನಿಮಿತ್ತಮಾತ್ರ ವ್ಯಕ್ತಿ ನಾಯಕತ್ವದ ಯೋಗ್ಯತೆಯನ್ನು ಪ್ರದರ್ಶಿಸಿ ತಾನೇ ಪ್ರಬಲ ಮತ್ತು ಅನಿವಾರ್ಯ ನಾಯಕನಾಗಿಬಿಟ್ಟು ಎಲ್ಲರನ್ನೂ ಚಕಿತಗೊಳಿಸಿಬಿಡುವುದುಂಟು.

ಸಂಯುಕ್ತ ರಾಷ್ಟ್ರಸಂಘದ ತಾತ್ಕಾಲಿಕ ಪ್ರಧಾನ ಕಾರ್ಯದರ್ಶಿ ಪದಕ್ಕೆ ಬರ್ಮದ ಉ ಥಾಂಟರನ್ನು ಆರಿಸಿದಾಗ ರಶಿಯ ಅಮೇರಿಕ ಬಣಗಳ ಎಳೆದಾಟದಲ್ಲಿ ಯಾವ ಬಣಕ್ಕೂ ಸೇರದ 'ಯಾರೋ ಒಬ್ಬ' ಎಂದೇ ಅವರ ಕೊರಳಿಗೆ ಈ ಮಾಲೆ ಬಿತ್ತು. ತಮ್ಮ ತಮ್ಮ ಕೈಗೊಂಬೆಯಾಗಬಹುದೆಂದು (ಎರಡೂ ಪಕ್ಷಗಳು) ಒಪ್ಪಿಕೊಂಡ ಈ ವ್ಯಕ್ತಿ ಇಂದು ಧೈರ್ಯಶಾಲಿ ನಾಯಕತ್ವವನ್ನು ಪ್ರದರ್ಶಿಸಿದ್ದಾರೆ. ಎರಡೂ ಪಕ್ಷಗಳು ತಮ್ಮ ಆಯ್ಕೆಯನ್ನು ಈಗೆಷ್ಟು ಮಟ್ಟಿಗೆ ಮೆಚ್ಚುತ್ತಿವೆಯೋ ಹೇಳಲಾಸಲ್ಲ.

ದಾಗ್ ಹ್ಯಾಮರ್‌ಶೀಲ್ಡರು ಅಕಸ್ಮಾತ್ತಾಗಿ ವಿಮಾನ ಅಪಘಾತದಲ್ಲಿ ಸತ್ತಾಗ ಅವರು ಬಿಟ್ಟು ಹೋದ ಸಮಸ್ಯೆಗಳು ಅವರಂಥ ಪಳಗಿದ ಗೌರವಿತ ರಾಜನೀತಿಜ್ಞನಿಗೇ ನೀಗದಂಥವಾಗಿದ್ದವು. ಒಂದೆಡೆ ರಶಿಯವು ತನ್ನ ಬಣ ಶಾಶ್ವತವಾಗಿ ಅಲ್ಪಸಂಖ್ಯಾಕವಾಗುವುದೆಂದರಿತು ಸಂಯುಕ್ತ ರಾಷ್ಟ್ರಸಂಘದ ರೂಪವನ್ನೇ ಬದಲಿಸಬೇಕೆನ್ನುತ್ತಿತ್ತು. ಹ್ಯಾಮರ್‌ಶೀಲ್ಡರು ಪಾಶ್ಚಾತ್ಯ ಪಕ್ಷಪಾತಿಗಳೆಂದಾರೋಪಿಸಿ, ಪ್ರಧಾನ ಕಾರ್ಯದ

ಶ್ರೀಯ ಅಧಿಕಾರವನ್ನು ಕುಗ್ಗಿಸಲು ತನ್ನ ತ್ರಿಮೂರ್ತಿ ಯೋಜನೆಯನ್ನು ಮುಂದಿಟ್ಟಿತ್ತು. ಇನ್ನೊತ್ತಟ್ಟಿಗೆ ಕಾಂಗೋದಲ್ಲಿ ಸಂ. ರಾ. ಸಂಘವು ಕೈಕೊಂಡ ಕ್ರಮಗಳಿಂದ ತಮ್ಮ ಪಕ್ಷಪಾತಿ ಮೋಶೆ ಶೋಂಬೆಯವರ ಹಿತ ಹಾಳಾದೀತೆಂದು ಅಂಜಿದ ಪಾಶ್ಚಾತ್ಯ ರಾಷ್ಟ್ರಗಳು ಆ ದುರ್ದೈವಿ ಆಫ್ರಿಕನ್ ರಾಷ್ಟ್ರದಲ್ಲಿ ಶಾಂತಿಸ್ಥಾಪನೆಯಾಗದಂತೆ ಸಂ. ರಾ. ಸಂಘಕ್ಕೆ ಹೆಚ್ಚು ಕಡಿಮೆ ಬಹಿರಂಗವಾಗಿಯೆ ಅಡ್ಡಗಾಲಿಕ್ಕುತ್ತಿದ್ದವು.

ಆದರೆ ಈ ತೊಡಕಿನೊಳಗಿನ ತೊಡಕಿನ ಪರಿಸ್ಥಿತಿಯನ್ನೆದುರಿಸುವ ಹೊಣೆಗೆ ಸಂ. ರಾ. ಸಂಘವು ಆರಿಸಿದ ವ್ಯಕ್ತಿಯೋ ಯಾರಿಗೂ ಸರಿಯಾಗಿ ಪರಿಚಯವಿಲ್ಲದವನಾಗಿದ್ದ. ಬ್ರಿಟಿಶ್ ಪ್ರತಿನಿಧಿಗೆ ಅವರ ಹೆಸರಿನ ಉಚ್ಚಾರ ಹೇಗೆಂದೇ ಗೊತ್ತಿರಲಿಲ್ಲವಂತೆ. ಉ ಥಾಂಟ್ ಬರ್ಮಾದ ಪ್ರತಿನಿಧಿಯಾಗಿ ಕೆಲ ವರ್ಷಗಳಿಂದ ಸಂ. ರಾ. ಸಂಘದಲ್ಲಿದ್ದರೇನೋ ನಿಜ. ಆದರೆ ಅವರು ಹಿಂದೊಮ್ಮೆ ಶಾಲಾ ಮಾಸ್ತರರಾಗಿದ್ದರೆಂದೂ ಅವರಿಗೆ ಪತ್ರಿಕೆಗಳನ್ನು ಓದುವ ಹುಚ್ಚು ಬಹಳವೆಂದೂ ಹೊರತು ಮತ್ತೇನೂ ಯಾರಿಗೂ ಅವರ ಪೂರ್ವಾಪರ ಗೊತ್ತಿರಲಿಲ್ಲ.

ಗೊತ್ತಿರದ್ದು ಆಶ್ಚರ್ಯವೂ ಅಲ್ಲ. ಉ ಥಾಂಟ್ ರಾಜಕಾರಣಿಯೇ ಅಲ್ಲವೆಂದರೂ ಸಲ್ಲುವುದು. ಅವರು ಹಿಂದಿನ ಬರ್ಮೀ ಪ್ರಧಾನಿ ಉ ನು ರಿಗೆ ಮಿತ್ರರೂ ಸಲಹೆಗಾರರೂ ಆಗಿದ್ದರೂ ಸಕ್ರಿಯ ರಾಜಕಾರಣದಲ್ಲಿ ಹಿನ್ನೆಲೆಗಾಯಕರಂತೆಯೆ ಇದ್ದವರು. ಬಹುಶಃ ಬೌದ್ಧ ಬರ್ಮಾದ ಹಿಂಸಾಪೂರ್ಣ ರಾಜಕೀಯ ಇತಿಹಾಸದಲ್ಲಿ ಉ ಥಾಂಟರ ತಲೆ ಈ ಕಾರಣದಿಂದಲೇ ಇನ್ನೂ ಉಳಿದುಕೊಂಡಿದೆ.

ಉ ಥಾಂಟರ ಪ್ರಾಮುಖ್ಯ ರುಚಿ ಸಾಹಿತ್ಯ-ವಿಚಾರ ಕ್ಷೇತ್ರದಲ್ಲಿ. ಹಾಗೆಂದು ಅವರು ಅಂಥ ಶಿಕ್ಷಣ ಪಡೆದವರಲ್ಲ. ರಂಗೂನ್ ವಿಶ್ವವಿದ್ಯಾಲಯದಲ್ಲಿ ಎರಡು ವರ್ಷ ಕಳೆಯುವುದರೊಳಗೆ ತಂದೆ ತೀರಿದ್ದರಿಂದ ಅವರು ಪದವಿ ಪಡೆಯುವ ಮೊದಲೇ ಶಿಕ್ಷಣಕ್ಕೆ ಶರಣು ಹೊಡೆಯಬೇಕಾಯಿತು. ಆದರೆ ೨೦ ನೇ ವಯಸ್ಸಿನಲ್ಲೇ ಬ್ರಾ[...]
ಗನ Pied Piper of Hamel[...]
( ಬೊಮ್ಮನಹಳ್ಳಿಯ ಕಿಂದರಿ ಜೋಗಿ ) [...]
ಬರ್ಮೀ ಭಾಷೆಗೆ ಅನುವಾದಿಸಿದ್ದಕ್ಕೆ ಅ[...]
ಗೊಂದು ಬಹುಮಾನ ಬಂದಿತ್ತು. ಅಂದಿನಿ[...]
ಅವರು ಅನೇಕ ಪುಸ್ತಕಗಳನ್ನು—ಬರ್ಮಾದ [...]
ಹಾಸ, ರಾಷ್ಟ್ರ ಸಂಘ ಇತ್ಯಾದಿ ನಾನಾ ವಿಷ[...]
ಗಳ ಮೇಲೆ— ಬರೆದಿದ್ದಾರೆ.

೧೯೦೯ ರಲ್ಲಿ ಹುಟ್ಟಿದ ಉ ಥಾಂಟ್ ಉ [...]
ಅವರಿಗಿಂತ ಎರಡೇ ವರ್ಷ ಚಿಕ್ಕವರು. ಇ[...]
ರಿಗೂ ಶಾಲಾದಿನಗಳಿಂದಲೇ ಸ್ನೇಹ. ಇಬ್ಬ[...]
ಶಿಕ್ಷಣವನ್ನು ಉದ್ಯೋಗವಾಗಿ ಅಂಗೀಕರಿಸಿ[...]
ವರು. ಉ ನು ಸುಪರಿಂಟೆಂಡೆಂಟರಾಗಿದ್ದ ಶಾ[...]
ಯಲ್ಲೇ ಉ ಥಾಂಟ್ ಹೆಡ್ಮಾಸ್ತರರಾದ[...]
ಅವರದು "ಸಮಾನ ಶೀಲ ವ್ಯಸನಗಳ ಸಖ್ಯ[...]
ರಾಜಕಾರಣದಲ್ಲಿ ಇಬ್ಬರದೂ ಸಮಾನ ಆಸ[...]
ಮತ್ತು ಸಮಾನ ವಿಚಾರ. ಇತರ ವ್ಯಸನಗಳ[...]
ಕೂಡ. ಪ್ರಣಯ ವಿಷಯದಲ್ಲಿ ತುಸು ಅಳು[...]
ವರಾದ ಉ ನು ಅವರಿಗೆ, ಅವರು ಕಲಿಸುತ್ತಿ[...]
ಶಾಲಾ ಬೋರ್ಡಿನ ಅಧ್ಯಕ್ಷನ ಮಗಳೊಂದಿ[...]
ಪಲಾಯನ ಮಾಡಲು ಉ ಥಾಂಟ್ ಸಹಾ[...]
ಮಾಡಿದರಂತೆ.

ಆ ಮೇಲೆ ಇಬ್ಬರ ಸ್ನೇಹ ಎಷ್ಟು ಬಲಗೊಂ[...]
ತೆಂದರೆ ಉ ಥಾಂಟ್ ಉ ನು ರ ಇನ್ನೊಂ[...]
ಶರೀರ ಮಾತ್ರ ಎನ್ನುವಂತಾಯಿತು. ಇವರೊಡ[...]
ಅವರು ಫ್ಯಾಸಿಸ್ಟ್ ವಿರೋಧಿ ಜನತಾ ಸಂ[...]
ಯಲ್ಲೂ ಅನಂತರ ಸರಕಾರದಲ್ಲಿಯೂ ಇದ್ದ[...]
ಅವರ ಭಾಷಣಗಳನ್ನು ಇವರೇ ಬರೆಯುತ್ತಿದ್ದ[...]
ಅವರನ್ನು ಮೂಢರ ಮತ್ತು ಸ್ವಾರ್ಥಿಗಳ [...]
ಯಿಂದ ತಪ್ಪಿಸಲು ಯಾವಾಗಲೂ ಮೈಯೆ[...]
ಕಣ್ಣಾಗಿರುತ್ತಿದ್ದರು. ಆದರೆ ಎಲ್ಲಿಯೂ [...]
ಥಾಂಟರ ಹೆಸರೇ ಕೇಳಿಸುತ್ತಿರಲಿಲ್ಲ. ಹಿಂ[...]
ಳಿದೇ ತಮ್ಮ ಪ್ರಭಾವ ಬೀರುವವರು ಅವರು.

೧೯೫೨ ರಲ್ಲಿ ಉ ಥಾಂಟ್ ಬರ್ಮಾ ಬಿ[...]
ಸಂ. ರಾ. ಸಂಘದಲ್ಲಿ ತಮ್ಮ ದೇಶದ ಪ್ರತಿನಿ[...]

ಮಂಡಲದಲ್ಲೊಬ್ಬರಾಗಲು ನ್ಯೂಯಾರ್ಕಿಗೆ ಬಂದ ಮೇಲೆಯೆ ಅವರ ಸ್ವತಂತ್ರ ವ್ಯಕ್ತಿತ್ವ ಬೆಳಕಿಗೆ ಬಂದದ್ದು. ೧೯೫೭ ರಲ್ಲಿ ಅವರು ಬರ್ಮಾದ ಶಾಶ್ವತ ಪ್ರತಿನಿಧಿಯಾದರು. ಕಳೆದ ವರ್ಷ ಸಂಘದ ಅಭಿವೃದ್ಧಿ ನಿಧಿ, ಕಾಂಗೋ ಸಂಧಾನ ಸಮಿತಿ, ಅಲ್ಜೀರಿಯದ ಬಗ್ಗೆ ನಿರ್ಮಿಸಲಾದ ಆಫ್ರೋ-ಏಶಿಯನ್ ಸ್ಥಾಯಿ ಸಮಿತಿಗಳ ಅಧ್ಯಕ್ಷರಾಗಿದ್ದರು.

ಕಳೆದ ನವಂಬರದಲ್ಲಿ ಅಕಸ್ಮಾತ್ತಾಗಿ ಸಂ.ರಾ. ಪ್ರಧಾನ ಕಾರ್ಯದರ್ಶಿ ಪದ ತೆರವಾದ್ದರಿಂದ ಅದನ್ನು ತುಂಬಲು ಆರಿಸಲ್ಪಟ್ಟ ಮೇಲೆ ಮಾತ್ರ ಉ ಥಾಂಟರು ಸಾಮಾನ್ಯರಲ್ಲ ಎಂದು ತೋರಿಬಂದದ್ದು. ಅವರನ್ನು ಗಮನಿಸಿದವರೀಗ ಉ ಥಾಂಟರನ್ನು ವಿಚಲಿತಗೊಳಿಸಬಲ್ಲ ಸಂಗತಿಗಳು ಪ್ರಪಂಚದಲ್ಲಿ ಬಹಳವಿಲ್ಲವೆಂದು ಕಂಡುಕೊಂಡಿದ್ದಾರೆ. ಹಳೆಯ ಹಸ್ತಿದಂತದಿಂದ ಕಡೆದಂತೆ ಕಾಣುವ ನಯವೂ ಮಸುಕು ಕಂದು ಆದ ಅವರ ಮುಖದಲ್ಲಿ ಶಾಂತ ವರ್ಚಸ್ಸಿದೆ. ಬೆಲೆ ಬಾಳುವ ಪಾಶ್ಚಾತ್ಯ ಉಡುಪು ಧರಿಸಿದ್ದರೂ ಅವರು ಧ್ಯಾನಶೀಲ ಬುದ್ಧನಂತೆ ಪ್ರಭಾವ ಬೀರುತ್ತಾರೆ.

ಬೌದ್ಧ ಧರ್ಮದ ಗಾಢವಾದ ಪ್ರಭಾವ ಅವರ ಮೇಲಾಗಿದ್ದರೂ ಅವರ ಮಿತ್ರ ಉ ನುರಂತೆ ಉ ಥಾಂಟರಲ್ಲಿ ಆಗಾಗ್ಗೆ ಸಂನ್ಯಾಸದ ಹಂಬಲ ಉಕ್ಕೇರುವುದಿಲ್ಲ. ಅವರ ಸ್ವಭಾವ ಉತ್ತೇಜಿತವಲ್ಲವಾದ್ದರಿಂದ ಅದಕ್ಕೆ ಇಂಥ ಪಲಾಯನದ ಅಗತ್ಯ ಬೀಳುವುದಿಲ್ಲ. ಅವರು ನಿರಂತರವಾಗಿ ಚುರೂಟು ಸೇದುತ್ತಾರೆ. ಕಾಕ್‌ಟೇಲ್ ಪಾರ್ಟಿಗಳಲ್ಲಿ ಭಾಗ ವಹಿಸುತ್ತಾರೆ. ಆತ್ಮೀಯವಾಗಿ ಮಾತಾಡುತ್ತಾರೆ. ನ್ಯೂಯಾರ್ಕಿನಲ್ಲಿ ಅವರ ಬಿಡಾರ ಸುಸಜ್ಜಿತ ಸುರುಚಿ ಪೂರ್ಣವಾಗಿದೆ. ಅವರು ಹೆಂಡತಿ, ಇಪ್ಪತ್ತೆರಡರ ಒಬ್ಬ ಮಗಳು, ಹತ್ತೊಂಬತ್ತರ ಒಬ್ಬ ಮಗನೊಂದಿಗೆ ಸುಖ ಸಂಸಾರಿಕ ಜೀವನ ನಡೆಸುತ್ತಿದ್ದಾರೆ.

ಬರ್ಮೀಯರೆಲ್ಲರೂ ವಿನಯವಂತರು ಎಂದು ಅವರು ತಮ್ಮ ವಿನೀತ ಭಾವದ ಕಾರಣ ಹೇಳತ್ತಾರಾದರೂ ಉ ಥಾಂಟರ ವಿನಯವನ್ನು ದೌರ್ಬಲ್ಯವೆಂದು ಅರ್ಥ ಮಾಡಿಕೊಂಡವರು ಈಗು ತಮ್ಮ ತಪ್ಪನ್ನು ಅರಿಯತೊಡಗುವಂತಾಗಿದೆ ಕಾಂಗೋ ವಿಷಯದಲ್ಲಿ ಅವರ ನಿರ್ಭಯತೆ ನಿರ್ದಾಕ್ಷಿಣ್ಯಗಳು ಪೂರ್ತಿ ಪ್ರತೀತಿಗೆ ಬಂದಿವೆ. ಬರ್ಮಾದಲ್ಲಿ ಅವರು ಕಂಡುಂಡದ್ದು ಕಾಂಗೋದಲ್ಲಿ ಅವರಿಗೆ ಬಲ ಕೊಟ್ಟಿದೆ. ರಾಜಕೀಯ ಕೊಲೆಯೆ? ಉ ಥಾಂಟ್ ಅದಕ್ಕೆ ಹೆದರುವುದಿಲ್ಲ. ಹೆಚ್ಚುಕಡಿಮೆ ಇಡೀ ಮಂತ್ರಿಮಂಡಲವೇ ಕೊಲೆಯಾದದ್ದನ್ನವರು ಕಣ್ಣಾರೆ ಕಂಡರೂ ಪ್ರಚಾರ ಸಚಿವರಾಗಿದ್ದ ಅವರ ತಲೆ ಉಳಿದಿತ್ತು. ಗುಡ್ಡಗಾಡಿನವರ ದಂಗೆಗಳು, ಪ್ರತ್ಯೇಕತಾವಾದಿ ಅಂತರ್ಯುದ್ಧ, ಕಮ್ಯುನಿಸ್ಟರ ಬಂಡಾಯ—ಎಲ್ಲವುಗಳ ಮುಖವನ್ನೂ ತಮ್ಮ ದೇಶದಲ್ಲವರು ಪ್ರತ್ಯಕ್ಷ ಕಂಡು ತಮ್ಮ ನರಗಳನ್ನು ಉಕ್ಕಿನವಾಗಿ ಮಾಡಿಕೊಂಡಿದ್ದಾರೆ.

ಕೆಲ ಬಿಳಿಯರ ಸಹಾಯದಿಂದ ಬರ್ಮಾದಲ್ಲಿ ಬಂಡೆದ್ದ ಕರೆನ್ನರನ್ನು ಮಟ್ಟ ಹಾಕಲು ನೆರವಾದ ಅವರಿಗೆ ಬಿಳಿಯರ ಬೆಂಬಲ ಪಡೆದ ಶೋಂಬೆಯವರ ಬಂಡುಗಾರಿಕೆ ಗಾಬರಿಯುಂಟು ಮಾಡಿಲ್ಲ.

ಅವರು ಈಗಾಗಲೇ ಕರಿಯ ಆಫ್ರಿಕದಲ್ಲಿ ಬಿಳಿಯರ ಸತ್ತೆಯನ್ನುಳಿಸಬಯಸುವ ಒಳಸಂಚುಗಾರರಿಗೆ ಸ್ಪಷ್ಟೋಕ್ತಿಯನ್ನಾಡಿದ್ದಾರೆ. ಕಟಾಂಗಾದ ಮೋಶೆ ಶೋಂಬೆಯವರಿಗೆ ಸಂ. ರಾ. ಸಂಘದ ವಿರುದ್ಧ ಸಹಾಯ ನೀಡುತ್ತಿರುವ ರೊಡೇಶಿಯದ ಬಿಳಿಯ ಪ್ರಧಾನಿ ಸರ್ ರಾಯ್ ವೆಲೆನ್‌ಸ್ಕಿಯವರು ತಾವೇನೂ ಹಾಗೆ ಮಾಡುತ್ತಿಲ್ಲವೆಂದಾಗ ಹಾಗಾದರೆ ರೊಡೇಶಿಯ—ಕಟಾಂಗಾ ಗಡಿಗೆ ಸಂ. ರಾ. ನಿರೀಕ್ಷಕರನ್ನು ಕಳಿಸೋಣ ಎಂದು ಸೂಚಿಸಿ ಉ ಥಾಂಟ್‌ರು ವೆಲೆನ್‌ಸ್ಕಿಯವರನ್ನು ಪೇಚಿನಲ್ಲಿ ಹಾಕಿದರು. ಅಂಗೋಲದಲ್ಲಿ ಪೋರ್ಚುಗೀಸರು ತಾವು ಅತ್ಯಾಚಾರ ಕೈಕೊಂಡಿಲ್ಲವೆಂದಾಗ ಅಲ್ಲಿಗೂ ನಿರೀಕ್ಷಕರನ್ನು ಕಳಿಸುವ ಸೂಚನೆ ಮಾಡಿ ಪೋರ್ಚುಗೀಸರ ಸುಳ್ಳು ಸಾಧನೆಯನ್ನು ಬೆಳಕಿಗೊಡ್ಡಿದರು.

ಆದರೂ ಅವರು ಉದ್ರೇಕವಾದಿಗಳಲ್ಲ. ಅಮೇರಿಕನ್ನರಿಗೆ ಅವರು ಶಾಂತವಾಗಿ ತಮ್ಮಂಥ ತಟಸ್ಥ ರಾಷ್ಟ್ರಗಳ ನಿಲುಮೆಯನ್ನು ವಿವರಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಕಮ್ಯೂನಿಜಂ ಮೇಲೆ ತಮಗೂ ಪ್ರೀತಿಯಿಲ್ಲ. ಆದರೆ ಅದನ್ನು ಈ ಲೋಕದಿಂದ ಒರೆಸಿ ಒಗೆಯಲೂ ಸಾಧ್ಯವಿಲ್ಲ. ಕಮ್ಯುನಿಸ್ಟ್ ಮತ್ತು ಕಮ್ಯುನಿಸ್ಟೇತರರು ಸಹಜೀವನ ಮಾಡಲು ಸಾಧ್ಯವಿಲ್ಲವೆಂಬುದು ಬರಿ ಭ್ರಮೆ. ಕ್ರೈಸ್ತರೂ ಮುಸ್ಲಿಮರೂ ಆರಂಭದಲ್ಲಿ ಈ ಪ್ರಪಂಚದಲ್ಲಿ ತಾವಿಬ್ಬರೂ ಸಹಜೀವನ ಮಾಡಲು ಸಾಧ್ಯವಿಲ್ಲೆಂದೇ ಬಗೆದಿದ್ದರು. ಶತಮಾನಗಳ ಯುದ್ಧದ ನಂತರ ಅದು ಸಾಧ್ಯವಿದೆಯೆಂದವರಿಗೆ ತಿಳಿಯಿತು. ಅದೇ ಪಾಠವನ್ನು ಕಲಿಯಲು ಮತ್ತೆ ನಾವು ರಕ್ತ ಹರಿಸಬೇಕೆ? ಎಂದು ಉ ಥಾಂಟ್ ಕೇಳುತ್ತಾರೆ.

ಒಂದು ರೀತಿಯಲ್ಲಿ ಉ ಥಾಂಟ್ ಅವರು ಜಗತ್ತಿನ ಬದಲಾಗುತ್ತಿರುವ ರಾಜಕೀಯ ಸಮತೋಲದ ಪ್ರತಿನಿಧಿಯಾಗಿದ್ದಾರೆ. ಹೆಚ್ಚು ಹೆಚ್ಚು ಏಶಿಯನ್ ಆಫ್ರಿಕನ್ ರಾಷ್ಟ್ರಗಳು ಸ್ವತಂತ್ರವಾಗಿ ಸಂ. ರಾ. ಸಂಘದ ಸದಸ್ಯತ್ವ ಪಡೆಯುತ್ತಿವೆ. ಯೌರೋಪ್ಯ ರಾಷ್ಟ್ರಗಳು ಅಲ್ಲೀಗ ತಮ್ಮಿಚ್ಛೆಯಂತೆ ನಿರ್ಣಯಗಳನ್ನು ಹೇರುವ ಸ್ಥಿತಿಯಲ್ಲಿಲ್ಲ. ಉ ಥಾಂಟ್‌ರು ಪ್ರಧಾನ ಕಾರ್ಯದರ್ಶಿ ಪದಕ್ಕೇರಿರುವುದು ಈ ಬದಲಾದ ಪರಿಸ್ಥಿತಿಯಲ್ಲಿ ಸರಿಯಾದ್ದೇ. ಆದರೆ ಪ್ರಬಲ ಪಾಶ್ಚಾತ್ಯರಿಗೆ ಈ ಬದಲಾವಣೆ ಅಷ್ಟು ರುಚಿಸುತ್ತಿಲ್ಲ. ಅವರು ಸಂ ರಾ ಸಂಘವನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಸಾಧ್ಯವಾಗದಿದ್ದರೆ ಅದನ್ನು ಹಿಡಿದು ಹಾಕಲು ಇಲ್ಲವೆ ಧಿಕ್ಕರಿಸಲು ಸಿದ್ಧರಾಗುವ ಲಕ್ಷಣವಿದೆ. ಉ ಥಾಂಟ್‌ರು ಈ ಸಂಭವ ಬಾರದಂತೆ, ಆದರೆ ಆಫ್ರೋ ಏಶಿಯನ್ನರ ಹಿತ ಅಲಕ್ಷಿಸಲ್ಪಡದಂತೆ ಸಂ. ರಾ. ಸಂಘದ ನೀತಿಗಳನ್ನು ರೂಪಿಸುವುದರಲ್ಲಿ ಯಶಸ್ವಿಯಾಗುವರೇ ಎಂದು ನೋಡಬೇಕು. *



ಬಾಲ್ಯ ಹಾಗೂ ರಹಸ್ಯಗಳೆರಡೂ ಬಹಳ ದಿನ ಉಳಿಯಲಾರವು.

—ವಂದ ಮನೇಕರ

ಉತ್ಸಾಹವೆಂಬ ಕನಸನ್ನು ಕೇವಲ ಎಚ್ಚತ್ತಿರುವವ ಮಾತ್ರ ನೋಡಬಲ್ಲ.

— ನೆಥ್ಯೂ

ಪುಸ್ತಕ ವಿಭಾಗ



# ಚಾಫೇಕರ ಬಂಧುಗಳ ಬಲಿದಾನ

ಶ್ರೀನಿವಾಸ ಹಾವನೂರ

T.K.RAO

# ಚಾಫೇಕರ ಬಂಧುಗಳ ಬಲಿದಾನ

ಭಾರತದ ಸ್ವಾತಂತ್ರ್ಯ ಸ್ವಾಭಿಮಾನಗಳಿಗಾಗಿ ರಕ್ತಪಾತ ಮಾಡಿ ತಮ್ಮ ಪ್ರಾಣವನ್ನು ಬಲಿ ನೀಡಿದ ಅಸಂಖ್ಯ ಭಾರತಪುತ್ರರಲ್ಲಿ ಚಾಫೇಕರ ಬಂಧುಗಳದೇ ಒಂದು ವಿಶೇಷ. ಅದೆಂದರೆ ಸನಾತನ ಧರ್ಮದಲ್ಲಿದ್ದ ಅವರ ಅತೀವ ಶ್ರದ್ಧೆ. ಆ ಶ್ರದ್ಧೆಯೇ ಅವರನ್ನು ಬ್ರಿಟಿಶರ ವಿರುದ್ಧ ಬಂಡೇಳಲು ಪ್ರೇರಿಸಿತು. ಸನಾತನ ಧರ್ಮವನ್ನು 'ಹಾಳುಗೆಡುಹ'ಬೇಕೆನ್ನುವ ದೇಶೀಯರ ಮೇಲೆಯೂ ಅವರು ಸಿಡಿದೆದ್ದು ಅಂತಹರನ್ನೂ ಶಿಕ್ಷಿಸಿದರು! ಕೊನೆಗೆ ಈ ಕಾರ್ಯದಲ್ಲಿ ಉದ್ಯುಕ್ತನಾಗಿದ್ದ ರ್‍ಯಾಂಡ್ ಎಂಬ ಪುಣೆಯ ಬ್ರಿಟಿಶ್ ಅಧಿಕಾರಿಯನ್ನು ತುಂಬಿದ ಬೀದಿಯಲ್ಲಿ ಗುಂಡಿಕ್ಕಿ ಕೊಂದರು. ತಾವು ಮಾಡಿದ ಕಾರ್ಯವನ್ನು ಎದೆತಟ್ಟಿ ಹೇಳಿಕೊಂಡು, ಕೃತಕೃತ್ಯತೆಯ ಭಾವನೆಯಿಂದ ಹದಿನೇಳರಿಂದ ಇಪ್ಪತ್ತೇಳರ ಎಳೆಗ ತಾರುಣ್ಯದಲ್ಲೇ ಸಾವನ್ನು ಅಪ್ಪಿ (೧೮೯೮-೯೯) ಹುತಾತ್ಮರಾದರು.

ದಾಮೋದರ, ಬಾಳಕೃಷ್ಣ ಮತ್ತು ವಾಸುದೇವ ಇದುವೆ ಆ ಮೂವರು ಸೋದರರ ಹೆಸರು. ಹಿರಿಯವನಾದ ದಾಮೋದರನು ಯೋಗ್ಯತೆಯ ದೃಷ್ಟಿಯಿಂದಲೂ ಹಿರಿಯವನಾಗಿದ್ದನು. ಅವನಿಗೂ ಬಾಳಕೃಷ್ಣನಿಗೂ ಒಂದೆರಡು ವರ್ಷಗಳ ವಯಸ್ಸಿನ ಅಂತರವಷ್ಟೇ ಇದ್ದುದರಿಂದ ಇಬ್ಬರೂ ಕೂಡಿಯೇ ಇರುತ್ತಿದ್ದರು. ವಾಸುದೇವನು ಮಾತ್ರ ದಾಮೋದರನಿಗಿಂತ ಎಂಟು ವರ್ಷ ಚಿಕ್ಕವನಿದ್ದನು.

ಚಾಫೇಕರ ಮನೆತನದ ಮೂಲಸ್ಥಳವು ಪುಣೆಯ ಹತ್ತಿರದ ಚಿಂಚವಡ ಎಂಬ ಹಳ್ಳಿ. ತಂದೆಯಾದ ಹರಿಭಾವು ತಕ್ಕಮಟ್ಟಿಗೆ ಇಂಗ್ಲೀಷ್ ಶಿಕ್ಷಣವನ್ನು ಹೊಂದಿ ಒಂದು ಒಳ್ಳೆಯ ಸರಕಾರೀ ನೌಕರಿಯನ್ನು ಸಂಪಾದಿಸಿ 'ಸುಖ'ವಾಗಿ ಇದ್ದರೂ ಸ್ವತಂತ್ರ ವೃತ್ತಿಯೇ ಮೇಲೆಂದು ಮುಂದೆ ಅದಕ್ಕೆ ರಾಜೀನಾಮೆ ಇತ್ತು ಕೀರ್ತನಕಾರರಾದರು. ಈ ಸ್ವತಂತ್ರ ವೃತ್ತಿಯನ್ನು ಕೈಕೊಳ್ಳಲಿಕ್ಕೆ ಅವರ ತಂದೆಯೇ ಪ್ರೋತ್ಸಾಹಿಸಿದರೆಂಬ ಮಾತಿನಿಂದ ಸ್ವಾತಂತ್ರ್ಯದಾಹ, ಸ್ವಾಭಿಮಾನೀ ಸ್ವಭಾವ ವಂಶಗತವಾಗಿ ಈ ಸೋದರರಲ್ಲಿಯೂ ಇಳಿದುಬಂದಿತ್ತೆಂದು ಹೇಳಬಹುದು.

ಹರಿಭಾವು ತನ್ನ ಎಳೆಯ ಮಕ್ಕಳನ್ನೂ ಕೀರ್ತನೆಗಾಗಿ ಹಾರ್ಮೋನಿಯಮ್, ಸ್ವರಮಂಡಲ, ತಾಳಗಳ ವಾದನದಲ್ಲಿ ತರಬೇತುಗೊಳಿಸಿದನು. ಈ ಸೋದರರು ಬಾಲ್ಯದಿಂದಲೇ ತಮ್ಮ ತಂದೆಯೊಂದಿಗೆ ಊರೂರನ್ನು ತಿರುಗಬೇಕಾಯಿತು. ಈ ಕೀರ್ತನೆಗಳಲ್ಲಿಯ ಪುರಾಣಕಥೆಗಳ ಶ್ರವಣ ಮನನಗಳಿಂದ ಸೋದರರಲ್ಲಿ ದೈವಭಕ್ತಿಯ ನೆಲೆಗಟ್ಟು ಎಳೆಯ ವಯಸ್ಸಿನಲ್ಲಿಯೆ ಚೆನ್ನಾಗಿ ಊರಿತು. ಕೀರ್ತನಯಾತ್ರೆಯಿಂದಾಗಿ, ಪುಣ್ಯಕ್ಷೇತ್ರಗಳ, ಸಾಧುಜನರ, ಪಂಡಿತ ವರ್ಗದವರ ದರ್ಶನ ಲಭಿಸಿತು. ಸನಾತನ ಧರ್ಮದಲ್ಲಿ ಅವರ ಶ್ರದ್ಧೆ ಬಲಗೊಂಡಿತು. ಸುಶ್ರಾವ್ಯವಾಗಿ ಹಾಡುವುದಲ್ಲದೆ ಆಶುಕವಿತ್ವ ರಚನೆಯಲ್ಲಿಯೂ ಅವರು ಸಾಮರ್ಥ್ಯವನ್ನು ಪಡೆಯುವಂತಾಯಿತು.

ಸ್ಥಾಯಿಯಾಗಿ ಒಂದೆಡೆ ನಿಲ್ಲದಿದ್ದುದರಿಂದಾಗಿ ಚಾಫೇಕರರಿಗೆ ಸಾಕಷ್ಟು ಇಂಗ್ಲೀಷ್ ಶಾಲೆಯ ಶಿಕ್ಷಣ ದೊರೆಯದೇ ಹೋಯಿತು. ತಂದೆ ಇಂಗ್ಲೀಷನ್ನು ಮನೆಯಲ್ಲಿಯೇ ಹೇಳಿಕೊಟ್ಟರು. ಆದರೆ ಇಂಗ್ಲೀಷನ್ನು ಕಲಿಯುವುದೆಂದರೆಯೇ ಅವರಿಗೆ ತಿರಸ್ಕಾರ! ದಾಮೋದರನ ಅಭಿಪ್ರಾಯದಲ್ಲಿ 'ಅದನ್ನು ಯಾರಾದರೂ ಕಲಿಯಲಿಕ್ಕೆ ಆರಂಭಿಸಿದ ಕೂಡಲೇ, ಹಿರಿಯರನ್ನೂ ಆರ್ಯಧರ್ಮ ಹಾಗೂ ಅದರ ನಿಯಮಗಳನ್ನೂ ಅತ್ಯಂತ ತುಚ್ಛವಾಗಿ

ಕಾಣತೊಡಗುತ್ತಾರೆ!'

ಅವರಿಗೆ ಈ ಮ್ಲೇಚ್ಛ ಇಂಗ್ಲೀಷರನ್ನು ಎದುರಿಸಬೇಕಾದರೆ ನಾವು ನಮ್ಮ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕು, ಜನರನ್ನು ಕೂಡಿಸಬೇಕು, ಧರ್ಮರಕ್ಷಣೆಗಾಗಿ ಟೊಂಕ ಕಟ್ಟಬೇಕು ಎನಿಸಿತು.

ಸ್ವಂತದ ದೇಹಬಲವನ್ನು ಬೆಳಸಿಕೊಳ್ಳವುದಕ್ಕೆಂದು ದಾಮೋದರ, ಬಾಳಕೃಷ್ಣ ಇಬ್ಬರೂ ವ್ಯಾಯಾಮವನ್ನು ಸುರು ಮಾಡಿದರು. ತಾಸುಗಟ್ಟಲೆ ಅದರಲ್ಲಿ ನಿರತರಾಗುತ್ತಿದ್ದುದನ್ನು ಕಂಡು ಹರಿಭಾವು ಬೈಯುತ್ತಿದ್ದರು. ಹೀಗೆ ತಂದೆ ಪ್ರತಿಬಂಧಿಸಿದ ಕೂಡಲೇ ಅವರೂ ಸೂರ್ಯ ನಮಸ್ಕಾರವನ್ನು ಆರಂಭಿಸಿದರು. ಈ ಧಾರ್ಮಿಕ ಕಾರ್ಯಕ್ಕೇನು ಅಡ್ಡಿ ಬರಲಾರದಲ್ಲವೆ! ಒಂದೇ ಪೆಟ್ಟಿಗೆ ೧,೨೦೦ ನಮಸ್ಕಾರಗಳನ್ನು ಹಾಕಬಲ್ಲವರಾಗಿದ್ದರು! ಪಹಿಲವಾನರ ಹತ್ತಿರ ಹೋಗಿ ಕುಸ್ತಿಯ ಹಿಡಿತಗಳನ್ನೂ ಕಲಿತರು. ದಾಮೋದರನು ಓಟದಲ್ಲಿ ಹೆಚ್ಚು ಪ್ರವೀಣನಾದನು. ದಿನವೂ ಪುಣೆಯಿಂದ ಕರ್ಕಿಯ ವರೆಗೆ, ಎಲ್ಲಿಯೂ ನಿಲ್ಲದೆ ಓಡುತ್ತ ಹೋಗಿ ಒಂದು ತಾಸಿನಲ್ಲಿ ಮರಳಿ ಮನೆಗೆ ಬರುತ್ತಿದ್ದನು. ಒಮ್ಮೆ ಹರಿಭಾವು ಒಂದು ವ್ರತಮಂತ್ರದ ಪುಸ್ತಕವನ್ನು ಚಿಂಚವಡದಲ್ಲಿ ಮರೆತು ಬಂದು ಮಿಡುಕಾಡತೊಡಗಿದಾಗ, ದಾಮೋದರನು ಇಲ್ಲೇ ಯಾರಲ್ಲಾದರೂ ಇಸಿದು ತಂದುಕೊಡುವೆನೆಂದು ಹೇಳಿ, ನಸುಕಿನಲ್ಲಿಯೆ ಚಿಂಚಪಡಕ್ಕೆ ಹೊರಟು ೧೧ ಮೈಲು ಓಡಿ, ಅಷ್ಟೇ ಅಂತರವನ್ನು ಪುನಃ ಕ್ರಮಿಸಿ, ಸೂರ್ಯೋದಯದ ಹೊತ್ತಿಗೆ ತಂದೆಗೆ ಅದನ್ನು ಮುಟ್ಟಿಸಿದನಂತೆ!

ಹರೆಯದ ಹುಮ್ಮಸ್ಸಿನಲ್ಲಿ ಚಾಫೇಕರ ಬಂಧುಗಳಿಗೆ ಸೈನ್ಯವನ್ನು ಸೇರಿ, ಯುದ್ಧಮಾಡಬೇಕೆನ್ನುವ ಮನಸ್ಸಾಯಿತು! ಬ್ರಿಟಿಶ್ ಸೈನ್ಯಕ್ಕಿಂತ, ಯಾವುದೊಂದು ಸಂಸ್ಥಾನೀ ಸೈನ್ಯವನ್ನು ಸೇರಬೇಕೆಂದು ಯೋಚಿಸಿದರು. ಕುರುಂದವಾಡದ ರಾಜನಿಗೆ ಕಾಗದ ಬರೆದರೆ ನಕಾರಾತ್ಮಕವಾದ ಉತ್ತರ ಬಂತು. ಆಗ ಬಾಳಕೃಷ್ಣನು ಆಗಿನ ಕೊಲ್ಹಾಪುರದ ಮಹಾರಾಜರ ಭೆಟ್ಟಿಯನ್ನು ಹೇಗೋ ದೊರಕಿಸಿಕೊಂಡು, ತಮ್ಮ ಬಿನ್ನಹವನ್ನು ಮುಂದಿಟ್ಟಾಗ, ಅವರ ಕಾರಭಾರಿಯಿಂದ "ನೀನು ಪುಣೇರಿ ಬ್ರಾಹ್ಮಣ! ಸೈನಿಕನಾಗಿ ಏನು ಮಾಡೀಯೆ!" ಎಂಬ ಉತ್ತರ ಬಂತಂತೆ.

ಒಂದು ಸಲ, ಕೀರ್ತನಕಾರ್ಯಾವಸರದಲ್ಲಿ ಧಾರ ಸಂಸ್ಥಾನಕ್ಕೆ ಹೋದಾಗ, ಯಾರು ಯಾರನ್ನೋ ಹಿಡಿದು, ಬಂದೂಕು ಹಾರಿಸುವುದನ್ನು ಇವರು ರೂಢಿ ಮಾಡಿಕೊಂಡರು. ಸೈನ್ಯವನ್ನು ಸೇರದಿದ್ದರೂ ಆ ರೀತಿಯ ಸಮವಸ್ತ್ರ ಧರಿಸಿ ಫೋಟೊ ತೆಗೆಸಿಕೊಂಡರು!

ಸೈನ್ಯ ಸೇರ್ಪಡೆಯು ಸದ್ಯ ಸಾಧ್ಯವಿಲ್ಲವೆಂದರೆ, ಶಸ್ತ್ರಾಸ್ತ್ರಗಳನ್ನಾದರೂ ಸಂಗ್ರಹಿಸೋಣ ಎಂಬ ವಿಚಾರ ಅವರಲ್ಲಿ ಹೊಕ್ಕಿತು. ತಂದೆಯೊಡನೆ ಒಮ್ಮೆ ನಿಜಾಮನ ಸೀಮೆಯಲ್ಲಿ ಸಂಚರಿಸುತ್ತಿದ್ದಾಗ ಸಣ್ಣಪುಟ್ಟ ಆಯುಧಗಳನ್ನು ಕಲೆಹಾಕತೊಡಗಿದರು. ಬೆತ್ತದಲ್ಲಿ ಕಾಣಿಸದಂತೆ ಕೂಡಿಸಲಾದ ಖಡ್ಗವೊಂದನ್ನು ಮದ್ದಿನ ಅಂಗಡಿಯಲ್ಲಿ ಮಾರಾಟಕ್ಕಿಟ್ಟಿದ್ದರು. ಅದರ ಬೆಲೆಯಾದ ಐದು ರೂಪಾಯಿಗಳನ್ನು ಹೇಗೂ ಕಷ್ಟದಿಂದ ಕೂಡಿಸಿ ಅದನ್ನು ಕೊಂಡುಕೊಂಡರು. ಅಲ್ಲಿಯೆ ಐದು ನಳಿಗೆಯ ಒಂದು ಒಳ್ಳೆಯ ರಿವಾಲ್ವರನ್ನೂ ಕಂಡು ಇವರ ಬಾಯಲ್ಲಿ ನೀರೂರಿತು. ಅದನ್ನು ಕೊಳ್ಳಲು ಹಣವೆಲ್ಲಿ? ಕೊನೆಗೆ ಸತ್ಕಾರ್ಯಕ್ಕಾಗಿ ಅನ್ಯಾಯ ಮಾಡಿದರೆ ಅಡ್ಡಿಯಿಲ್ಲವೆಂಬುದಕ್ಕೆ ಶಾಸ್ತ್ರಾಧಾರಗಳನ್ನು ಹುಡುಕಿಕೊಂಡು, ರಿವಾಲ್ವರನ್ನು ಆ ಅಂಗಡಿಯಿಂದಲೇ ಎಬ್ಬಿಸಿದರು!

ಅನಂತರ ತಮ್ಮದೇ ಖಾಸಗೀ ಸೈನ್ಯ ಕಟ್ಟಲು ಚಾಫೇಕರ ಬಂಧುಗಳು ಅಣಿಯಾದರು. ಎಳೆಯ ಯುವಕರನ್ನು ಕಲೆಹಾಕಿ ಊರ ಹೊರಗಿನ ಪರ್ವತಿ, ಚತುಃಶೃಂಗಿ ಮುಂತಾದ ಬೆಟ್ಟಗಳ ಅಡಿಯಲ್ಲಿ ಅವರಿಂದ ಡ್ರಿಲ್, ವ್ಯಾಯಾಮ, ಭಾಷಣ, ಪ್ರಾರ್ಥನೆಗಳನ್ನೂ ಮಿಲಿಟರಿ ದಾಳಿ ಪ್ರತಿದಾಳಿಗಳನ್ನೂ ಮಾಡಿಸತೊಡಗಿದರು. ಅದಕ್ಕೆ ಒಬ್ಬ ಆರಾಧನಾ ದೇವತೆ ಬೇಕೆಂದು, ಮಾರುತಿಯಂತೆ ಕಾಣುವ ಕಲ್ಲಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಅದನ್ನು 'ಗಫನ್ಯಾ ಮಾರುತಿ' ಎಂದು ಕರೆದರು. ಈ ಹುಡುಗರ ಸಂಖ್ಯೆ ೧೫೦ ರಷ್ಟಾಗಲು ಊರಲ್ಲಿ ಗುಲ್ಲು ಹಬ್ಬಿತು. ಅದು ಬೇಡವಾಗಿ, ಚಾಫೇಕರ ಬಂಧುಗಳು ಖಾಜಗೀವಾಲೆ ಎಂಬ

ವನ ದೊಡ್ಡ ವಾಡೆಯ ಬಯಲು ಜಾಗವನ್ನು ಹಿಡಿದು, ತಮ್ಮ 'ರಾಷ್ಟ್ರ ಹಿತೇಚ್ಛುಮಂಡಳಿ'ಯನ್ನು ಅಲ್ಲಿ ಸಾಗಿಸಿದರು.

ಇವರ ಹತ್ತಿರ ಶಸ್ತ್ರಾಸ್ತ್ರಗಳಿದ್ದುದರ ಸುಳಿವು ಪೋಲೀಸರಿಗೆ ಹತ್ತಿದ್ದಿತು. ಅಂತೆಯೇ ಕೆಲವೇ ನಿಷ್ಠಾವಂತ ಸದಸ್ಯರ ಸಮಕ್ಷಮ ಚಾಫೇಕರರು ಅವನ್ನು ಮುಚ್ಚಿ ಇಟ್ಟರು. ಮತ್ತು ಮಂಡಳಿಯನ್ನು ಹಠಾತ್ತನೆ ನಿಲ್ಲಿಸಿಬಿಟ್ಟರು. ತಮ್ಮ ಧ್ಯೇಯಕ್ಕೆ ಅನುಗುಣವಾಗಿ ಯಾವುದಾದರೂ ಕಾರ್ಯ ಕೈಕೊಳ್ಳಬೇಕಾದಾಗ, ಭುಸಕುಟೆ, ಸಾಠೆ, ಮ. ವಿ. ರಾನಡೆ, ನೀಲಕಂಠ ದ್ರವಿಡ ಮುಂತಾದ ಕೆಲವೇ ಮಿತ್ರರ ಸಹಾಯವನ್ನು ಪಡೆಯಬೇಕೆಂದು ಗೊತ್ತು ಮಾಡಿಕೊಂಡರು. ಅಂತರಂಗ ಮಿತ್ರರ ಈ ತಂಡಕ್ಕೆ 'ಆರ್ಯ ಧರ್ಮ ಪ್ರತಿಬಂಧ ನಿವಾರಕ ಮಂಡಳಿ' ಎಂಬ ಹೊಸ ಹೆಸರನ್ನು ಇಡಲಾಯಿತು.

ಈ ಮಂಡಳಿಯ ಚಟುವಟಿಕೆಗಳು ತುಸು ತಲೆತಿರುಕತನದವೇ ಇದ್ದವು. ಹಿಂದೂ ಧರ್ಮದ ಸುಧಾರಕ ವರ್ಗದವರನ್ನು ಕಂಡರೆ ಅವರ ಮೈಯುರಿಯುತ್ತಿತ್ತು. ೧೮೯೫ ರಲ್ಲಿ ಪುಣೆಯ ಕಾಂಗ್ರೆಸ್ಸಿನ ಅಂಗವಾಗಿ ಕೂಡಬೇಕಿದ್ದ ಸುಧಾರಕ ಪರಿಷತ್ತಿನ ಮಂಟಪವನ್ನೇ ಅಗ್ನಿಗಾಹುತಿ ಕೊಡುವ ಅವರ ಹಂಚಿಕೆ ಆ ಪರಿಷತ್ತು ಕೂಡದಿದ್ದುದರಿಂದ ಮಾತ್ರ ತಪ್ಪಿತು. ಈ ಪರಿಷತ್ತಿನ ಅಧ್ಯಕ್ಷರಾಗಲಿದ್ದ ಮಹಾದೇವ ಗೋವಿಂದ ರಾನಡೆಯವರು ಮುಂದೆ ಚಾಫೇಕರ ಬಂಧುಗಳನ್ನು ಗಲ್ಲಿಗೇರಿಸಿದ ನ್ಯಾಯಾಧೀಶರಾಗಲಿದ್ದು ಒಂದು ದೈವಯೋಗವೇ. ಇನ್ನೊಬ್ಬ ಸಮಾಜ ಸುಧಾರಕ ಅಗರಕರರು ಸ್ಥಾಪಿಸಿದ 'ಸುಧಾರಕ' ಪತ್ರಿಕೆಯ ಸಂಪಾದಕರಾದ ಪಟವರ್ಧನ ಮತ್ತು ಕುಲಕರ್ಣಿಯವರನ್ನು ಅವರು ಒಂದು ರಾತ್ರಿ ಚೆನ್ನಾಗಿ ಥಳಿಸಿ, ನೋಡುತ್ತಿದ್ದ ಜನರ ಮುಂದೆಯೆ ಪಾರಾಗಿ ಹೋದರು.

ಅನಂತರ ಮೂಕ ಪರಿಪತ್ರ ಹೊರಡಿಸಿ ಹೀಗೆ ಎಚ್ಚರವಿತ್ತರು: "ಎಲ್ಲ ಸುಧಾರಕರಿಗೆ ಎಚ್ಚರಿಕೆ! ಆರ್ಯ ಧರ್ಮಕ್ಕೆ ಪ್ರತಿಬಂಧಕವಾಗಿರುವುದನ್ನು ನಿವಾರಿಸುವ ದೃಷ್ಟಿಯಿಂದ ನಾವು ನಿಮ್ಮ ಸಂಸ್ಥೆಗೆ ಪ್ರತಿಯಾದ ಒಂದು ಕೂಟವನ್ನು ಸ್ಥಾಪಿಸಿದ್ದು ಅದಕ್ಕಾಗಿ ನಾವು ಜೀವವನ್ನು ಕೊಡಲೂ ಪ್ರಸಂಗ ಬಂದರೆ ಇನ್ನೊಬ್ಬರ ಜೀವವನ್ನು ತೆಗೆಯಲೂ ಬದ್ಧಕಂಕಣರಾಗಿದ್ದೇವೆ. ನಮ್ಮ ಧರ್ಮದ ವಿಷಯದಲ್ಲಿ ಇದಕ್ಕೂ ಹೆಚ್ಚಿನ ಉಪದ್ವ್ಯಾಪವನ್ನು ನೀವು ಮಾಡಿದ್ದಾದರೆ ಜೋಕೆ! ಅದರ ದುಷ್ಪರಿಣಾಮವನ್ನು ಅನುಭೋಗಿಸಬೇಕಾದೀತು!"

ಚಾಫೇಕರರಿಗೆ ಸೈನಿಕರಾಗಿ ಯೋಧರಂತೆ ಹೋರಾಡುವ ಚಪಲ ಇನ್ನೂ ಹೋಗಿರಲೇ ಇಲ್ಲ. ಸಂಸ್ಥಾನಿಕರಿಂದ ಅವಮಾನಿತರಾಗಿ ಕೊನೆಗೆ ಬ್ರಿಟಿಶ್ ಸೈನ್ಯ ಭರತಿಗಾಗಿಯೇ ಅರ್ಜಿ ಹಾಕಿದರು. ಕಮಾಂಡರ್-ಇನ್-ಚೀಫ್‌ವರೆಗೂ ಅರ್ಜಿ ಹೋದವು. ಆದರೆ ಇವರ ಆಯ್ಕೆಯಾಗಲಿಲ್ಲ. ಸೀಖ, ಮರಾಠಾ ಮೊದಲಾದ ಜಾತೀಯ ರೇಜಿಮೆಂಟುಗಳ ಹಾಗೆ ಬ್ರಾಹ್ಮಣ ರೆಜಿಮೆಂಟನ್ನು ರಚಿಸಲು ೪೦೦ ಬ್ರಾಹ್ಮಣ ತರುಣರನ್ನು ಭರ್ತಿ ಮಾಡಿ ಕೊಡುವುದಾಗಿ ಕೂಡ ಅವರು ಸೇನಾಪತಿಗಳಿಗೆ 'ಆಹ್ವಾನ' ಕೊಟ್ಟರು. ಅದಕ್ಕೂ ನಕಾರವೇ ಬಂತೆಂದು ಹೇಳಬೇಕಿಲ್ಲ.

ಇದೇ ವೇಳೆಗೆ ಅಥವಾ ಇದಕ್ಕೂ ಸ್ವಲ್ಪ ಮುಂಚೆ ಎನ್ನಬಹುದು— ಚಾಫೇಕರರಿಗೆ ಟಿಳಕರ ವ್ಯಕ್ತಿಗತ ಪರಿಚಯವಾಯಿತು. ಲೋಕಮಾನ್ಯರು ಪ್ರಚಾರದಲ್ಲಿ ತಂದ ಶಿವಾಜಿ ಹಾಗೂ ಗಣೇಶ ಉತ್ಸವಗಳಲ್ಲಿ ಇವರು ಭಾಗ ವಹಿಸುತ್ತಿದ್ದರು. ವೀರಾವೇಶದ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. ಇವರ ಕೆಲವು ಕವನಗಳು 'ಕೇಸರಿ'ಯಲ್ಲಿಯೂ ಪ್ರಕಟವಾದುವು.

೧೮೯೬ ರ ಮಳೆಗಾಲದಲ್ಲಿ ಯಥಾಪ್ರಕಾರ, ಚಾಫೇಕರ ಮಂಡಳಿಯು ಕೀರ್ತನ ಕಾರ್ಯಕ್ರಮಕ್ಕಾಗಿ ಮುಂಬಯಿಗೆ ಹೊರಟಿತು. ಆಗಿನ ಗಣಪತಿ-ಮೇಳಗಳಿಗೆ ಹಾಡಲು ಅನುಕೂಲವಾಗುವಂತೆ ದೇಶಭಕ್ತಿಯ ಹಿಂದೂ ಧರ್ಮಾಭಿಮಾನದ ಹಲವಾರು ಹಾಡುಗಳನ್ನು ರಚಿಸಿ ಮುದ್ರಿಸಬೇಕೆಂದು ದಾಮೋದರನಿಗೆ ತೋರಿತು. ಅದರಂತೆ ಆ ಪುಸ್ತಕ ಪ್ರಕಟವೂ ಆಯಿತು. ಆದರೆ ಆ ಪದ್ಯಸಂಗ್ರಹ ಪೋಲೀಸರ ಕಣ್ಣಿಗೆ ಬೀಳುತ್ತಲೂ ಪ್ರತಿಗಳೆಲ್ಲವನ್ನೂ ಜಪ್ತಿ ಮಾಡ

ಲಾಯಿತು.

ಮುಂಬಯಿಯಲ್ಲಿ ಇದ್ದಾಗ ಅವರಿಗೆ ಧರ್ಮಾಭಿಮಾನವನ್ನು ಪ್ರದರ್ಶಿಸುವ ಇನ್ನೊಂದು ಪ್ರಸಂಗ ಒದಗಿ ಬಂತು. ವಿಲ್ಸನ್ ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದ ವೇಲಣಕರ ಎಂಬ ಬ್ರಾಹ್ಮಣ ವಿದ್ವಾಂಸರು ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದ್ದಾರೆಂದು ತಿಳಿಯುತ್ತಲೂ ಚಾಫೇಕರ ಬಂಧುಗಳ ಪಿತ್ತ ನೆತ್ತಿಗೇರಿತು. ಅವರನ್ನು ಶಿಕ್ಷಿಸಬೇಕೆಂದು ಒಂದು ಉಪಾಯ ಹೂಡಿದರು. ಇಂಗ್ಲೀಷ್ ಚೆನ್ನಾಗಿ ಗೊತ್ತಿದ್ದ ಭುಸಕುಟೆಯನ್ನು ಕರಸಿದರು. ಅವನು ಕ್ರಿಶ್ಚನ್ ಧರ್ಮವನ್ನು ಸೇರುವ ಅಪೇಕ್ಷೆಯುಳ್ಳವನಾಗಿದ್ದೇನೆಂದು ಹೇಳುತ್ತ, ನಾಲ್ಕೈದು ಬಾರಿ ಬಾಳಕೃಷ್ಣನೊಡನೆ ವೇಲಣಕರರನ್ನು ಕಂಡು ಮಾತನಾಡಿದನು. ಅವರಿಗೂ ತರುಣರಿಬ್ಬರು ಕ್ರೈಸ್ತ ಧರ್ಮಕ್ಕೆ ದೊರೆತರಲ್ಲ ಎಂಬ ಉತ್ಸಾಹ. ಒಂದು ವಾರ ಕಳೆದ ಮೇಲೆ ಒಂದು ರಾತ್ರಿ, ಬಾಳಕೃಷ್ಣ ಉರ್ಫ್ ಬಳವಂತರಾಯನ ಸೋದರ ಮಾವನೆಂದು ದಾಮೋದರನೂ ವೇಷ ಮರೆಸಿ ಅವರನ್ನು ಸೇರಿಕೊಂಡನು. ಅವನು ತನ್ನ ಅಳಿಯ ಹಾಗೂ ಅವನ ಗೆಳೆಯನನ್ನು ಈ ಹೊಸ ಹುಚ್ಚಿನಿಂದ ವಿಮುಖರನ್ನಾಗಿ ಮಾಡಬೇಕೆನ್ನುವವನಂತೆ, ವೇಲಣಕರರೊಂದಿಗೆ ಹಿಂದೂ-ಕ್ರಿಶ್ಚನ್ ಧರ್ಮಗಳ ಬಗ್ಗೆ ಚರ್ಚೆ ನಡೆಸಿದನು! ಅಂದು ಕೃಷ್ಣಜನ್ಮಾಷ್ಟಮಿ. ಕೃಷ್ಣನ ಬಗ್ಗೆಯೂ ಮಾತು ಬಂದಿತು. ವೇಲಣಕರರು ಪ್ರಾಸಂಗಿಕವಾಗಿ ಕೃಷ್ಣಾವತಾರದ ಕುಂದುಗಳನ್ನು ಎತ್ತಿದರು. ಸರಿ, ಅಲ್ಲಿಗೇ ಮಾತು ನಿಲ್ಲಿಸಿ ಚಾಫೇಕರ ಬಂಧುಗಳು ತಾವು ಮರೆಮಾಚಿ ತಂದಿದ್ದ ಕಬ್ಬಿಣದ ಸಣ್ಣ ಸಲಾಕೆಗಳಿಂದ ಅವರನ್ನು ಬಲವಾಗಿ ಥಳಿಸಿದವರೇ ಅಲ್ಲಿಂದ ಕಾಲುಕಿತ್ತರು!

ಮರುದಿನ ಎಲ್ಲ ಕಡೆಗೂ ಸುದ್ದಿ ಹಬ್ಬಿತು. ಪೋಲೀಸರ ತನಿಖೆ ಸುರುವಾಯಿತು. ಹೆಚ್ಚೆಚ್ಚು ಜನರನ್ನು ಹಿಡಿದು, ಪ್ರೊ. ವೇಲಣಕರರ ಮುಂದೆ ತಂದು ನಿಲ್ಲಿಸತೊಡಗಿದರು. ಚಾಫೇಕರ ಬಂಧುಗಳು, "ನೀವು ಸ್ವಧರ್ಮವನ್ನು ತ್ಯಜಿಸಿ ಅನ್ಯ ಧರ್ಮವನ್ನು ಸ್ವೀಕರಿಸಿ ನಮ್ಮ ಮರಾಠಾ ಜಾತಿಗೆ ಕಲಂಕವನ್ನು ಹಚ್ಚಿದಿರಾದ ಕಾರಣ ನಿಮಗೆ ಅಲ್ಪ ಶಿಕ್ಷೆಯನ್ನು ಕೊಟ್ಟು ಕೊಲ್ಹಾಪುರಕ್ಕೆ ಹಿಂತಿರುಗಿದ್ದೇವೆ" ಎಂಬ ಪತ್ರವನ್ನು ಪ್ರೊ. ವೇಲಣಕರರಿಗೆ ಉದ್ದೇಶಿಸಿ ಬರೆದು, ಅದನ್ನು ಪುಣೆಯ ರೇಲ್ವೆ ಅಂಚೆಯ ಪೆಟ್ಟಿಗೆಯಲ್ಲಿ ಹಾಕಿದರು. ತಾವು ಕೊಲ್ಹಾಪುರದವರೆಂಬ ಮಾತನ್ನು ಅವರು ವೇಲಣಕರರಿಗೆ ಹೇಳಿಯೇ ಇದ್ದರು. ಪರಿಣಾಮವಾಗಿ, ಪೋಲೀಸರು ಮುಂಬಯಿಯಲ್ಲಿ ಹೆಚ್ಚಿನ ಶೋಧಕ್ಕೆ ಹೋಗುವುದು ನಿಂತಿತು.

ನಮ್ಮ ಸ್ವಾತಂತ್ರ್ಯವನ್ನು ಅಪಹರಣ ಮಾಡಿ ನಮ್ಮ ಧರ್ಮವನ್ನು ಹಾಳು ಮಾಡುವುದಕ್ಕೆಯೆ ಹೊರಟಿದ್ದ ಇಂಗ್ಲೀಷರ ಮೇಲೆ ಏನಾದರೂ ಮಾಡಿ ಸೇಡು ತೀರಿಸಿಕೊಳ್ಳಬೇಕೆಂಬ ಭಾವನೆ ಪ್ರಬಲವಾಯಿತು– ಚಾಫೇಕರ ಬಂಧುಗಳಲ್ಲಿ. ಇದಕ್ಕೆ ಇಡೀ ಬ್ರಿಟಿಶ್ ಸತ್ತೆಯ ಪ್ರತಿನಿಧಿಯಾಗಿರುವ ವಿಕ್ಟೋರಿಯಾ ಮಹಾರಾಣಿಯನ್ನು ಅವಮಾನಗೊಳಿಸುವುದಕ್ಕಿಂತ ಹೆಚ್ಚಿನ ಕ್ರಮ ಬೇರೇನಿದ್ದೀತು? ಆದರೆ ಅವಳು ಹಿಂದುಸ್ಥಾನದಲ್ಲಿ ಇದ್ದಿಲ್ಲವಲ್ಲ. ಆಗ, ಫೋರ್ಟ್ ವಿಭಾಗದ ಒಂದು ದೊಡ್ಡ ಚೌಕಿನಲ್ಲಿ, ಅವಳ ದೊಡ್ಡ ಮೂರ್ತಿಯೊಂದು ಇದ್ದದ್ದು ಕಂಡುಬಂತು. ಅದನ್ನು ವಿರೂಪಗೊಳಿಸಿದ್ದಾದರೆ, ಇಡೀ ಬ್ರಿಟಿಶ್ ಸತ್ತೆಗೆ ಅಪಮಾನ ಮಾಡಿದಂತೆ ಎಂದು ನಿರ್ಧರಿಸಿದರು.

ಹಾಗಿದ್ದರೆ ಏನು ಮಾಡುವುದು? ಮೂರ್ತಿಯ ತಲೆಯನ್ನೆ ಸುತ್ತಿಗೆಯೇಟಿನಿಂದ ತುಂಡರಿಸೋಣವೆಂದರು. ಅದು ವೇಳೆ ಹಿಡಿಯುವ ಹಾಗೂ ಸುರಕ್ಷಿತವಲ್ಲದ ಕೆಲಸ. ಕೊನೆಗೆ ಮೂರ್ತಿಯ ಮುಖವನ್ನು ವಿದ್ರೂಪಗೊಳಿಸುವ ಸಿದ್ಧತೆಗೆ ತೊಡಗಿದರು. ಕಾಂದೇವಾಡಿಯಲ್ಲಿರುವ ವಾಗಳೆ ಎಂಬವರ ಮನೆಯಲ್ಲಿ ಹಳೆಯ ಚಪ್ಪಲಿಗಳನ್ನು ಹಾಕಿ ಇಟ್ಟ ಒಂದು ಬುಟ್ಟಿಯನ್ನು ಯಾವಾಗೋ ನೋಡಿದ್ದರು. ಅದನ್ನು ಸದ್ದಿಲ್ಲದೆ ಎಬ್ಬಿಸಿ ಕೆಲವು ಕುಳ್ಳು (ಬೆರಣಿ) ಗಳನ್ನೂ ಪೋಣಿಸಿ ಒಂದು ಸರವನ್ನು ಸಿದ್ಧಪಡಿಸಿದರು. ಪೇಟೆಗೆ ಹೋಗಿ ನಾಲ್ಕಾಣೆಯ ಡಾಂಬರನ್ನು ಕೊಂಡು ಅದರಲ್ಲಿ ಇನ್ನೂ ಕೆಲವು ಜಿಗುಟು ಪದಾರ್ಥಗಳನ್ನು ಸೇರಿಸಿ ಮಿಶ್ರಣ ಮಾಡಿ, ಸೈಕಲ್ಲಿನ ಟ್ಯೂಬಿನಲ್ಲಿ ತುಂಬಿದರು. ಹಿಂದಿನ ಕಾಲಕ್ಕೆ ಹಿಂದೂ ರಾಜರು

ವೈರಿಗಳ ಮೇಲೆ ದಂಡೆತ್ತಿ ಹೋಗುತ್ತಿದ್ದ ವಿಜಯದಶಮಿಯ ದಿನವೇ ಇಂಗ್ಲೀಷರ ಮೇಲೆ ಈ ಸಾಂಕೇತಿಕ ದಂಡಯಾತ್ರೆಗೆ ಅವರು ಹೊರಟರು.

ಬಾಲಕೃಷ್ಣ ಮತ್ತು ದಾಮೋದರರು ಮನೆಯಿಂದ ಹೊರಟಾಗ, ಮಧ್ಯರಾತ್ರಿ ದಾಟಿ ಎರಡು ಗಂಟೆಯಾಗಿತ್ತು. ಮೂರ್ತಿ ಇರುವ ಕಟಾಂಜನದ ಬಳಿಯಲ್ಲೇ ಒಬ್ಬ ಪೋಲೀಸ್ ಇರುತ್ತಿದ್ದ. ಅನತಿದೂರದಲ್ಲಿ ಪೋಲೀಸ್ ಠಾಣೆಯೂ ಇದ್ದಿತು. ಆದರೂ ಅವರ ನಿರ್ಧಾರ ಅಚಲವಾಗಿತ್ತು. ಬಾಳಕೃಷ್ಣನು ತನ್ನ 'ಪೂಜಾ' ಸಲಕರಣೆಗಳೊಂದಿಗೆ ಮೆಲ್ಲಗೆ ಹಿಂಬದಿಯಿಂದ ಬಂದು, ಕಟಾಂಜನದ ಒಳಕ್ಕೆ ಜಿಗಿದನು ಇತ್ತ ದಾಮೋದರನು ಕೈಯಲ್ಲಿ ಕಬ್ಬಿಣದ ಹಾರೆಯೊಂದನ್ನು ಹಿಡಿದುಕೊಂಡು ಬಳಿಯಲ್ಲಿಯ ಗಿಡದ ನೆರಳಲ್ಲಿ ನಿಂತಿದ್ದನು.

ಬಾಳಕೃಷ್ಣನು ಮೇಲೆ ಹತ್ತಿದನು. ಮೂರ್ತಿಯ ಹಿಂಬದಿಯಿಂದ ಬಂದು ಮೊದಲು ಚಪ್ಪಲಿಯ ಹಾರವನ್ನು ತೊಡಿಸಿದನು. ಆವಾಗ ತುಸು ಸಪ್ಪಳಾಯಿತು. ಪುಣ್ಯಕ್ಕೆ ಯಾರಿಗೂ ಅದು ಕೇಳಿಸಲಿಲ್ಲ. ಸಾಲದ್ದಕ್ಕೆ ಒಬ್ಬ ದಾರಿಹೋಕನು ಮೆಲ್ಲಗೆ ನಡೆದುಬರುತ್ತಿದ್ದನು ಮೂರ್ತಿಯ ಕಡೆಗೆ ಸಹಜವಾಗಿ ನೋಡಿ, ಬಾಳಕೃಷ್ಣನನ್ನು ಕಂಡು ಗಲಾಟೆಯನ್ನೇನಾದರೂ ಮಾಡಿದ್ದರೆ ಅವನ ಅವತಾರ ಸಮಾಪ್ತಿಗೆ ದಾಮೋದರನು ಸಜ್ಜಾಗಿಯೇ ಇದ್ದನು. ಆದರೆ ಆ ಮನುಷ್ಯ ಇತ್ತ ಕಡೆಗೆ ಗಮನ ಕೊಡಲಿಲ್ಲ. ಅಲ್ಲಿಂದ ಬಾಳಕೃಷ್ಣನು ಡಾಂಬರನ್ನೂ ಸುರಿದು, ಮೆಲ್ಲಗೆ ಇಳಿದು ಬಂದು ಅಣ್ಣನನ್ನು ಕೂಡಿಕೊಂಡನು. ಮನೆಗೆ ಸದ್ದಿಲ್ಲದೆ ಮರಳಿ ಇತರರು ಏಳುವುದಕ್ಕೆ ಮುಂಚೆಯೇ ತಮ್ಮ ಹಾಸಿಗೆಯ ಮೇಲೆ ಯಥಾಸ್ಥಿತವಾಗಿ ಒರಗಿಕೊಂಡರು!

ಮರುದಿನ ಪರಿಸ್ಥಿತಿ ಏನಾಗಿದೆಯೋ ಎಂದು ನೋಡಲು ಇವರೂ ಹೋದಾಗ, ಅಲ್ಲಿ ನೂರಾರು ಜನ ನೆರೆದಿದ್ದರು. ಎಲ್ಲರಿಗೂ ಅದರಿಂದ ಒಂದು ಬಗೆಯ ಸಂತೋಷವಾಗಿದ್ದಿತೆಂಬುದನ್ನು ಕಂಡು ತಾವೂ ಅದರಲ್ಲಿ ಭಾಗಿಯಾದರು. ನೆರೆದವರೆಲ್ಲರೂ ಈ ಸಾಹಸ ಮಾಡಿದವರ ಕೈಚಳಕವನ್ನು ಮನವಾರೆ ಹೊಗಳುವವರೇ ಆಗಿದ್ದರು.

ಪೋಲೀಸರು ಹಾರವನ್ನೇನೋ ತೆಗೆದರು. ಆದರೆ ಎಷ್ಟು ಒರೆಸಿ ತೆಗೆದರೂ ಡಾಂಬರು ಹೋಗದಾಯಿತು! ಏನು ಮಾಡಿದರೂ ಡಾಂಬರಿನ ಕಪ್ಪು ಕಲೆ ಪೂರ್ಣ ಹೋಗಲೇ ಇಲ್ಲ. ಅದು ಹೋಗದಿದ್ದರೆ ರುಂಡವನ್ನೇ ತೆಗೆದುಬಿಟ್ಟು ಬೇರೊಂದು ರುಂಡವನ್ನು ಮಾಡಿಸಿ ಕೂಡ್ರಿಸಬೇಕು ಎಂಬ ವಿಚಾರವೂ ಅಧಿಕಾರಿಗಳಿಗೆ ಬಂದುಹೋಯಿತು. ಕೊನೆಗೆ ಗಜ್ಜರ್ ಎಂಬ ರಸಾಯನ ಶಾಸ್ತ್ರದ ಪ್ರೊಫೆಸರರು ಅದನ್ನು ಪೂರ್ಣ ಅಳಿಸುವುದಕ್ಕೆ ನೆರವಾದರು.

ಈ ವೇಳೆಗೆ ಮುಂಬೈಯಲ್ಲಿ ಪ್ಲೇಗು ಹಬ್ಬಿತು. ಜನ ಮುಂಬಯಿಯನ್ನು ಬಿಟ್ಟು ಬೇರೆ ಊರುಗಳಿಗೆ ಹೊರಟರು. ಆವಾಗಲೇ ಮೆಟ್ರಿಕ್ ಪರೀಕ್ಷೆಯ ದಿನಗಳು ಹತ್ತಿರವಾದವು. ಪಾಲಕರೂ ಶಾಲೆಗಳ ಮುಖ್ಯಾಧ್ಯಾಪಕರೂ ಪರೀಕ್ಷೆಯನ್ನು ಮುಂದೆ ಹಾಕಲು ಅಧಿಕಾರಿಗಳನ್ನು ಅದೆಷ್ಟೊಂದು ಕೇಳಿಕೊಂಡರೂ ಪ್ರಯೋಜನವಾಗಲಿಲ್ಲ.

ಮೆಟ್ರಿಕ್ ಪರೀಕ್ಷೆಯ ಸಲುವಾಗಿ, ಆಗಿನ ಕಾಲಕ್ಕೆ ಕುಲಾಬಾದ ಹತ್ತಿರದ ಬಯಲಲ್ಲಿ, ವಿಶಾಲವಾದ ಮಂಟಪವನ್ನು ಕಟ್ಟಿಸುತ್ತಿದ್ದರು. ಪರೀಕ್ಷೆ ಎರಡು ಮೂರು ದಿನವಿದೆಯೆನ್ನುವಷ್ಟರಲ್ಲಿ ಈ ಮಂಟಪವೂ ಸಿದ್ಧವಾಯಿತು. ಸಾವಿರಾರು ಕುರ್ಚಿಗಳು ಬಂದು ಬಿದ್ದವು. ಈ ಉನ್ಮತ್ತ ಅಧಿಕಾರಿಗಳ ದರ್ಪ ನಿಲ್ಲಿಸಿ ಪರೀಕ್ಷೆಯು ನಡೆಯದಂತೆ ಮಾಡುವುದಾದರೆ ಒಂದೇ ಉಪಾಯ ಚಾಫೇಕರ ಬಂಧುಗಳಿಗೆ ತೋಚಿತು- ಅದೆಂದರೆ ಮಂಟಪವನ್ನೇ ಅಗ್ನಿನಾರಾಯಣನಿಗೆ ಅರ್ಪಿಸುವುದು!

ಈ ಕೆಲಸಕ್ಕೆ ಯಾರೂ ಇಲ್ಲದ ಮಧ್ಯರಾತ್ರಿಯನ್ನು ಗೊತ್ತುಪಡಿಸದೇ, ತುಸು ಮುಂಚೆ, ೯ ಗಂಟೆಯ ವೇಳೆಯನ್ನು ಆಯ್ದುಕೊಂಡರು. ಕೆಲವು ಕೆಲಸಗಾರರು ಇನ್ನೂ ಕೆಲಸದಲ್ಲಿ ಇದ್ದಾಗಲೇ, ಮಂಟಪದ ಹಿಂಬದಿಗೆ ಬಂದರು. ಚಿಮಣಿ ಎಣ್ಣೆಯಲ್ಲಿ ಅದ್ದಿ ತಂದಿದ್ದ ಧೋತರವನ್ನು ಉದ್ದವಾಗಿ ಮಾಡಿ, ಅದನ್ನು ಮಂಟಪದ ಹೊರಗಿನ ಆವರಣದ ಅರಿವೆಗೆ ಕಟ್ಟಿದರು. ಧೋತರದ

ಇನ್ನೊಂದು ತುದಿಯನ್ನು ತುಸು ಅಂತರದ ವರೆಗೆ ಎಳೆದುಕೊಂಡು ಬಂದು ಅಲ್ಲಿ ಅದಕ್ಕೆ ಕಡ್ಡಿ ಗೀರಿದರು.

ಅವರು ಮನೆ ಸೇರುವಷ್ಟರಲ್ಲಿ ಅಗ್ನಿಯ ಜ್ವಾಲೆಗಳು ಎಲ್ಲ ಕಡೆಗೆ ಪಸರಿಸಿ ಇಡೀ ಮಂಟಪವನ್ನೆ ಆಹುತಿ ತೆಗೆದುಕೊಳ್ಳುತ್ತಲಿದ್ದವು. ಅದರಿಂದ ಹೊರಟ ಹೊಗೆ ಆಕಾಶವನ್ನೆಲ್ಲ ವ್ಯಾಪಿಸಿ ದಕ್ಷಿಣ ಮುಂಬಯಿಯಲ್ಲೆಲ್ಲ ತನ್ನ ಛಾಯೆಯನ್ನು ಹರವಿದ್ದಿತು. "ಯಾರೇ ಈ ಕೆಲಸ ಮಾಡಿರಲಿ, ಒಳ್ಳೇದನ್ನೆ ಮಾಡಿದರು. ಚೆನ್ನಾಗಿಯೆ ಸರಕಾರಕ್ಕೆ ಬುದ್ಧಿ ಕಲಿಸಿದರು" ಎಂದು ಜನ ಹೇಳುವುದನ್ನು ಕೇಳಿ ಚಾಫೇಕರ ಬಂಧುಗಳ ಎದೆಯುಬ್ಬಿತು.

ಪ್ಲೇಗು ಪುಣೆಗೂ ಹಬ್ಬಿಕೊಂಡಿತು. ಪ್ಲೇಗಿನಂಥ ದೊಡ್ಡ ಪಿಡುಗು ಹಬ್ಬಿದೊಡನೆಯೇ ಅದನ್ನು ನಿವಾರಿಸುವ, ಆ ಬೇನೆ ತಾಗಿದ ಜನರನ್ನು ಬದುಕಿಸುವ ಪ್ರಯತ್ನ ಮಾಡುವುದು ಸರಕಾರದ ಕರ್ತವ್ಯ. ಆದರೆ ಆಗಿನ ಇಂಗ್ಲೀಷ್ ಸರಕಾರ ಪ್ಲೇಗ್ ನಿವಾರಣೆಯ ಹೆಸರಲ್ಲಿ ಕಾಟಾಚಾರದ ಉಪಾಯಗಳನ್ನು ಕೈಕೊಂಡಿತು. ಅವುಗಳಲ್ಲೆಲ್ಲ ಎದ್ದು ಕಾಣುವ ಅಂಶವೆಂದರೆ ಒಂದು ಪ್ಲೇಗ್ ನಿವಾರಕ ಮಂಡಲಿಯನ್ನು ನಿಯಮಿಸಿದ್ದು. ಅದರಲ್ಲಿ ಒಬ್ಬ ಡಾಕ್ಟರ್, ಒಬ್ಬಿಬ್ಬರು ಸೈನ್ಯಾಧಿಕಾರಿಗಳೂ ಇತರ ನಾಗರಿಕ ಅಧಿಕಾರಿಗಳೂ ಇದ್ದರು.

ಅವರ ಕೆಲಸವೆಂದರೆ, ಇಲಿಗಳಿಗಾಗಿ ಮನೆಮನೆಗಳನ್ನು ಶೋಧಿಸುವುದು; ಸತ್ತ ಇಲಿಗಳನ್ನು ಹೊರಹಾಕಿ ಮನೆಯನ್ನು ಸ್ವಚ್ಛಗೊಳಿಸುವುದು; ಬೇನೆ ಬಂದಿದ್ದವರನ್ನು ಊರ ಹೊರಗಿನ ಪ್ಲೇಗ್ ಆಸ್ಪತ್ರೆಗೆ ಸಾಗಿಸುವುದು ಇತ್ಯಾದಿ. ಈ ಕಮಿಟಿಯಲ್ಲಿ ಡಾ. ಜೋನ್ಸ್, ಕರ್ನಲ್ ಫಿಲಿಪ್ಸ್ ಮುಂತಾದ ಬಿಳಿಯರೇ ಇದ್ದು, ಅವರಿಗೆ ಮುಖ್ಯಸ್ಥನೆಂದು ರ್‍ಯಾಂಡ್ ಎಂಬವನನ್ನು ನಿಯಮಿಸಲಾಗಿದ್ದಿತು.

ಈ ಕಮಿಟಿಯು ತನ್ನ ಕರ್ತವ್ಯವನ್ನು ಸರಿಯಾಗಿ ನೆರವೇರಿಸಿದ್ದರೆ ಯಾವ ತೊಂದರೆಯೂ ಏಳುತ್ತಿರಲಿಲ್ಲ. ಆದರೆ ಇಲಿಗಳ ಪರಿಶೋಧನೆಯ ನೆವದಲ್ಲಿ ಅವರು ನಡೆಸುತ್ತಿದ್ದ ಕಾಯಕವೇ ಬೇರೆಯಾಗಿದ್ದಿತು. ಲೋಕಮಾನ್ಯ ಟಿಳಕರು ತಮ್ಮ ಪತ್ರಿಕೆಯಲ್ಲಿ ಅವರ ಕಾರ್ಯವನ್ನು ಕಟುವಾಗಿ ಟೀಕಿಸಿದರು. ರ್‍ಯಾಂಡ್ ಮತ್ತು ಅವನ ಹಸ್ತಕರ ದಬ್ಬಾಳಿಕೆಗೆ ಪುಣೆಯ ಜನ ಬಹುವಾಗಿ ರೋಸಿಗೊಂಡರು. ಎಲ್ಲ ಪತ್ರಿಕೆಗಳಲ್ಲೂ ಅವರ ಕಾರ್ಯದ ಖಂಡನೆ ನಡೆಯಿತು.

ಈ ಪ್ಲೇಗ್ ನಿವಾರಕ ಮಂಡಲಿಯವರು ಬೇನೆ ಬಿದ್ದವರನ್ನು ಬಲವಂತದಿಂದ ಎಳೆದು ಊರ ಹೊರಗಿನ ಆಸ್ಪತ್ರೆಯಲ್ಲಿ ಹಾಕುತ್ತಿದ್ದರು. ಅಲ್ಲಿ ಹಾಕುವುದೆಂದರೆ ಯಮಸದನಕ್ಕೆ ಖಂಡಿತವಾಗಿ ಹೋದಂತೆ ಎಂದು ಮೊದಲೇ ಹೌಹಾರಿದ ಜನ ಇನ್ನಷ್ಟು ಕಂಗೆಡುವಂತೆ ಅಲ್ಲಿಯ ಸ್ಥಿತಿ ಇದ್ದಿತು. ಅಲ್ಲದೆ, ಈ ಮಂಡಲಿಗೆ ಬೇಕಾದ ಮನೆಯನ್ನು ಬೇಕಾದಾಗ ಪ್ರವೇಶಿಸುವ ಅಧಿಕಾರವಿದ್ದಿತು. ಇವರು ಅದರ ದುರುಪಯೋಗ ಮಾಡಿಕೊಂಡು, ಬೀಗ ಹಾಕಿದ್ದ ಸಿರಿವಂತರ ಮನೆಗಳ ಬೀಗಗಳನ್ನು ಮುರಿದು, ಒಳಗಿನ ಬೆಲೆಯುಳ್ಳ ಪದಾರ್ಥಗಳನ್ನು ಬಹಿರಂಗವಾಗಿಯೆ ಕೊಳ್ಳೆ ಹೊಡೆದರು. ಅದಕ್ಕೂ ಮಿಗಿಲಾಗಿ ಮ್ಲೇಂಛರಾದ ತಾವು ಬಲಾತ್ಕಾರದಿಂದ ಅಡಿಗೆ ಮನೆ, ದೇವರ ಮನೆಗಳಲ್ಲಿಯೂ ಹೊಕ್ಕರು. ಕೆಲವು ಕಡೆ ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಲೂ ಹಿಂದೆಗೆಯಲಿಲ್ಲ.

ಈ ದಬ್ಬಾಳಿಕೆಯನ್ನೆಲ್ಲ ಕೇಳಿ ಕಣ್ಣಾರೆ ಕಂಡ ಚಾಫೇಕರರ ಮನಃಸ್ಥಿತಿ ಏನಾಗಿರಬೇಡ! ಅದೂ, ದೇವರ ಗುಡಿಗಳ, ಬ್ರಾಹ್ಮಣರ ಮನೆಗಳ ಒಳಗೇ ನುಗ್ಗಿ ಅಪವಿತ್ರಗೊಳಿಸುವುದಕ್ಕೆ ಇವರಿಗೆ ಏನಧಿಕಾರ? ನಮ್ಮ ಸ್ತ್ರೀಯರ ಮಾನ ರಕ್ಷಣೆ ನಮ್ಮಿಂದ ಆಗದೇ ಹೋಗಬೇಕೆ?

ಬಾಳಕೃಷ್ಣ ಚಾಫೇಕರನು ಈ ವೇಳೆಗೆ ಒಂದು ಕವಿತೆಯನ್ನು 'ಕೇಸರಿ'ಯಲ್ಲಿ ಪ್ರಸಿದ್ಧಿಸಿದನು. ಅದರಲ್ಲಿ ಅವನು "ತಾಯಿ, ತಂಗಿಯರ ಮೇಲೆ ಕೈಮಾಡುವವರನ್ನು ಶಿಕ್ಷಿಸಲಾಗದ ಹೇಡಿಗಳು ಬದುಕಿದ್ದು ಏನು ಪ್ರಯೋಜನ? ಶಿವಾಜಿಯ ಕಾಲದ ಯುವಕನಾಗಿದ್ದರೆ ಕತ್ತಿ ಹಿರಿದು ನಿಲ್ಲುತ್ತಿದ್ದ" ಎಂದು ಸೂಚಿಸಿದ್ದನು.

ಒಮ್ಮೆ ಟಿಳಕರನ್ನು ಕಂಡು ಚಾಫೇಕರ

ಬಂಧುಗಳು ಈ ಭಂಡರನ್ನೆಲ್ಲ ಹೇಗೆ ನಿರ್ನಾಮ ಮಾಡಬೇಕು ಎಂದಾಗ ಟಿಳಕರು, "ಇತರರಿಗೆ ಹೇಡಿಗಳು ಎಂದು ಕರೆದು ಏನು ಪ್ರಯೋಜನ? ನೀವೇ ಕೈಲಾಗದವರು. ಇಲ್ಲವಾದರೆ ಪುಣೆಯಲ್ಲಿ ರ್‍ಯಾಂಡನ ದಬ್ಬಾಳಿಕೆ ಇಷ್ಟು ದರ್ಪದಿಂದ ನಡೆಯುತ್ತಿದ್ದಿಲ್ಲ" ಎಂದರು.

ಹೀಗೆ ಆಡುವುದರಲ್ಲಿ ಲೋಕಮಾನ್ಯರ ಉದ್ದೇಶ ರ್‍ಯಾಂಡನನ್ನು ನಿರ್ನಾಮ ಮಾಡಬೇಕೆಂದೇನೂ ಇದ್ದಿರಲಿಲ್ಲ. ಆದರೆ ಚಾಫೇಕರ ಬಂಧುಗಳು ರ್‍ಯಾಂಡನನ್ನು ಮುಗಿಸಿಬಿಡುವ ಬಹು ದಿನದ ವಿಚಾರವನ್ನು ತಮ್ಮ ಮನದಲ್ಲಿ ಸ್ಥಿರಗೊಳಿಸಿಕೊಂಡರು.

ರ್‍ಯಾಂಡ್ ಪುಣೆಗೆ ಬಂದು ಈ ಹೊಸ ಅಧಿಕಾರವನ್ನು ಪಡೆಯುವುದಕ್ಕೆ ಮುಂಚೆಯೇ ಚಾಫೇಕರ ಬಂಧುಗಳ ಗಮನವನ್ನು ಸೆಳೆದಿದ್ದನು. ಈ ಮುಂಚೆ ಮುಸಲ್ಮಾನ ಮಸೀದೆಗಳಿರುವ ಬೀದಿಯಲ್ಲಿ ವಾದ್ಯಗಳನ್ನು ಬಾರಿಸುವ ವಿಚಾರವಾಗಿ ವಾಯಿ, ಸಾತಾರಗಳಲ್ಲಿ ಕೆಲವು ಹಿಂದೂಗಳ ಚಳವಳಿ ಎದ್ದಾಗ, ರ್‍ಯಾಂಡ್ ಅವರನ್ನು ಬಂಧಿಸಿ ಶಿಕ್ಷೆಗೆ ಗುರಿಪಡಿಸಿದ್ದನು. ಈ ರ್‍ಯಾಂಡ್ ಯಾರು? ನೋಡಲಿಕ್ಕೆ ಹೇಗಿದ್ದಾನೆ? ಅವನ ಓಡಾಟದ ಕ್ರಮ ಎಲ್ಲೆಲ್ಲಿ? ಅವನು ಇರುವ ಸ್ಥಳ ಯಾವುದು? ಇಂತಿವೆಲ್ಲ ವಿಷಯವಾಗಿ ಅವನು ಬಂದು ಅಧಿಕಾರ ವಹಿಸುವುದಕ್ಕೆ ಮುಂಚೆಯೇ ಚಾಫೇಕರ ಬಂಧುಗಳು ತಲೆಕೆಡಿಸಿಕೊಂಡಿದ್ದರು.

ಕೊನೆಗೊಮ್ಮೆ ರ್‍ಯಾಂಡ್ ಎಪ್ರಿಲಿನಲ್ಲಿ ಬಂದನು. ಬುಧವಾರ ಚೌಕದಿಂದ ಅವನ ಪಾರ್ಟಿಯು ಮನೆಮನೆಗಳ ತನಿಖೆಗೆ ಹೊರಟ ಮೊದಲ ದಿನ ಚಾಫೇಕರ ಬಂಧುಗಳೂ ಅಲ್ಲಿದ್ದರು. ದಿನ ಸರಿದಂತೆ ಅವನ ಹಾಗೂ ಅವನ ಸಂಗಡಿಗರ ಅತ್ಯಾಚಾರಗಳು ಅವರ ಕಣ್ಣಿಗೆ, ಕಿವಿಗ ಬೀಳುತ್ತಲೇ ಇದ್ದುವು.

ಪ್ಲೇಗಿನ ಮೂಲಕ ಚಾಫೇಕರ ಕುಟುಂಬದ ಹಿರಿಯನು ಪುಣೆಯನ್ನು ಬಿಟ್ಟು ಕರ್ಕಿಯಲ್ಲಿರುವ ವಿಶೇಷ ಪರಿಚಯದ ಪರಾಂಜಪೆ ಎಂಬವರಲ್ಲಿಗೆ ಇವರು ಇರಲು ಹೋದನು.

ಕರ್ಕಿಯಲ್ಲಿ ಇಂದಿಗೂ ಮದ್ದು ಗುಂಡುಗಳ ತಯಾರಿಕೆಯ ಕೆಲಸ ನಡೆಯುತ್ತದೆಯಷ್ಟೆ. ಚಾಫೇಕರ ಬಂಧುಗಳ ಶಸ್ತ್ರಾಸ್ತ್ರ ಸಂಗ್ರಹದಲ್ಲಿ ಕೆಲವು ಬಂದೂಕುಗಳಿದ್ದುವು, ಮದ್ದು ಇರಲಿಲ್ಲ. ಆಗ ಆ ಮದ್ದಿನ ಕಾರಖಾನೆಗೆ ಹೋಗಿಬರುವ ಆರ್. ಜೋನ್ಸ್ ಎಂಬ ಮಿಶನರಿಯನ್ನು ಹಿಡಿದು, ಆಟಕ್ಕಾಗಿ ಎಂಬಂತೆ ಅವನಿಂದ ಖಾಲಿ ಕಾಡತೂಸುಗಳನ್ನು ದೊರಕಿಸಿದರು. ಕಚರೇ ಎಂಬ ಸಿರಿವಂತನ ಮನೆಯ ತೋಟಿಗನ ಹತ್ತಿರ ಚರೆ (ಗನ್ ಪೌಡರ್) ಇದೆಯೆಂದು ಭುಸಕುಟೆ ಹೇಗೊ ಪತ್ತೆ ಹಚ್ಚಿದ್ದನು ಮೂವರೂ ಆ ತೋಟಿಗನ ಹತ್ತಿರ ಹೋಗಿ 'ದೋಸ್ತಿ' ಮಾಡಿ, ಅವನಿಗೆ ಗೊತ್ತಾಗದಂತೆ ಚರೆಯ ಪೊಟ್ಟಣವನ್ನು ಹಾರಿಸಿದರು. (ಅಲ್ಲಿಯೆ ಇದ್ದ ಒಂದು ಹಳೆಯ ತುಬಾಕಿಯನ್ನೂ ಹೊತ್ತರು). ರಾನಡೆ ತಾನೇ ಗುಂಡುಗಳನ್ನು ತಯಾರಿಸಿದನು.

ತನ್ನ ಮಕ್ಕಳು ಹಗಲು, ರಾತ್ರಿಯೆನ್ನದೆ ಮನೆಬಿಟ್ಟು ಹೊರ ತಿರುಗಾಡುವುದು, ಪುಣೆವರೆಗೆ ಎಡತಾಕುವುದು ಇವುಗಳಿಂದಾಗಿ ಹರಿಭಾವುಗೆ ಸಂಶಯ ಬಂದಿತು. ಆದರೆ ಮಕ್ಕಳು ತಮ್ಮ ಗುಟ್ಟು ಬಿಟ್ಟುಕೊಡಲಿಲ್ಲ. ಅವರು ತಮ್ಮ ಹೆಂಡಂದಿರಿಗೂ ಹೇಳಿರಲಿಲ್ಲ. ಇದರಿಂದ ಬೇಸತ್ತ ಹರಿಭಾವು ಕರ್ಕಿಯಿಂದ ಪುಣೆಗೆ ಹಿಂತಿರುಗಿದನು. ಚಾಫೇಕರ ಬಂಧುಗಳಿಗೆ ಆದರಿಂದ ಅನುಕೂಲವೇ ಆಯಿತೆಂದು ಬೇರೆ ಹೇಳಬೇಕಾಗಿಲ್ಲ.

ಈಗ ದಾಮೋದರ ಯೋಜನೆಯನ್ನು ಸಿದ್ಧಗೊಳಿಸಿದ. ತಮ್ಮಂದಿರಾದ ಬಾಳಕೃಷ್ಣ, ವಾಸುದೇವರಂತೂ ಸರಿಯೇ; ಉಳಿದವರಲ್ಲಿ ಭುಸಕುಟೆ ಈಗಾಗಲೇ ನೆರವಾದವನಿದ್ದ. ಅದರಂತೆಯೇ ಮಹಾದೇವ ವಿನಾಯಕ ರಾನಡೆ ದಾಮೋದರನಿಗೆ ಬಲಗೈಯಂತೆ ಇದ್ದನೆನ್ನಬಹುದು. ಮತ್ತಿಬ್ಬರೆಂದರೆ ವಿನಾಯಕ ಆಪ್ಟೆ ಮತ್ತು ಖಂಡೇರಾವ ಸಾಠೆ. ರ್‍ಯಾಂಡ್‌ನ ಚಲನವಲನಗಳನ್ನು ಪತ್ತೆ ಹಚ್ಚುವುದೇ ಇವರಿಬ್ಬರ ಮುಖ್ಯ ಕೆಲಸವಾಗಿದ್ದಿತು.

ರ್‍ಯಾಂಡ್ ವಾಸಿಸುತ್ತಿದ್ದುದು ಪೂನಾ ಹಾಟೆಲಿನಲ್ಲಿ. ಅವನಿಗೆ ಹೆಂಡತಿ ಮಕ್ಕಳು ಇರಲಿಲ್ಲ. ಪೋಸ್ಟ್‌ಮನ್ನನ ಮುಖಾಂತರ ಅವನ

ಕೋಣೆಯ ನಂಬರನ್ನು ಪತ್ತೆ ಹಚ್ಚಿ, ರ್‍ಯಾಂಡ್ ಇಲ್ಲದಾಗ ಒಮ್ಮೆ ಹೋಗಿ ನೋಡಿಕೊಂಡು ಬಂದರು. ರ್‍ಯಾಂಡ್ ಕುದುರೆ ಗಾಡಿಯಲ್ಲಿ ಕುಳಿತು ಓಡಾಡುತ್ತಿದ್ದ. ಅವನ ಸಾರಥಿಯೊಂದಿಗೆ ಕಾಲು ಕೆದರಿ ಜಗಳ ತೆಗೆದು, ಆ ಸಾರೋಟಿನ ಬಣ್ಣ, ಚಕ್ರ, ಕುದುರೆಗಳು, ಕುದುರೆಗಳಿಗೆ ಹೂಡಿದ ಲಗಾಮುಗಳು ಇವುಗಳನ್ನು ನೋಡಿಟ್ಟು ಕೊಂಡರು.

ಅವನ ವಿಷಯದಲ್ಲಿ ಪಾಳತಿ ಇಟ್ಟಿದ್ದರೂ ಚಾಫೇಕರರ ಕೆಲಸ ಸುಲಭವಾಗಿರಲಿಲ್ಲ. ರ್‍ಯಾಂಡನ ದಬ್ಬಾಳಿಕೆಗೆ ಬೇಸತ್ತು ಅವನನ್ನು ಕೊಲ್ಲುವ ಬೆದರಿಕೆಯನ್ನು ಈಗಾಗಲೇ ಒಬ್ಬಿಬ್ಬರು ಅವನಿಗೆ ಹಾಕಿದ್ದರು. ಕಾಶೀನಾಥ ಜಾಧವ ಎಂಬ ಕುಸ್ತಿಯ ಮಲ್ಲನು ಅವರಲ್ಲಿ ಅಗ್ರಗಣ್ಯ ನಾಗಿದ್ದನು. ಪರಿಣಾಮವೆಂದರೆ, ರ್‍ಯಾಂಡ್ ಯಾವಾಗಲೂ ಸವಾರರ ಜೊತೆಗೇ ಓಡಾಡುತ್ತಿದ್ದ. ರಾತ್ರಿ ೮-೯ ರ ಒಳಗಾಗಿ ತನ್ನ ಕೋಣೆಯನ್ನು ಸೇರುತ್ತಿದ್ದ.

ಮೇ ತಿಂಗಳ ಒಂದು ದಿನ ಫರಾಸಖಾನಾದ ಹತ್ತಿರವೇ ಬಂದೂಕನ್ನು ಹಿಡಿದು ಮರೆಯಲ್ಲಿ ಅವನಿಗಾಗಿ ಕಾಯ್ದರು. ಸುತ್ತಲೂ ಸವಾರರಿದ್ದರಿಂದೇ ಅಂದಾತ ಬದುಕಿದ. ಮತ್ತೊಮ್ಮೆ ದಾಮೋದರನು ಜಮಖಾನಾದ ಎತ್ತರದ ಗೋಡೆಯನ್ನೇರಿ, ಕೈಯಲ್ಲಿ ಕಬ್ಬಿಣದ ಸಲಾಕೆಯನ್ನು ಹಿಡಿದು, ರ್‍ಯಾಂಡನಿಗಾಗಿ ಕಾಯುತ್ತ ಕುಳಿತಾಗ ಪೋಲೀಸನೊಬ್ಬನ ಕಣ್ಣಿಗೆ ಬೀಳುತ್ತಲೂ ಅಲ್ಲಿಂದಲೇ ಜಗಿದು ಪಾರಾಗಬೇಕಾಯಿತು. ಅದೇ ರೀತಿ, ಚರ್ಚಿನ ಬಳಿ ಸಮಯ ಕಾಯ್ದದ್ದೂ ಹುಸಿಹೋಯಿತು.

ಈ ವೇಳೆಗೆ ಚಾಫೇಕರ ಬಂಧುಗಳಿಗೆ ದೊಡ್ಡ ಆಘಾತವೊಂದು ಒದಗಿತು. ಅದೆಂದರೆ ಅವರ ಆಪ್ತ ಮಿತ್ರನೂ ಮಹಾ ಕರ್ತೃತ್ವಶಾಲಿಯೂ ಆದ ಭುಸಕುಟೆ ಪ್ಲೇಗ್ ಬೇನೆಗೆ ಬಲಿಯಾದುದು. ಭುಸಕುಟೆಯ ತಂದೆ-ತಾಯಿಗಳಿಗೆ ಚಾಫೇಕರ ಬಂಧುಗಳ ಹಾಗೂ ತಮ್ಮ ಮಗನ ಸ್ನೇಹದ ವಿಚಾರ ತಿಳಿದಿರಲೇ ಇಲ್ಲ. ಹೀಗಾಗಿ ತಮ್ಮ ಮಿತ್ರನ ಅಂತ್ಯದ ಗಳಿಗೆಯಲ್ಲಿ ಅವರು ಇರಲೂ ಇಲ್ಲ. ಎರಡು ದಿನದ ನಂತರ ಈ ದುರ್ವಾರ್ತಾ ಘಾತದ ಸುದ್ದಿ ತಿಳಿದಾಗ ಚಾಫೇಕರ ಬಂಧುಗಳು, "ಹಿಡಿದ ಪ್ರತಿಜ್ಞೆಯನ್ನು ಕೊನೆಗೊಳಿಸಿಯೇ ತೀರುತ್ತೇವೆ. ಆ ಮೂಲಕವೇ ನಿನ್ನ ಆತ್ಮಕ್ಕೆ ಶಾಂತಿಯನ್ನು ತಂದುಕೊಡುತ್ತೇವೆ" ಎಂದು ಹೇಳುತ್ತ ಅವನಿಗೆ ತಮ್ಮ ಬಾಷ್ಪಾಂಜಲಿಯನ್ನು ಅರ್ಪಿಸಿದರು.

ಈಗ ರ್‍ಯಾಂಡನನ್ನು ಹಿಡಿಯುವುದಕ್ಕೆ ಒಂದು ಉಪಾಯವನ್ನು ಯೋಜಿಸಿದರು. ಒಂದು ಹಳೆಯ ಮನೆಯಲ್ಲಿ ಇಲಿಗಳು ಬಿದ್ದಿವೆಯೆಂದು ಸುಳ್ಳು 'ಬಾತಮಿ' ಯನ್ನು ಕೊಟ್ಟು, ಸಶಸ್ತ್ರರಾಗಿ ಅವನ ಬರುವಿಕೆಯನ್ನು ಕಾಯ್ದರು.

ಆದರೆ ಆ ದಿನ ರ್‍ಯಾಂಡ್ ಬರಲಿಲ್ಲ!

ಇದೇ ಕಾಲಕ್ಕೆ ರ್‍ಯಾಂಡನ ತಂಡವು ಚಾಫೇಕರರ ಮನೆಯ ತಪಾಸಿಗೂ ಬರುವ ವಾರ್ತೆಯನ್ನು ಕಳುಹಿತು. ಮನೆಯವರೆಲ್ಲ ಹೌಹಾರಿದರು. ಬಂದ ಈ ದೂತರು ಹೆಚ್ಚು ಕಡಿಮೆ ನಡೆದುಕೊಂಡವ್ರಾದರೆ ಅವರನ್ನು ಮುಗಿಸಿಯೆ ಬಿಡುವ ಸಿದ್ಧತೆಯಲ್ಲಿ ಚಾಫೇಕರ ಬಂಧುಗಳು ತೊಡಗಿದರು.

ನಿಯಮಿತ ವೇಳೆಗೆ ಆ 'ಸರ್ಚ್ ಪಾರ್ಟಿ' ಯು ಬಂದಿತು. ಅವರಿಗೆ ಹೊರಗಿನ ಕೋಣೆ, ಬಾಳಕೃಷ್ಣನ ಮಲಗುವ ಕೋಣೆ ಇವಿಷ್ಟನ್ನು ತೋರಿಸಲಾಯಿತು. ಹಿತ್ತಲ ಮನೆಗೆ ಹೋಗಬೇಕೆಂದಾಗ, ಅಲ್ಲಿಯೆ ಕಟ್ಟಿದ್ದ ಎಮ್ಮೆಯು ಇವರನ್ನು ಕೆಂಗಣ್ಣಿನಿಂದ ನೋಡಿ ಒದರಿತಂತೆ! ಅಲ್ಲಿಂದ ಅಡಿಗೆಯ ಮನೆ, ಬಚ್ಚಲು ಮನೆಗಳಿಗೆ ಹೋಗಬೇಕೆಂದು ಒಬ್ಬ ಬಿಳಿಯ ಸವಾರನು ಹಟತೊಟ್ಟನು. ಆಗ ದಾಮೋದರ, ಬಾಳಕೃಷ್ಣರ ಅಬ್ಬರದ ಪ್ರತಿಭಟನೆಗೆ ಹೆದರಿಯೊ ಏನೋ ಆ ಉಸಾಬರಿಗೆ ಅವರು ಹೋಗದೆ ಹಿಂತಿರುಗಿದರು.

ಮೇ ತಿಂಗಳು ಬಂದಿತು. ಪ್ಲೇಗು ಸ್ವಲ್ಪ ಇಳಿಮುಖವಾಗತೊಡಗಿತು. ಆದರೂ ನಗರದ ಮುಖ್ಯ ಕೂಟಗಳಲ್ಲಿ, ಸ್ಮಶಾನ ಕಟ್ಟೆಗಳಲ್ಲಿ ಸಶಸ್ತ್ರ ಸವಾರರ ಕಾವಲು ಇದ್ದಿತು. ಲಕಡೀಪೂಲಿನ ಬಳಿಯ ಸ್ಮಶಾನದ ಕಾವಲುಗಾರರ ಹತ್ತಿರ [illegible] ಚಾಫೇಕರ ಬಂಧುಗಳ [illegible] ಸ್ಮಶಾನದ

ಹತ್ತಿರವೇ ಒಂದು ಮಾರುತಿಯ ದೇವಸ್ಥಾನವಿತ್ತು. ಕಾವಲುಗಾರರು ಅಲ್ಲಿ ಆಗಾಗ ಸಣ್ಣ ನಿದ್ದೆ ತೆಗೆಯಲಿಕ್ಕೆಂದು ಬರುತ್ತಿದ್ದರು. ದಾಮೋದರನು ಮಾರುತಿಯ ಪೂಜಾರಿಯ ಸ್ನೇಹವನ್ನು ಬೆಳಸಿ ಪೂಜಾರಿಗೆ ಒಂದು ವಾರ ರಜೆ ತಗೊಳ್ಳ ಹಚ್ಚಿ, ತಾನೇ ಅದರ ಪೂಜೆಯನ್ನು ಹಿಡಿದನು. ಮತ್ತು ಒಂದು ದಿವಸ ಆ ಎರಡೂ ರೈಫಲ್‌ಗಳನ್ನು ಹಾರಿಸಿದನು !

ಜೂನ್ ತಿಂಗಳಲ್ಲಿ ವಿಕ್ಟೋರಿಯಾ ಮಹಾರಾಣಿಯು ಪಟ್ಟವೇರಿದ ದಿನದ ವಜ್ರಮಹೋತ್ಸವವನ್ನು ಕುರಿತು ಪತ್ರಿಕೆಗಳು ಬರೆಯತೊಡಗಿದವು. ೨೨ ಜೂನ್‌ಗಾಗಿ ಪುಣೆಯಲ್ಲಿಯೂ ಅದರ ಸಿದ್ಧತೆಗಳು ನಡೆಯತೊಡಗಿದುವು. ಚಾಫೇಕರ ಬಂಧುಗಳು, ಅವತ್ತಿನ ದಿನವೇ ರ್ಯಾಂಡ್‌ನನ್ನು ಮುಗಿಸುವುದೆಂದು ಗೊತ್ತುಮಾಡಿಕೊಂಡರು.

ಆ ದಿನ ಸರಕಾರದಿಂದ ಪುರಸ್ಕೃತವಾದ ಉತ್ಸವಗಳು ನಡೆದಿರುವಾಗ, ಚಾಫೇಕರ ಬಂಧುಗಳು ಮಕ್ಕಳ ಹಳೆಯ ಪಠ್ಯ ಪುಸ್ತಕಗಳಿಂದ ರಾಣಿಯ ಕೆಲವು ಚಿತ್ರಗಳನ್ನು ಹರಿದು, ಹಳೆಯ ಬೂಟುಗಳ ಹಿಂಬಡಕ್ಕೆ ಅಂಟಿಸಿ, ನಗರದ ಪ್ರಮುಖ ಕೂಟಿನಲ್ಲಿ ಪ್ರದರ್ಶನಕ್ಕೆ ಇಟ್ಟು ಬಂದರು. ಹಿಂದಿನ ರಾತ್ರಿ ರ್ಯಾಂಡ್ ಸಹಿತವಾಗಿ ಎಲ್ಲ ಯುರೋಪಿಯನ್ನರ ಮನೆಗೆ, ಬೆದರಿಕೆಯ ಭಿತ್ತಿಪತ್ರವನ್ನು ಹಚ್ಚಿಯಾಗಿತ್ತು.

ಅಂದು ರಾತ್ರಿ, ಗವರ್ನರ್ ಸ್ಯಾಂಡ್‌ಹರ್ಸ್ಟನು ಅಧಿಕಾರಿಗಳಿಗೂ ಪುರಪ್ರಮುಖರಿಗೂ ದೊಡ್ಡ ಮೇಜವಾನಿಯನ್ನು ಏರ್ಪಡಿಸಿದ್ದನು. ಮೇಜವಾನಿಯು ಗಣೇಶಖಿಂಡದಲ್ಲಿರುವ ಗವರ್ನಮೆಂಟ್ ಹೌಸ್‌ನಲ್ಲಿ ನೆರವೇರಲಿತ್ತು. ಉತ್ಸವದಲ್ಲಿ ಪ್ರಜೆಗಳೂ ಭಾಗಿಯಾಗಬೇಕೆಂಬ ಅಪೇಕ್ಷೆಯಿಂದ ಪಟಾಕ್ಷಿಗಳನ್ನು ಹಾರಿಸಲು ವಿಶೇಷ ಏರ್ಪಾಟನ್ನು ಮಾಡಲಾಗಿದ್ದಿತು. ಪರ್ವತಿ, ಗಣೇಶಖಿಂಡದ ಹತ್ತಿರದ ದಿಬ್ಬ ಮುಂತಾದ ಎತ್ತರದ ಸ್ಥಳಗಳಲ್ಲಿ ಸೂಡುಗಳನ್ನು ಉರಿಹಚ್ಚಿ ಬೆಳಕನ್ನು ಬೀರಲಾಗಿದ್ದಿತು. ಮೂರೂ ಸಂಜೆಯ ಸಮಯದಲ್ಲಿ ಆರಂಭವಾದ ಸಡಗರ, ಜನರ ನೂಕು ನುಗ್ಗಲು, ಪಟಾಕ್ಷಿಗಳ ಸದ್ದು ಮಧ್ಯರಾತ್ರಿಯ ವರೆಗೂ ಮುಂಬರಿದವು. ಆ ಸಮಯವನ್ನೇ ಚಾಫೇಕರ ಬಂಧುಗಳು ತಮ್ಮ ಕಾರ್ಯಸಿದ್ಧಿಗೆ ಆಯ್ದುಕೊಂಡರು.

ಇಡೀ ದಿನ ಚಾಫೇಕರ ಬಂಧುಗಳು ದೇವರ ಪ್ರಾರ್ಥನೆಯಲ್ಲಿಯೇ ಕಾಲ ಕಳೆದರೆನ್ನಬೇಕು. ಸಂಜೆಯ ಮುಂದೆ ಮನೆಬಿಟ್ಟು ಹೊರಟರು. ದೇಶವಾದ್ಯಂತ ಹೀಗೆಯೇ ಸಮಾರಂಭ ನಡೆದಿರಬೇಕು; ಮುಂಬೈರಾಜ್ಯದಲ್ಲಿ ಪ್ಲೇಗು, ಕಲಕತ್ತೆಯಲ್ಲಿ ಭೂಕಂಪ, ಇತರ ಕೆಲವು ಪ್ರದೇಶಗಳಲ್ಲಿ ಬರಗಾಲ- ಪ್ರಜೆಗಳು ಹೀಗೆ ಕಷ್ಟದಲ್ಲಿದ್ದಾಗ ರಾಣಿಯಾದವಳು ಹೀಗೆ ಉತ್ಸವ ಮಾಡಿಸಿಕೊಳ್ಳಬೇಕೆ? ದೇಶದ ಅಭಿಮಾನ ಎಳ್ಳಷ್ಟೂ ಇಲ್ಲದೆ ನಮ್ಮ ಜನ ಹೀಗೆ ಕುರಿಗಳ ಹಾಗೆ ಹೇಳಿದ್ದನ್ನು ಮಾಡುತ್ತಿದ್ದಾರಲ್ಲ ಎಂಬ ಸಂತಾಪ ಇವರಲ್ಲಿ ಉಕ್ಕಿತು. ಚಿಂತೆಯಿಲ್ಲ, ಈ ಉತ್ಸವದ ಸೊಬಗನ್ನು ಪುಣೆಯ ಮಟ್ಟಿಗಾದರೂ ಸ್ಥಗಿತಗೊಳಿಸುತ್ತೇವಲ್ಲ, ಎಂದುಕೊಂಡರು.

ಆಗ ಹೊರಟವರು ದಾಮೋದರ, ಬಾಳಕೃಷ್ಣ ಚಾಫೇಕರರು, ರಾನಡೆ ಮತ್ತು ಆಪ್ಟೆ. ವಾಸುದೇವನು ಬಟ್ಲರನಂತೆ ವೇಷ ಹಾಕಿಕೊಂಡು ಮಧ್ಯಾಹ್ನದಿಂದಲೂ ರ್ಯಾಂಡನ ಬೆನ್ನನ್ನು ಕಾ-ಯುತ್ತಿದ್ದನು. ಇವರ ಹತ್ತಿರ ರಿವಾಲ್ವರ್‌ಗಳು ಇದ್ದುವಲ್ಲದೆ, ಖಡ್ಗಗಳನ್ನೂ ಅರಿವೆಯಲ್ಲಿ ಸುತ್ತಿ ಬೆನ್ನಿಗೆ ಹಾಕಿಕೊಂಡಿದ್ದನು. ರಾನಡೆಯು ಕೈಯಲ್ಲಿ ಒಂದು ಚಪ್ಪಕೊಡಲಿಯೂ ಇದ್ದಿತು. ಆದರೆ ಹತ್ತು ಜನ ಓಡಾಡುವಾಗ ಅವರ ಗಮನ ಸೆಳೆ-ಯದೇ ಅವನ್ನು ಹೀಗೆ ಒಯ್ಯುವುದು ಸ್ವಲ್ಪ ದುಷ್ಕರವಾಗಿ ಕಂಡಿತು. ಕಾರಣ, ಗಣೇಶಖಿಂ-ಡದ ಹತ್ತಿರ ಇರುವ ಒಂದು ಸಣ್ಣ ಸೇತುವೆಯ ಅಡಿಯಲ್ಲಿ ಆ ಖಡ್ಗಗಳನ್ನು ಬಚ್ಚಿ ಇಟ್ಟರು. ಗಣೇಶಖಿಂಡದ ಗವರ್ನ್‌ಮೆಂಟ್ ಹೌಸ್ ಗೇಟಿನಿಂದ ಮುಂದೆ ಮುಖ್ಯದ್ವಾರವಾದ 'ಯೆಲ್ಲೋ ಗೇಟ್'ಗೆ ಹೋಗುವ ದಾರಿಯಲ್ಲಿ ಮರಗಳ ದಟ್ಟ ನೆರಳಲ್ಲಿ ಮರೆಯಾಗಿ ಕುಳಿತುಕೊಂಡರು. ಬಾಳಕೃಷ್ಣ ಮತ್ತು ರಾನಡೆ ಒಂದೆಡೆ ಕುಳಿತಿದ್ದರು ಅವರಿಂದ ತುಸು ಅಂತರದ ಮೇಲೆ ದಾಮೋದರ ಹಾಗೂ ಆಪ್ಟೆ ಇದ್ದರು. ರಾತ್ರಿಯ ೧೧ ಗಂಟೆಯ ಸುಮಾರಿಗೆ ವಾಸುದೇವನು ಅಲ್ಲಿಗೆ ಬಂದು, ಮೇಜವಾನಿ ಇನ್ನೂ ನಡೆದಿದೆಯೆಂದೂ

ಅದು ಮುಗಿದು ರ್‍ಯಾಂಡ್ ಹೊರಬಿದ್ದ ಕೂಡಲೇ ಗೋಂದ್ಯಾ (ಗೋವಿಂದ) ಬಂದನೆಂದು ತಾನು ಕೂಗುತ್ತ ಬರುವುದಾಗಿಯೂ ಅವನನ್ನೂ ಶಕ್ಯವಾದರೆ ಮತ್ತೂ ಒಬ್ಬಿಬ್ಬ ಬಿಳಿಯ ಅಧಿಕಾರಿಗಳನ್ನೂ ಸಮಾಪ್ತಗೊಳಿಸಬೇಕೆಂದೂ ಹೇಳಿ ಮತ್ತೆ ಗವರ್ನಮೆಂಟ್ ಹೌಸ್‌ಗೆ ಹಿಂತಿರುಗಿದನು.

ಸರಿಯಾಗಿ ಮಧ್ಯರಾತ್ರಿಗೆ ಮೇಜವಾನಿ ಮುಗಿಯಿತು. ಕ್ಯಾ. ಆಯರ್ಸ್ಟ್ ಎಂಬ ತರುಣ ಅಧಿಕಾರಿಯು ತನ್ನ ನಲ್ಲೆಯ ಟೊಂಕವನ್ನು ಹಿಡಿದುಕೊಂಡು ಬಂದು ಕುದುರೆಯ ಗಾಡಿಯನ್ನು ಹತ್ತಿದನು. ಅವನ ಹಿಂದೆ ಕ್ಯಾ. ಲೆವಿಸ್ ಮತ್ತು ಲೆ. ಸಾರ್ಜೆಂಟ್ ತಂತಮ್ಮ ಗಾಡಿಗಳಲ್ಲಿ ಕುಳಿತು ಹೊರಟರು.

ಆದರೆ ಆಯರ್ಸ್ಟ್ ಹತ್ತಿದ ಗಾಡಿಯು ನೋಡುವುದಕ್ಕೆ ರ್‍ಯಾಂಡ್‌ನದರಂತೆಯೇ ಇತ್ತು. ಬಾಳಕೃಷ್ಣನು ರಾನಡೆಯ ಕೈಯಿಂದ ಬಂದೂಕನ್ನು ಇಸಿದುಕೊಂಡವನೇ, ಆ ಗಾಡಿಯ ಹಿಂದೆ ಏರಿ ಆಯರ್ಸ್ಟ್‌ನ ತಲೆಗೆ ಗುಂಡು ಹೊಡೆದನು. ಅದರ ಸಪ್ಪಳ ಕೇಳಿ ಅಲ್ಲಿಯೆ ಬದಿಯಲ್ಲಿ ಕುಳಿತಿದ್ದ ಅವನ ಹೆಂಡತಿ ಅದು ದೊಡ್ಡ ಪಟಾಕ್ಷಿಯ ಸದ್ದೆಂದು ತಿಳಿದಳು. "ಈ ನೇಟಿವ್ ಜನರಿಗೆ ಬುದ್ಧಿಯಿಲ್ಲ!" ಎಂದು ಅವರನ್ನು ಬೈಯಬೇಕೆಂದು ಬಾಯ್ದೆರೆದಾಗ ಅವಳ ಗಂಡನು, "ಓ ನನಗೆ ಗುಂಡು ತಗಲಿದೆ" ಎಂದು ಕೂಗಿದವನೇ ಕೆಳಕ್ಕೆ ಬಿದ್ದನು. ಹೌಹಾರಿದ ಆಯರ್ಸ್ಟ್‌ನ ಹೆಂಡತಿ, ನಾಗಾಲೋಟದಿಂದ ಓಡುತ್ತಿದ್ದ ಗಾಡಿಯನ್ನು ನಿಲ್ಲಿಸಲು ಕೋಚ್‌ಮನ್ನನಿಗೆ ಒದರಿ ಹೇಳಿದಳು.

ದಾಮೋದರನು ಕೆಲಸ ಮುಗಿಯಿತೆಂದು ತಿಳಿದಾಗ— ಇದೇನು ವಾಸುದೇವನ ಧ್ವನಿ:

"ಗೋಂದ್ಯಾ ಆಲಾರೇ!"

ಎಂದರೆ ರ್‍ಯಾಂಡ್ ಈಗ ಬರುತ್ತಿದ್ದಾನೆಯೆ? ಈಗ ಹೋದ ಗಾಡಿ ಮತ್ತೊಬ್ಬರದೆಂದಂತಾಯಿತಲ್ಲ!

"ಗೋಂದ್ಯಾ ಆಲಾರೇ! ಗೋಂದ್ಯಾ" ಮತ್ತೆ ಕೇಳಿಸಿತು.

ದಾಮೋದರನು ಆ ಕ್ಷಣವೇ ಮುಂದೆ ಬಂದು ವೇಗದಿಂದ ಓಡಿ, ಆ ಗಾಡಿಯ ಹಿಂಬದಿಯನ್ನು ಏರಿ, ರ್‍ಯಾಂಡನ ಮೇಲೆ ಗುಂಡು ಹಾರಿಸಿದವನೇ ಕೆಳಗಿಳಿದು ಕತ್ತಲೆಯಲ್ಲಿ ಮರೆಯಾದನು.

ಆಯರ್ಸ್ಟ್‌ನ ಗಾಡಿಯು ಕೊನೆಗೊಮ್ಮೆ ನಿಂತಿತು. ಹಿಂದೆಯೇ ಬರುತ್ತಿದ್ದ ಲೆವಿಸ್ ಮತ್ತು ಸಾರ್ಜಂಟ್ ಆದ ಅನರ್ಥವನ್ನು ನೋಡಿದರು. ಮೇಜವಾನಿಯ ಕಾಲಕ್ಕೆ ಡಾ. ಜೋನ್ಸ್ ಕೂಡ ಇದ್ದರಷ್ಟೆ. ತಮ್ಮ ಹಿಂದೆ ಇನ್ನೊಂದು ಗಾಡಿ ಬರುತ್ತಿದ್ದಿತು. ಅದರಲ್ಲಿ ಜೋನ್ಸ್ ಇರಬೇಕೆಂದು, "ಡಾಕ್ಟರ್" ಎಂದು ಕೂಗಿದರು. ಆದರೆ ಉತ್ತರ ಬರಲಿಲ್ಲ. ಸಾರಥಿಯು ತನ್ನ ಗಾಡಿಯನ್ನು ನಿಲ್ಲಿಸಿದ. ಆಗೂ ಒಳಗಿನಿಂದ ಯಾವೊಂದೂ ಸದ್ದೂ ಹೋಡಲಿಲ್ಲ. ಕ್ಯಾ. ಲೆವಿಸ್ ಒಳಹೊಕ್ಕು ನೋಡಿದಾಗ, ರ್‍ಯಾಂಡ್ ರಕ್ತದ ಮಡುವಿನಲ್ಲಿ ಉರುಳಿದ್ದನ್ನು ಕಂಡನು. ಆಯರ್ಸ್ಟ್‌ನ ಹೆಂಡತಿ ಮೂರ್ಛೆ ಹೋಗಿದ್ದಳು.

ಕೂಡಲೇ ಮೂವರನ್ನೂ ಆಸ್ಪತ್ರೆಗೆ ಸಾಗಿಸಲಾಯಿತು. ಆಯರ್ಸ್ಟ್ ಕೆಲವು ತಾಸುಗಳಲ್ಲಿಯೆ ಅಸುವನ್ನು ನೀಗಿದನು. ರ್‍ಯಾಂಡ್ ಬದುಕಿದ್ದ; ಆದರೆ ಎಚ್ಚರವಿರಲಿಲ್ಲ. ಮರುದಿನ ಪ್ರಜ್ಞೆ ಏನೊ ಬಂತು, ಆದರೆ ಅದು ಕೆಲವೇ ಕ್ಷಣಗಳ ವರೆಗೆ ಮಾತ್ರ. ಎಂಟು ಹತ್ತು ದಿನಗಳವರೆಗೂ ಅವನ ಜೀವ ಒದ್ದಾಡಿ ಜುಲೈ ೩ ನೇ ತಾರೀಖಿಗೆ ಹಾರಿ ಹೋಯಿತು. ಜನತೆಯ ಜೀವವನ್ನು ವಿಲಿವಿಲಿ ಒದ್ದಾಡಿಸಿದ್ದಕ್ಕಾಗಿ ದೇವರೇ ಹೀಗೆ ತಡ ಮಾಡಿ ಅವನ ಪ್ರಾಣವನ್ನು ಕೊಂಡೊಯ್ದ ಎಂದು ಪುಣೆಯ ಜನರು ನಂಬುವಂತಾಯ್ತು.

ಖಂಡೇರಾವ್ ಸಾಠೆ ಕೃತ್ಯ ನಡೆದ ಮರುದಿನ ಬೆಳಿಗ್ಗೆ ಟಿಳಕರಿದ್ದಲ್ಲಿಗೆ ಬಂದು, "ಗಣೇಶಖಿಂಡದ ಗಣಪತಿ ಉರುಳಿತು" ಎಂದು ಹೇಳಿದನು

"ಹೌದು, ಕೇಳಿದ್ದೇನೆ. ಇನ್ನು ಎಚ್ಚರದಿಂದ ಇರ್ರಿ" ಎಂದರು ಟಿಳಕರು.

ಪೋಲೀಸರ ಕಾಟವನ್ನು ತಪ್ಪಿಸಲು ೨೪ ನೇ ದಿನಾಂಕಕ್ಕೆ ಎಲ್ಲರೂ ಮುಂಬೈಗೆ ಹೊರಟರು. ಹೋಗುವ ಮುಂಚೆ ಸೇತುವೆಯ ಅಡಿಯಲ್ಲಿ ಇರಿಸಿದ್ದ ಖಡ್ಗಗಳನ್ನು ಒಯ್ಯಬೇಕೆನ್ನುವಷ್ಟರಲ್ಲಿ ಅವನ್ನು ಈಗಾಗಲೇ ಪೋಲೀಸರು ವಶಪಡಿಸಿಕೊಂಡಿದ್ದಾರೆಂದು ತಿಳಿಯಿತು. ಇತರ ಶಸ್ತ್ರಗಳ

# ಉತ್ಕೃಷ್ಟತೆಯಲ್ಲಿ ಮಿಗಿಲಾದುದು

Brooke Bond
Café
BRAND
French coffee
NETT WEIGHT WHEN PACKED 100 grms.
BROOKE BOND INDIA PRIVATE LIMITED
COIMBATORE

ಹೆಚ್ಚು ಪರಿಶೀಲಿಸುವ ರುಚಿಗಾರು ಗುಣವಾಗಿ ಮಿಶ್ರಣ ಮಾಡಲ್ಪಟ್ಟ ಬ್ರೂಕ್ ಬಾಂಡ್ ಕೇಫೆ ಬ್ರಾಂಡ್ ಫ್ರೆಂಚ್ ಕಾಫಿಯು ನಿಮಗೆ ಸೆಲೊಫೇನ್ ಚೀಲಗಳಲ್ಲಿ ದೊರೆಯುತ್ತದೆ. ಆದರಿಂದಾಗಿ ತಾಜಾವಾಗಿಯೂ, ಅತ್ಯಂತ ಸ್ವಾದ ಯುಕ್ತವಾಗಿಯೂ ಇರುವುದು. ಅತ್ಯಂತ ಶ್ರೇಷ್ಠ ಮತ್ತು ಫಲಪ್ರದ ಫ್ರೆಂಚ್ ಕಾಫಿ ಬೇಕಾದರೆ ಬ್ರೂಕ್ ಬಾಂಡನ್ನೇ ಕೇಳಿರಿ. ಇದು ನಿಮ್ಮ ಹಣಕ್ಕೆ ಹೆಚ್ಚಿನ ಪ್ರತಿಫಲವನ್ನೀಯುವ ಅತ್ಯುತ್ತಮ ಕಾಫಿ.



## ಬ್ರೂಕ್ ಬಾಂಡ್ ಕೇಫೆ ಬ್ರಾಂಡ್ ಫ್ರೆಂಚ್ ಕಾಫಿ

JWTBB 403

ನ್ನೆಲ್ಲ ಒಂದು ಬಾವಿಯಲ್ಲಿ ಚೆಲ್ಲಿಬಿಟ್ಟರು.

ಸಮಗ್ರ ಭಾರತದ ತುಂಬೆಲ್ಲ ಈ ಸೇಡಿನ ಕೊಲೆಯ ಸುದ್ದಿ ಹರಡಿತು. ವಿಕ್ಟೋರಿಯಾ ಮಹಾರಾಣಿಯ ಪಟ್ಟಾಭಿಷೇಕದ ಹೀರಕ ಮಹೋತ್ಸವದ ಸುದ್ದಿ ಈ ರೀತಿಯಾಗಿ ಪ್ರಾಮುಖ್ಯವನ್ನು ಪಡೆಯಿತು. ಮುಂಬೈಯಿಂದ ಸ್ಪೆಶಲ್ ಪೋಲೀಸರನ್ನು ಕರತರಲಾಯಿತು. ಊರಲ್ಲಿ ಅವರು ಸರ್ಪಗಾವಲನ್ನು ಹಾಕಿದರು. ಎಲ್ಲೆಲ್ಲಿಯೂ ಹುಡುಕಿದರು. ಯಾರಿಗೂ ನಿಜವಾದ ಸುದ್ದಿ ತಿಳಿದಿರಲಿಲ್ಲ. ಯಾವನೊಬ್ಬ ತಲೆತಿರುಕ ಸೈನಿಕ ಗುಂಡು ಹಾರಿಸಿರಬೇಕು ಎಂದರು ಕೆಲ ರು. ಮತ್ತೆ ಕೆಲವರಿಗೆ ಹೆಣ್ಣಿನ ಸಂಬಂಧ ಈ ಕೊಲೆಗಳ ಹಿಂದೆ ಇರಬೇಕೆಂದು ತೋರಿತು.

ಪೋಲೀಸರು ಕಂಡಕಂಡವರನ್ನು ಬಂಧಿಸಿ, ಹಿಂಸಿಸುವ ಸತ್ರವನ್ನೇ ಕೈಕೊಂಡರು. ಟಿಳಕರು ಇದರ ವಿರುದ್ಧವಾಗಿ 'ಕೇಸರಿ'ಯಲ್ಲಿ ತಮ್ಮ ಲೇಖನಿಯನ್ನು ಝಳಪಿಸಿದರು.

ಕೊಲೆಗಾರರ ಪತ್ತೆ ಹಚ್ಚಿಕೊಟ್ಟವರಿಗೆ ೨೦ ಸಾವಿರ ರೂ. ಗಳ ಬಹುಮಾನವನ್ನು ಸಾರಲಾಯಿತಾದರೂ ಯಾವ ಪತ್ತೆಯೂ ಆಗಲಿಲ್ಲ. ಹೀಗೆಯೇ ಒಂದಲ್ಲ, ಮೂರು ತಿಂಗಳುಗಳು ಕಳೆದವು. ಟಿಳಕರ ಮೇಲೆ ಸರಕಾರದ ಸಂಶಯ ಅಪಾರವಾಗಿದ್ದಿತು. ಆದರೆ ಅದನ್ನು ಸಿದ್ಧ ಮಾಡಲು ಸರಕಾರದ ಹತ್ತಿರ ಪುರಾವೆಗಳಿರಲಿಲ್ಲ.

ಕೊನೆಗೆ ಸರಕಾರವು ಬ್ರೆವಿನ್ ಎಂಬ ಆಂಗ್ಲೋ- ಇಂಡಿಯನ್ ಸ್ಪೆಶಲ್ ಅಧಿಕಾರಿಯನ್ನು ಈ ಕೊಲೆಗಳ ತನಿಖೆಗಾಗಿ ನಿಯಮಿಸಿತು. ಬ್ರೆವಿನ್‌ನಿಗೆ ಟಿಳಕರ ಪರಿಚಯವಿದ್ದಿತು. ಟಿಳಕರಿಗೂ ಈ ಕೊಲೆಗೂ ನೇರವಾದ ಸಂಬಂಧವಿಲ್ಲ; ಆದರೆ ಅವರಿಗೆ ವಿಷಯ ಗೊತ್ತಿರಲು ಸಾಕು ಎಂದು ಆತನು ಸರಿಯಾಗಿಯೆ ಊಹಿಸಿದ್ದನು. ಬ್ರೆವಿನ್ ಈ ನಿಮಿತ್ತದಿಂದ ಟಿಳಕರಲ್ಲಿಗೆ ಮೇಲಿಂದ ಮೇಲೆ ಹೋಗುತ್ತಿದ್ದನು.

" ಕೊಲೆಗಾರರನ್ನು ಕಂಡುಹಿಡಿಯಲು ನೀವು ಸಹಾಯ ಮಾಡಲೇಬೇಕು " ಎಂದು ಒಮ್ಮೆ ಕೇಳಿದನು.

"ಅದು ಶಕ್ಯವಿಲ್ಲ, ನನಗೆ ಯಾರೂ ಸುದ್ದಿ ಹೇಳುವುದಿಲ್ಲ ಒಂದು ವೇಳೆ ಹೇಳಿದರೂ ಅವರ ವಿರುದ್ಧ ನಾನು ನಿಲ್ಲಲಾರೆ. ನಿಮ್ಮ ನ್ಯಾಯವಾದ ತನಿಖೆಗೆ ನಾನು ಎಂದೂ ಅಡ್ಡ ಬರುವುದಿಲ್ಲ, ಆದರೆ ಕಲೆಕ್ಟರ್ ಲ್ಯಾಂಬ್ ಹೇಳಿದಂತೆ ನಾನು ಇದು ಪುಣೆಗೆ ಕಲಂಕವೆಂದು ತಿಳಿದಿಲ್ಲ" ಎಂದು ಟಿಳಕರು ನಿರ್ಭಯವಾಗಿ ಉತ್ತರ ಕೊಟ್ಟರು.

ಬ್ರೆವಿನ್‌ನಿಗೆ ಚೆನ್ನಾಗಿ ಮರಾಠಿ ಬರುತ್ತಿತ್ತು. ಜನರೊಂದಿಗೆ ಬೆರೆತು ಮಾಹಿತಿ ಕಲೆಹಾಕತೊಡಗಿದನು. ವೇಲಣಕರರಿಗೆ ಹೊಡೆತ ಮುಂತಾದ ಎಲ್ಲ ಘಟನೆಗಳ ಹಿಂದೆ ಒಂದೇ ಮನೋಭಾವ ಇದೆಯೆಂದೂ ಇದನ್ನು ನಡೆಸಿದವರು ಒಬ್ಬಿಬ್ಬ ತಲೆತಿರುಕ ಹಿಂದೂಗಳು ಎಂದೂ ಅವನು ನಿರ್ಣಯಕ್ಕೆ ಬಂದನು.

ಈ ವೇಳೆಗೆ ಚಾಫೇಕರ ಬಂಧುಗಳ ಹೆಸರೂ ಬ್ರೆವಿನ್‌ನ ಕಿವಿಯ ಮೇಲೆ ಬಿದ್ದಿತು. ಅವರ ಧರ್ಮಾಭಿಮಾನದ ಕೆಲವು ಕೃತಿಗಳೂ ತಿಳಿದು ಬಂದವು. ಆದರೆ ಇಂಥ ಸಂಶಯಿತ ವ್ಯಕ್ತಿಗಳು ಆಗ ಅನೇಕರಿದ್ದರು. ಆಗ ಬ್ರೆವಿನ್‌ನ ಲಕ್ಷ್ಯವು ಗಣೇಶ ಶಂಕರ ದ್ರವಿಡ ಎಂಬ ಕೈದಿಯತ್ತ ಹೋಯಿತು. ಗಣೇಶ ದ್ರವಿಡ ಖೊಟ್ಟಿ ಕಾಗದ ಪತ್ರಗಳನ್ನು ನಿರ್ಮಿಸಿದನೆಂಬ ಕಾರಣದಿಂದ ಮುಂಬೈಯಲ್ಲಿ ಐದು ವರ್ಷದ ಸಶ್ರಮಶಿಕ್ಷೆಯನು ಅನುಭವಿಸುತ್ತಿದ್ದ. ಅವನನ್ನು ಬ್ರೆವಿನ್ನನ ಹೇಳಿಕೆಯ ಮೇರೆಗೆ ಯರವಡಾಕ್ಕೆ ಸಾಗಿಸಲಾಯಿತು. ಕೊಲೆಯಾದ ಒಂದೂವರೆ ತಿಂಗಳ ನಂತರ ಅವನು ಸರಕಾರಕ್ಕೆ ಒಂದು ಪತ್ರ ಬರೆದು, ಈ ಕೊಲೆಯ ಬಗ್ಗೆ ತನಗೆ ಸ್ವಲ್ಪ ಮಾಹಿತಿ ಇದೆಯೆಂದೂ ತನಗೆ ಇಪ್ಪತ್ತು ಸಾವಿರದ ಬಹುಮಾನದ ಹಣ ಹಾಗೂ ಸದ್ಯದ ಶಿಕ್ಷೆಯ ರದ್ದತಿ ಇವುಗಳ ಆಶ್ವಾಸನ ಕೊಟ್ಟಿದ್ದಾದರೆ ಆ ಮಾಹಿತಿಯನ್ನು ಪೂರೈಸುವುದಾಗಿಯೂ ಹೇಳಿದ. ಬ್ರೆವಿನ್ನನ ಪ್ರಚೋದನೆಯಿಂದೇ ಅವನು ಹೀಗೆ ಪತ್ರ ಬರೆದಿರಬೇಕು ಎಂದು ಊಹಿಸಲಿಕ್ಕೆ ಎಡೆಯಿದೆ.

ಸರಿ, ಗಣೇಶ ದ್ರವಿಡ ಹಣದ ಆಮಿಷಕ್ಕೆಬಿದ್ದ. ಸರಕಾರ ವಿರೋಧಿ ಚಟುವಟಿಕೆಗಳನ್ನು ನಡೆಯಿಸುತ್ತಿದ್ದ ಕೆಲವು ವ್ಯಕ್ತಿಗಳ ಹೆಸರನ್ನು ಹೇಳಿದ. ಅವರಲ್ಲಿ ಚಾಫೇಕರ ಬಂಧುಗಳ


ಮನೆಯಲ್ಲಿಯೇ
ಒಗೆದದ್ದು
ಸರ್ಫ್‌ನಿಂದ
ಒಗೆದದ್ದು
Surf
BLUE
FOR THE WHITEST WASH!

ಪ್ರಸ್ತಾಪವೂ ಬಂತು. ಅವರ ಕ್ಲಬ್‌ನ ವಿಷಯ, ಒಂದು ಕಾಲಕ್ಕೆ ಅದರ ಸದಸ್ಯನಾಗಿದ್ದ ತನ್ನ ತಮ್ಮ ನೀಲಕಂಠ ದ್ರವಿಡನಿಗೆ ಗೊತ್ತಿದೆಯೆಂದೂ ಹೇಳಿದನು. ನೀಲಕಂಠನು ಮೊದಲು ತನಗೇನೂ ಗೊತ್ತಿಲ್ಲವೆಂದರೂ ಕೊನೆಗೆ ಅಣ್ಣತಮ್ಮಂದಿರ ಭೆಟ್ಟಿ ಮಾಡಿಸಿದಾಗ ಸಾದ್ಯಂತ ಸಂಗತಿಯನ್ನು ವಿವರಿಸಿದನು. ಚಾಫೇಕರ ಬಂಧುಗಳಲ್ಲದೆ ರಾನಡೆ, ಸಾಠೆ ಮುಂತಾದವರ ಹೆಸರುಗಳೂ ಹೊರಬಂದವು. ಅವರ ಶಸ್ತ್ರಸಂಗ್ರಹದ ವಿವರಗಳೂ ತಿಳಿದುಬಂದವು.

ಆ ವೇಳೆಗೆ ಬಾಳಕೃಷ್ಣ, ರಾನಡೆ, ವಾಸುದೇವ ಇವರೆಲ್ಲರೂ ತಲೆಮರೆಸಿಕೊಂಡಿದ್ದರು. ದಾಮೋದರ ಮಾತ್ರ ಮುಂಬಯಿಯಲ್ಲಿದ್ದನು. ದಾಮೋದರನನ್ನು ಸೆಪ್ಟೆಂಬರ್ ೩೦ ರಂದು ಬಂಧಿಸಿ ಪುಣೆಗೆ ತರಲಾಯಿತು.

ಏನಿದ್ದರೂ ಇವರೇ ಕೊಂದವರೆಂದು ಹೇಳುವುದಕ್ಕೆ ಪುರಾವೆಗಳೇನೂ ಇರಲಿಲ್ಲ. ದಾಮೋದರನಿಂದ ಹೆಚ್ಚಿನ ಅಥವಾ ನಿಜ ಸಂಗತಿಯನ್ನು ಹೊರಡಿಸುವುದಕ್ಕೆ ಏನೆಲ್ಲ ಎತ್ತುಗಡೆ ಮಾಡಲಾಯಿತು. ಹೊಡೆತ ಬಡಿತಗಳಿಗೆ ಈ ಜೀವ ಬಗ್ಗದು ಎಂದು ಆ ಕ್ಷಣವೇ ಗ್ರಹಿಸಿದ ಬ್ರೆವಿನ್ ಹೊಸದೊಂದು ಹಂಚಿಕೆಯನ್ನು ಹೂಡಿದನು. ದಾಮೋದರನಿಗೆ ಸೆರೆಮನೆಯಲ್ಲಿಯೆ ಸಮೀಚೀನವಾದ ಮೃಷ್ಟಾನ್ನಭೋಜನ ದೊರೆಯಿತು. ಅವನಿಗೆ ಬೇಕಾದಲ್ಲಿ ಹೋಗಿಬರುವ ಸೌಕರ್ಯವಿತ್ತು. ಸರಕಾರದ ಸನ್ಮಾನ್ಯ ಅತಿಥಿಯಂತೆ ಅವನಿಗೆ ಎಲ್ಲ ಸೌಕರ್ಯವನ್ನು ನೀಡಲಾಯಿತು. ಮೇಲೆ ಬ್ರೆವಿನ್ನನ ಸವಿಯಾದ ಮಾತು, ಹೊಗಳಿಕೆ! ಸ್ವಂತದ ಸ್ವಾರ್ಥವೇನೂ ಇಲ್ಲದೆ, ತಾನು ನಂಬಿದ ತತ್ವನಿಷ್ಠೆಗಾಗಿ ಮಹತ್ಕಾರ್ಯವನ್ನು ಸಾಧಿಸಿದ ವೀರರು ಎಂದರೆ ಚಾಫೇಕರ ಬಂಧುಗಳು ಎಂಬುದಾಗಿ ತನ್ನ ವೈಯಕ್ತಿಕ ಅಭಿಪ್ರಾಯವಿದೆಯಾಗಿ ಬ್ರೆವಿನ್ ಎದೆಬಿಚ್ಚಿ ಹೇಳಿದ. ರ್‍ಯಾಂಡ್‌ನನ್ನು ಕೊಲ್ಲುವಲ್ಲಿ ತೋರಿದ ಮನೋದಾರ್ಢ್ಯ ಅದನ್ನು ಒಪ್ಪಿಕೊಳ್ಳುವಲ್ಲಿಯೂ ವ್ಯಕ್ತವಾದರೆ ತಪ್ಪೇನಿದೆ? ಸರಕಾರಕ್ಕಾದರೂ ಕೊಲೆಗಾರರನ್ನು ಹೆಚ್ಚಿಗೆ ಶಿಕ್ಷಿಸುವುದೆಲ್ಲಿ ಬೇಕಾಗಿದೆ? ಪುರಾವೆ ಇಲ್ಲದ್ದರಿಂದ ಅದು ವಿಶೇಷ ಉಸಾಬರಿಗೆ ಹೋಗದೆ ಕಳೆದುಹೋದ ತನ್ನ ಮಾನವನ್ನು ಉಳಿಸಿಕೊಳ್ಳಲು ಹೇಗಾದರೂ ಈ ಪ್ರಕರಣವನ್ನು ಮುಗಿಸುವ ಆತುರದಲ್ಲಿದೆ ಎಂದು ಬ್ರೆವಿನ್ 'ತಿಳಿಹೇಳಿದ.'

ಪರಿಣಾಮವಾಗಿ ದಾಮೋದರ ಚಾಫೇಕರನು ತಾನೇ ಕೊಲೆಗಾರನೆಂದು ಲಿಖಿತ ಹೇಳಿಕೆಯನ್ನು ಕೊಟ್ಟ! ಸರಿ, ಪೋಲೀಸರ ಒತ್ತಾಯಕ್ಕೆ ಕಟ್ಟುಬಿದ್ದು ತಾನು ಹೇಳಿಕೆ ಕೊಟ್ಟೆ ಎಂದು ಆ ಮೇಲೆ ತಿರುಗಿ ಬೀಳಬಾರದಲ್ಲ! ಅದಕ್ಕಾಗಿ ದಾಮೋದರನು ಪುರಾವೆಗಳನ್ನೂ ಒದಗಿಸಿದನು. ವೇಲಣಕರರ ಹತ್ತಿರ ಹೋಗಿ, ಅವರ ಸಮಕ್ಷಮವೆ ತಾನು ಅವರನ್ನು ಹೊಡೆದುದಾಗಿ ಹೇಳಿದನು. ವಿಕ್ಟೋರಿಯಾ ಮಹಾರಾಣಿಯ ಮೂರ್ತಿಯ ಕಂಠವನ್ನು ಅಲಂಕರಿಸಿದ ಚಪ್ಪಲಿಗಳನ್ನು ತೋರಿಸಿಕೊಟ್ಟನು. ತಾನು ಸಂಗ್ರಹಿಸಿದ ಶಸ್ತ್ರಗಳ ಮೂಲಗಳನ್ನು ತಿಳಿಸಿ ಹೇಳಿದನು ತಾನಾಗಿಯೆ ಹೆಚ್ಚಿನ ಪುರಾವೆಗಳನ್ನು ಕೊಟ್ಟ. ಈ ಮಹತ್ಕಾರ್ಯವನ್ನು ಸಾಧಿಸಿದವ ತಾನು ಎಂದು ಧೈರ್ಯದಿಂದ ಹೇಳಿದನು. ಇಷ್ಟೇ ಅಲ್ಲದೆ ರ್‍ಯಾಂಡ್‌ನ ಕೊಲೆವರೆಗಿನ ಸಾದ್ಯಂತ ವೃತ್ತಾಂತವನ್ನು ಸೆರೆಮನೆಯಲ್ಲಿದ್ದಾಗ ಬರೆದುಕೊಟ್ಟನು!* ಅದನ್ನು ಬರೆಯಿಸುವಲ್ಲಿ ಬ್ರೆವಿನ್ನನ ಕೈವಾಡ ಖಂಡಿತವಾಗಿ ಇತ್ತು. ಈ ಆತ್ಮಚರಿತ್ರೆಯಿಂದ ಚಾಫೇಕರ ಬಂಧುಗಳ ಸಾಹಸದ ಹಿಂದಿನ ಮನೋಭೂಮಿಕೆ ಅತ್ಯಂತ ಸ್ಪಷ್ಟವಾಗಿ ಕಂಡುಬರುವಂತಿದೆ.

* ನಾಲ್ವತ್ತು ಪುಟಗಳಷ್ಟು ಸುದೀರ್ಘವಾಗಿರುವ ಈ ಆತ್ಮಚರಿತ್ರೆಯನ್ನು ಮುಂಬೈ ಸರಕಾರದವರು ತಮ್ಮ ರಾಜ್ಯದ ಸ್ವಾತಂತ್ರ್ಯಾಂದೋಲನದ ಇತಿಹಾಸ ಪುಸ್ತಕದಲ್ಲಿ ಪ್ರಕಟಮಾಡಿದ್ದು, ಪ್ರಸ್ತುತ ಲೇಖನದಲ್ಲಿಯು ಅನೇಕ ವಿಷಯಗಳನ್ನು ಅದರಿಂದ ತೆಗೆದುಕೊಂಡದ್ದಿದೆ. ಮುಂದೆ ಚಿರೋಲ-ಟಿಳಕ ಖಟ್ಲೆ ನಡೆದಾಗ ಅದನ್ನು ಚಿರೋಲನಿಗೆ ಓದಲಿಕ್ಕೆ ಕೊಡಲಾಗಿತ್ತು. ಅದೆ, ಟಿಳಕರಿಗೆ ನಿರಾಕರಿಸಲಾಯಿತು!

ರ್‍ಯಾಂಡ್‌ನನ್ನು ಕೊಲೆಮಾಡಿದ ಸಂದರ್ಭದ ಬಗ್ಗೆ ದಾಮೋದರನು ಬರೆದಿಟ್ಟ ಮಾತುಗಳನ್ನು ಇಲ್ಲಿ ಗಮನಿಸಬಹುದು :

"[ಕೊಲೆಮಾಡಿದ] ಮರುದಿನ ಸಂಜೆಯೆನ್ನುವುದದರೊಳಗಾಗಿ ಸುದ್ದಿಯು ಎಲ್ಲ ಕಡೆಗೆ ಹಬ್ಬಿ ಜನರೆಲ್ಲ ಹಿಂದೂ-ಮುಸಲ್ಮಾನ, ಬಡವ, ಬಲ್ಲಿದ, ಸುಧಾರಕರು ಸನಾತನಿಗಳು ಇದಾವ ಭೇದವಿಲ್ಲದೆ ಸಂತೋಷದಿಂದ ಲೋಲಾಡುತ್ತಿದ್ದುದನ್ನು ನಾವು ಕಂಡೆವು. ಅದರಿಂದ ನಮ್ಮ ಮನಸ್ಸು ಅದೆಷ್ಟು ಹಿರಿಹಿರಿ ಹಿಗ್ಗಿತೆಂಬುದನ್ನು ಊಹಿಸಲು ವಾಚಕರಿಗೇ ಬಿಟ್ಟುಕೊಡುತ್ತೇನೆ. ಜನಕ್ಕೆ ಸಂತಸವಾಯಿತೆನ್ನುವುದೇ ನಮ್ಮ ತೃಪ್ತಿಯ ಕಾರಣವಾಗಿದ್ದಿತು. ಏಕೆಂದರೆ ವೈಯಕ್ತಿಕವಾಗಿ ರ್‍ಯಾಂಡನ ಮೇಲೆ ನಮಗೆ ಯಾವ ದ್ವೇಷವೂ ಇರಲಿಲ್ಲ. ಆದರೆ ರ್‍ಯಾಂಡನು ನಮ್ಮ ಧರ್ಮ ಕರ್ಮಗಳ ಉಸಾಬರಿಗೆ ಹೋಗದೆ ಉಳಿದಿದ್ದರೆ ಮತ್ತು ತನ್ನ ಕೈಕೆಳಗಿನವರಿಂದ ಆದ ಜನಹಿಂಸೆಯನ್ನು ಪ್ರತಿಬಂಧಿಸಿದ್ದರೆ ನಾವು ಖಂಡಿತ ಅವನ ಗೊಡವೆಗೆ ಹೋಗುತ್ತಿದ್ದಿಲ್ಲ."

ಆದರೆ ದಾಮೋದರನು ಸಂಪೂರ್ಣವಾಗಿ ತನ್ನ ಕಾರ್ಯವನ್ನು ಹೇಳಿಕೊಂಡು, ತನ್ನ ಕೈಗಳನ್ನು ತಾನೇ ಸಿಕ್ಕಿಸಿಕೊಳ್ಳುವುದಕ್ಕೆ ಯಾವುದು ನಿಜವಾದ ಕಾರಣ? ಇದಕ್ಕೆ ಇದುವರೆಗೆ ಸಮರ್ಪಕವಾದ ಉತ್ತರ ದೊರೆತಿಲ್ಲ. ಬ್ರೆವಿನ್ನನ ಸವಿಮಾತು, ಗತ್ತುಗಾರಿಕೆಗೆ ದಾಮೋದರನು ಬಲಿಯಾದನೆ? ಬ್ರೆವಿನ್ನನ ಬಗ್ಗೆ ಅವನಲ್ಲಿ ವಿಶ್ವಾಸ ಮೂಡಿತ್ತೆಂಬುದು ನಿಜ. ತಾನು ಹೀಗೆ ಒಪ್ಪಿಕೊಂಡ ವಿಚಾರವಾಗಿ, ದಾಮೋದರನು ತನ್ನ ಆತ್ಮಚರಿತ್ರೆಯ ಕೊನೆಯಲ್ಲಿ ಹೀಗೆ ಹೇಳಿದುದುಂಟು:

"ಸಾರ್ವಜನಿಕ ಹಿತದ ದೃಷ್ಟಿಯಿಂದ ಮತ್ತು ಶ್ರೇಯಸ್ಸಿನ ಆಸೆಯಿಂದ, ನಾನು ಕೊಲೆಮಾಡಿದವನೆಂದು ಒಪ್ಪಿಕೊಂಡೆ. ಮೊದಲಿಗೆ ನಾನೊಬ್ಬನೇ ಇವೆಲ್ಲವುಗಳನ್ನು ಮಾಡಿದೆನೆಂದು ಹೇಳಿದ್ದೆ. ಆದರೆ ಇವು ಇಬ್ಬರಿಂದ ಆಗಿವೆಯೆಂದು ಪೋಲೀಸರು ಖಚಿತವಾದ ನಿರ್ಣಯಕ್ಕೆ ಬಂದಿದ್ದರಿಂದ, ನನ್ನ ತಮ್ಮ ಬಾಳಕೃಷ್ಣನ ಹೆಸರನ್ನೂ ಹೇಳಿ ಅವನನ್ನು ಈ ಶ್ರೇಯಸ್ಸಿನಲ್ಲಿ ಭಾಗಿಯಾಗುವಂತೆ ಮಾಡಿದ್ದೇನೆ."

ಈ ಮಾತುಗಳನ್ನು ಸಂಪೂರ್ಣವಾಗಿ ನಂಬುವುದು ಕಷ್ಟವಾಗಿದೆ. ಈ ಕೈಫಿಯತ್ತಿಗೆ ನಿಜವಾದ ಕಾರಣವೆಂದರೆ, ಪೋಲೀಸರು ಇತರರ ಮೇಲೆಸಗಿದ ಅತ್ಯಾಚಾರ. ಈ ಕೊಲೆಯ ಸಂಬಂಧದಲ್ಲಿ ಇದಕ್ಕೆ ಏನೂ ಸಂಬಂಧವಿರದ ನಾತೂ ಬಂಧುಗಳನ್ನು ಸೆರೆಯಲ್ಲಿಟ್ಟು ಹಿಂಸಿಸತೊಡಗಿದ್ದರು. ಟಿಳಕರನ್ನೂ ಈ ನಿಮಿತ್ತದಿಂದ ಬಂಧಿಸಲಾಗಿತ್ತು. ತಮ್ಮ ಕ್ಲಬ್ಬಿನ ಹಲವಾರು ಸದಸ್ಯರನ್ನು ಹಿಡಿದು ಚಿತ್ರಹಿಂಸೆಗೆ ಗುರಿ ಮಾಡುತ್ತಲಿದ್ದರು. ನೂರಾರು ಪೋಲೀಸರನ್ನು ನಗರದಲ್ಲಿ ಇರಿಸಿ ಅದರ ವೆಚ್ಚವನ್ನೆಲ್ಲ ಪುಣೆಯ ಜನತೆಯ ಮೇಲೆ, ಒಂದೂವರೆ ಲಕ್ಷ ರೂ. ಗಳಷ್ಟು ದಂಡಗಂದಾಯದ ರೂಪಯಲ್ಲಿ, ಹೇರಲಾಗಿದ್ದಿತು. ಚಾಫೇಕರ ಕುಟುಂಬದ ಇತರ ಜನರನ್ನೂ ಪೋಲೀಸರು ತಮ್ಮ ದಬ್ಬಾಳಿಕೆಯಿಂದ ದೂರವಿರಿಸಿದ್ದಿಲ್ಲ. ಇದೆಲ್ಲ ಹಿನ್ನೆಲೆ ದಾಮೋದರನನ್ನು ಈ ಸಮ್ಮತಿಸಾಕ್ಷಿಗೆ ಪ್ರೇರಿಸಿತೆನ್ನಬಹುದು. ಬ್ರೆವಿನ್ನನ ಆಶ್ವಾಸನಗಳೂ ಒಳ್ಳೆಯ ನಡತೆಯೂ ಅದಕ್ಕೆ ಗಾಳಿ ಬೀಸಿದುವು ಇಷ್ಟಕ್ಕೂ ಒಮ್ಮೆ ಸಿಕ್ಕ ಮೇಲೆ ಈ ಕಾರ್ಯವನ್ನು ಮುಚ್ಚಿ ಇಡುವುದಕ್ಕೇಕೆ ವಿಶೇಷವಾಗಿ ಧಡಪಡಿಸಬೇಕು? ಜನತೆಗಾಗಿ ಮಾಡಿದ ಕಾರ್ಯ ಜನಕ್ಕೆ ತಿಳಿಯುವುದೇ ಒಳ್ಳೆಯದಲ್ಲವೆ?

ಮುಂದೆ ಒಂದು ತಿಂಗಳಲ್ಲಿಯೆ ಕೋರ್ಟಿನ ಮುಂದೆ ಕೇಸು ವಿಚಾರಣೆಗೆ ಬಂದಿತು ಸೆಶನ್ಸಗೆ ಹಾಕಲಾಯಿತು. ಆಗ ಚಾಫೇಕರ ಸಿಂಹಕ್ಕೆ ತಾನು ಮೋಸಹೋದುದರ ಅರಿವಾಗತೊಡಗಿತು. ಬ್ರೆವಿನ್ನನ ನಿಜ ವೇಷ ಗೊತ್ತಾಯಿತು. ತನ್ನನ್ನು ರಕ್ಷಿಸಿಕೊಳ್ಳಬೇಕೆಂದರೆ ವಕೀಲರ ನೆರವು ಸುಲಭವಾಗಿ ದೊರೆಯುವಂತಿರಲಿಲ್ಲ. ಈ ವಿಷಯದಲ್ಲಿ ಬ್ರೆವಿನ್ ಮಾತುಕೊಟ್ಟಂತೆ ನೆರವು ನೀಡಲಿಲ್ಲ. ತನಗಾಗಿ ಗೊತ್ತು ಮಾಡಿದ್ದ 'ಪಾಪರ್' ವಕೀಲನಾದ ಬ್ಯಾನರ್ಜಿಯೊಡನೆ ಮಾತನಾಡಲೂ ಅವಕಾಶ ಮಾಡಿಕೊಡಲಿಲ್ಲ. ದಿನಾಂಕ ೩ ನೇ ಫೆಬ್ರುವರಿ ೧೮೯೮ ರಂದು ಸಂಗಮದಲ್ಲಿ, ದಾಮೋದರನ ಬಾಳಿನಲ್ಲಿ

# 'ಅನಾಸಿನ್'

## ನಾಲ್ಕು ಔಷಧಗಳಿಂದ ಕೂಡಿದ

| | | | |
|---|---|---|---|
| ನೋವನ್ನು ಗುಣಪಡಿಸುತ್ತದೆ | ನರಗಳನ್ನು ಶಾಂತಪಡಿಸುತ್ತದೆ | ನಿರುತ್ಸಾಹವನ್ನು [illegible] | ಜ್ವರವನ್ನು ಕಡಿಮೆಗೊಳಿಸುತ್ತದೆ |

ಡಾಕ್ಟರರ ಸುರಕ್ಷಿತ ಔಷಧದಂತೆ ಶಾಸ್ತ್ರೀಯ ರೀತಿಯಲ್ಲಿ ಸಮ್ಮಿಲನವಾದ ನಾಲ್ಕು ಔಷಧಗಳಿಂದ ಕೂಡಿದ 'ಅನಾಸಿನ್'' ನೋವನ್ನು ಸಂಪೂರ್ಣವಾಗಿ, ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಅನಾಸಿನ್ (1) ತಲೆ ನೋವು, ಶೀತ, ಜ್ವರ, ಹಲ್ಲು ನೋವು ಹಾಗೂ ಸ್ನಾಯುಗಳ ನೋವನ್ನು ಅಧಿಕ ಶೀಘ್ರವಾಗಿ ಉಪಶಮನಗೊಳಿಸುತ್ತದೆ; (2) ಗಾಬರಿಗೊಳಿಸುವ ನರಗಳಿಗೆ ಶಾಂತತೆಯನ್ನೀಯುತ್ತದೆ—ನೀವು ಸುಖವಾಗಿ, ಆರಾಮದಿಂದಿರುವಂತೆ ಮಾಡುತ್ತದೆ; (3) ನಿರುತ್ಸಾಹವನ್ನು ಹೋಗಲಾಡಿಸುತ್ತದೆ; (4) ಜ್ವರವನ್ನು ಕಡಿಮೆ ಮಾಡುತ್ತದೆ. ನಾಲ್ಕು ಔಷಧಗಳಿಂದ ಕೂಡಿರುವ ಅನಾಸಿನ್, ನೋವನ್ನು ಉಪಶಮನಗೊಳಿಸುವುದಕ್ಕೆ ಅಧಿಕ ಉತ್ತಮವಾಗಿದೆ. ಯಾವಾಗಲೂ ಮನೆಯಲ್ಲಿ 'ಅನಾಸಿನ್'' ಇಟ್ಟುಕೊಳ್ಳಿರಿ.

● ಆರೋಗ್ಯಕರವಾಗಿರುವ ಸೆಲೋಫೇನ್ ಪ್ಯಾಕ್‌ನಲ್ಲಿ ಸೀಲ್‌ಮಾಡಿದ ಎರಡು ಬಿಲ್ಲೆಗಳೂ, ಭದ್ರವಾಗಿ ಪಿಲ್ಫರ್-ಪ್ರೂಫ್ ಪ್ಯಾಕಿಂಗ್‌ನಲ್ಲಿ ಮುಚ್ಚಲ್ಪಟ್ಟ ಸೀಸೆಗಳಲ್ಲಿ 32 ಬಿಲ್ಲೆಗಳೂ—ಮನೆಗಳಲ್ಲಿ ಉಪಯೋಗಿಸಲು ಅನುಕೂಲವಾಗುವಂತೆ—ದೊರೆಯುತ್ತವೆ.






## ಅನಾಸಿನ್ ಅಧಿಕ ಉತ್ತಮವಾಗಿದೆ

*Registered User:* GEOFFREY MANNERS & CO. LIMITED

KAN. 2-43

ಮಹತ್ವದ್ದಾದ ತೀರ್ಪು ಹೇಳಲ್ಪಟ್ಟಿತು. ಅದೇ, ರ್‍ಯಾಂಡನನ್ನು ಕೊಂದದ್ದಕ್ಕಾಗಿ ತನಗೆ ಮರಣ ದಂಡನೆ! ಇದೇ ಸಂಗಮದಲ್ಲಿ ೧೯ ವರ್ಷಗಳ ಹಿಂದೆ ವಾಸುದೇವ ಬಲವಂತ ಫಡಕೆಗೆ ಶಿಕ್ಷೆ ವಿಧಿಸಲಾಗಿತ್ತು.

ಈ ನಿರ್ಣಯದಿಂದ ದಾಮೋದರನು ಎಳ್ಳಷ್ಟೂ ಅಧೀರನಾಗಲಿಲ್ಲ. ಅದನ್ನು ಓದಿ ಹೇಳಿದಾಗ "ಇದಕ್ಕೂ ಹೆಚ್ಚಿನ ಶಿಕ್ಷೆಯಿಲ್ಲವೆ?" ಎಂದು ತುಂಬಿದ ಕೋರ್ಟಿನಲ್ಲಿ ಉದ್ಗಾರವೆತ್ತಿದನು. ಆದರೆ ಈ ತೀರ್ಪಿನಿಂದ ದೇಶದ ತುಂಬೆಲ್ಲ ಪ್ರತಿಧ್ವನಿ ಎದ್ದಿತು. ಹೈಕೋರ್ಟಿಗೆ ಅಪೀಲ್ ಮಾಡುವ ವಿಷಯದಲ್ಲಿ ಕೇವಲ ಏಳು ದಿನಗಳ ಅವಧಿಯನ್ನು ಕೊಡಲಾಗಿದ್ದಿತು. ಆಗ ದಾಮೋದರನು ಟಿಳಕರ ಸಹಾಯವನ್ನು ಕೋರಿದನು. ಅವರೋ ಯೆರವಡಾ ಜೇಲಿನಲ್ಲಿ ಇದ್ದರು. ಆದರೂ ದಾಮೋದರನಿಗಾಗಿ ಅವರನ್ನು ಕೆಲ ಹೊತ್ತು ಬಿಡುಗಡೆ ಮಾಡಿದರು; ನ್ಯಾಯದೃಷ್ಟಿಯಿಂದೇನೂ ಅಲ್ಲ ಸಾಧ್ಯವಾದರೆ ಟಿಳಕರನ್ನೂ ಇದರಲ್ಲಿ ಹಿಡಿದು ಹಾಕಲಿಕ್ಕೆಂದು!

ಮೂರು ತಾಸಿನವರೆಗೆ ಇಬ್ಬರೂ ಜೇಲಿನಲ್ಲೇ ಮಾತನಾಡಿದರು. ದಾಮೋದರನ ಅಪೇಕ್ಷೆಯಂತೆ ಅವರೇ ಹೈಕೋರ್ಟ್ ಅಪೀಲಿನ ಕರಡನ್ನು ತಯಾರಿಸಿಕೊಟ್ಟರು. ಅದೊಂದು ಮಾದರಿಯ ಬರವಣಿಗೆಯಾಗಿದೆಯೆಂದು ಇಂದಿಗೂ ಜನಜನಿತವಿದೆ. ಇತ್ತ ಪುಣೆಯ ಜನತೆ ದಾಮೋದರನಿಗೆ ನ್ಯಾಯ ದೊರೆಯಬೇಕೆಂದು ಒಂದು ಸಮಿತಿಯನ್ನು ರಚಿಸಿ ನಿಧಿಯನ್ನು ಸಂಗ್ರಹಿಸಿ ಅವನ ಪರವಾಗಿ ಹೈಕೋರ್ಟಿನಲ್ಲಿ ವಾದಿಸಲು ಬ್ರಾನ್‌ಸನ್ ಎಂಬ ಬ್ಯಾರಿಸ್ಟರನನ್ನು ಗೊತ್ತುಮಾಡಿತು.

ದಿನಾಂಕ ೨-೩-೧೮೯೮ ರಂದು ಇಬ್ಬರು ಹೈಕೋರ್ಟ್ ನ್ಯಾಯಾಧೀಶರ ಮುಂದೆ ಈ ವಿಚಾರಣೆ ನಡೆಯಿತು. ಅವರಲ್ಲಿ ಪಾರ್ಸನ್ಸ್ ಬಿಳಿಯನಾಗಿದ್ದರೆ, ಪುಣೆಯ ಸುಧಾರಕ ವರ್ಗದ ಮುಂದಾಳಾದ ಮಹಾದೇವ ಗೋವಿಂದ ರಾನಡೆ ಇನ್ನೊಬ್ಬರಿದ್ದರು. ದಾಮೋದರನನ್ನು ಅವರು ಈ ಹಿಂದೆಯೆ ಬಲ್ಲವರಾಗಿದ್ದರು.

ದಾಮೋದರನೇ ಕೊಲೆ ಮಾಡಿದವನೆಂದು ಹೇಳುವುದಕ್ಕೆ ಇದ್ದ ಇತರ ಪುರಾವೆಗಳಿಗಿಂತ ಅವನ ಸ್ವಂತದ ಹೇಳಿಕೆಯೇ ಒಂದು ದೊಡ್ಡ ಸಾಕ್ಷ್ಯವಾಗಿದ್ದಿತು. ಈ ಹೇಳಿಕೆಯನ್ನು ಪೋಲೀಸರು ವಂಚನೆ, ಸವಿಮಾತುಗಳಿಂದ ಪಡೆದುಕೊಂಡಿದ್ದಾರೆಂದು ಅಪೀಲಿನಲ್ಲಿ ಮಂಡಿಸಲಾಯಿತು. ಆದರೂ ಪ್ರಯೋಜನವಾಗಲಿಲ್ಲ. ಹೈಕೋರ್ಟು ಶಿಕ್ಷೆಯನ್ನು ಸ್ಥಿರೀಕರಿಸಿತು.

ದಾಮೋದರನು ಮುಂಬೈ ಗವರ್ನರನಿಗೂ ಅಪೀಲ್ ಮಾಡಿದನು. ಅದರಲ್ಲಿ ಅವನು ಬ್ರೂವಿನ್ನನ ಮೋಸವನ್ನು ಬಯಲಿಗೆಳೆಯಲು ಪ್ರಯತ್ನಪಟ್ಟನು. ತನ್ನನ್ನು ಸಿಕ್ಕಿಸಲು, ಎರಡು ಬಾರಿ ಜೇಲನ್ನು ಕಂಡ ದ್ರವಿಡನಂತಹ ಖೊಟ್ಟಿ ಜನರ ಪುರಾವೆಯನ್ನು ಯಾವ ಆಮಿಷಗಳಿಂದ ಪಡೆದನೆಂಬುದನ್ನು ಸ್ಪಷ್ಟವಾಗಿ ವಿವರಿಸಿದನು. ದಾಮೋದರನು ಒಮ್ಮೆ ಮುಂಬೈ, ಅಲ್ಲಿಂದ ಪುಣೆ ಹೀಗೆ ಎರಡು ಕಡೆಗೆ ತನ್ನ ಸಮ್ಮತಿ ಸಾಕ್ಷ್ಯವನ್ನು ಕೊಟ್ಟಿದ್ದನಷ್ಟೆ. ಮುಂಬಯಿಯಲ್ಲಿಯ ಹೇಳಿಕೆಯನ್ನು ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟನ ಬಂಗಲೆಯಲ್ಲಿ ತೆಗೆದುಕೊಳ್ಳಲಾಯಿತು, ಕೋರ್ಟಿನಲ್ಲಲ್ಲ. ಅದರಿಂದ ಯಾವ ರೀತಿ ಬಲುಮೆಗೆ ಒಳಪಡಿಸಿರಬೇಕು ಎಂಬುದು ಸ್ಪಷ್ಟವಾಗುತ್ತದೆ. ಇನ್ನು ಪುಣೆಯಲ್ಲಿ ಕೊಟ್ಟ ಹೇಳಿಕೆಯೆಂದರೆ, ಮುಂಬಯಿಯಲ್ಲಿ ಕೊಟ್ಟ ಹೇಳಿಕೆ ನಿಜವೆಂದು ಹೇಳಿದ್ದಿದೆ. ಪುಣೆಯಲ್ಲಿ ಹೇಳಿಕೆ ಕೊಡುವಾಗ ಸಶಸ್ತ್ರ ಪೋಲೀಸರ ಪಡೆಯೇ ತನ್ನ ಹಿಂದೆ ಇದ್ದಿತು. ಆದುದರಿಂದ ನಿಜ ಸಂಗತಿ ಯಾವುದೆನ್ನುವುದನ್ನು ಸ್ಪಷ್ಟ ಮಾಡಲಿಕ್ಕೆ ಅವಕಾಶ ಸಿಗಲಿಲ್ಲ ಎಂದೆಲ್ಲ ಹೇಳಲಾಯಿತು.

ಬ್ರೂವಿನ್ನನು ಮಾಡಿದ್ದ ಇನ್ನೊಂದು ಮೋಸದ ಪ್ರಯತ್ನವೆಂದರೆ ಪುಣೆಯ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳಿಂದ ಪ್ರಚೋದನೆಗೊಂಡು ಈ ಕೊಲೆಗಳನ್ನು ಮಾಡಿದೆ ಎಂದು ದಾಮೋದರನಿಂದ ಹೇಳಿಸುವುದಾಗಿತ್ತು. ಅದರಿಂದ ಟಿಳಕರು, ನಾತು ಬಂಧುಗಳು ಇವರನ್ನೂ ಇದರಲ್ಲಿ ತೊಡಕಿಸುವ ಸರಕಾರದ ಆಶಯ ಕೈಗೂಡಬಹುದಿತ್ತು. ಆದರೆ ದಾಮೋದರನು

ಹಾಗೆ ಎಂದಿಗೂ ಹೇಳಲಿಲ್ಲ. ಮತ್ತು ಬ್ರೆವಿನ್ನನ ಈ ಆಶಯವನ್ನೂ ದಾಮೋದರನು ತನ್ನ ಅಪೀಲಿನಲ್ಲಿ ಬಯಲಿಗೆಳೆದನು. ಆದರೆ ಗವರ್ನರನೂ ಈ ಅಪೀಲನ್ನು ತಿರಸ್ಕರಿಸಿದನು.

ಕೊನೆಗೆ ೧೮ ನೇ ಎಪ್ರಿಲ್ ೧೮೯೮ ರಂದು ಅವನನ್ನು ನೇಣುಹಾಕಬೇಕೆಂದು ನಿರ್ಧರವಾಯಿತು. ಸೇಡಿನಿಂದ ಹುಚ್ಚೆದ್ದ ಸರಕಾರವು ಪುಣೆಯಲ್ಲಿಯ ಒಂದು ಕೂಟದಲ್ಲಿ ಅವನಿಗೆ ಈ ಶಿಕ್ಷೆ ವಿಧಿಸಬೇಕೆಂದು ಮಾಡಿತ್ತು. ಆದರೆ ಜನದ ದ್ವೇಷಕ್ಕೆ ಹೆದರಿ ಯರವಡಾಕ್ಕೆ ತಂದರು.

ಅವನ ಕೊನೆಯ ಇಚ್ಛೆಯೇನೆಂದು ಕೇಳಿದಾಗ ತನಗೆ ಒಂದು ಭಗವದ್ಗೀತೆಯನ್ನು ಕೊಡಬೇಕೆಂದೂ ತನ್ನ ದಹನಸಂಸ್ಕಾರ ಕಾರ್ಯವನ್ನು ಟಿಳಕರಿಂದ ಮಾಡಿಸಬೇಕೆಂದೂ ಹೇಳಿದನು. ತನ್ನ ತಂದೆಗೆ ಸುದೀರ್ಘ ಪತ್ರವನ್ನು ಬರೆದು ತಾನು ಮಾಡಿದ ಕಾರ್ಯಕ್ಕಾಗಿ ತನ್ನನ್ನು ಬೈಯದೇ ಆಶೀರ್ವದಿಸಬೇಕೆಂದೂ ಮದುವೆಯ ಮೆರವಣಿಗೆಗಿಂತ ತನ್ನ ಈ ಸಾವಿನ ಮೆರವಣಿಗೆ ಹೆಚ್ಚಿನದೆಂದೂ ಮುಂದಿನ ಜನ್ಮಕ್ಕೆ ನೀವೇ ತಂದೆ ತಾಯಿಗಳಾಗಬೇಕೆಂದೂ ಅತ್ಯಂತ ಕರುಣಾಪೂರಿತವಾಗಿ ಕೇಳಿಕೊಂಡನು.

ಗಲ್ಲಿನ ಶಿಕ್ಷೆಯ ಹಿಂದಿನ ದಿವಸ ದಾಮೋದರನು ಸಂಪೂರ್ಣ ಉಪವಾಸ ಮಾಡಿದನು. ಪ್ರಾರ್ಥನೆ, ಮಂತ್ರ-ಪಠನಗಳಲ್ಲಿಯೆ ಇಡೀ ದಿನವನ್ನು ಕಳೆದನು ಮತ್ತು ರಾತ್ರಿಗೆ ಇಷ್ಟೊಂದು ಸುಖನಿದ್ರೆಯಲ್ಲಿದ್ದನಲ್ಲ, ಬೆಳಿಗ್ಗೆ ಅವನನ್ನು ಬಂದು ಎಬ್ಬಿಸಬೇಕಾಯಿತು.

ಬೆಳಗಿನ ಆರು ಗಂಟೆಗೆ ನೇಣಿನ ಕಾರ್ಯಕ್ರಮವೆಂದು ಗೊತ್ತಾಗಿತ್ತು. ೬-೩೦ರ ಸುಮಾರಿಗೆ ಜೇಲಿನ ಅಧಿಕಾರಿಯಾದ ಗೈಡರ್ ಬಂದನು. ಅವನೊಂದಿಗೆ ದಾಮೋದರ ಅತ್ಯಂತ ಸಾದಾ ರೀತಿಯಲ್ಲಿ ಸಹಜ ಧ್ವನಿಯಲ್ಲಿ ಮಾತನಾಡುವುದನ್ನು ಕಂಡು,ಅಲ್ಲಿ ಇದ್ದವರೂ ಪತ್ರಿಕೆಗಳ ವರದಿಗಾರರೂ ಆಶ್ಚರ್ಯಪಟ್ಟರು. "ಬರಲಿಕ್ಕೆ ತಡವೇಕೆ ಮಾಡಿದಿರಿ? ಎಲ್ಲಿ ಹೋಯಿತು ನಿಮ್ಮ ನಿಯಮಿತತನ?" ಎಂಬುದಾಗಿ ನಗುತ್ತಲೇ ಕೇಳಿದನು.

"ಅಲ್ಲ. ನೀನು ಸಾಯಬೇಕಿದ್ದವ. ಅದಕ್ಕಾಗಿ—"

"ಅದರಲ್ಲೇನು ಮಹಾ? ರ್‍ಯಾಂಡ್‌ನು ಗುಂಡಿನೇಟಿನಿಂದ ಸತ್ತನು. ಮತ್ತೊಬ್ಬ ಕುದುರೆಯ ಮೇಲಿಂದ ಬಿದ್ದು ಸಾಯಬಹುದು. ನನ್ನ ಸಾವು ಹೀಗೆ."

"ನಿನ್ನ ಬಂಧು-ಬಳಗದವರಿಗೆ ನಿನ್ನ ಸಂದೇಶವೇನು?"

"ನಗುತ್ತ ಸತ್ತನೆಂದು ಹೇಳಿರಿ."

"ಸಾಯುವ ಗಳಿಗೆಯಲ್ಲಾದರೂ ಸತ್ಯವನ್ನು ನುಡಿಯಬಾರದೇ?"

"ಹುಂ. ಈಗ ಸತ್ಯ, ಸುಳ್ಳು— ಎರಡರ ಬೆಲೆ ಒಂದೇ ಇದೆ."

ವಧಸ್ಥಾನದ ಹತ್ತಿರ ಅವನನ್ನು ನಿಲ್ಲಿಸಿ, ಮರಣದ ವಾರಂಟನ್ನು ಓದಲಾಯಿತು. ದಾಮೋದರ ಅದರ ಕಡೆಗೆ ಏನೂ ಗಮನವನ್ನು ಕೊಡದೇ "ನಾರಾಯಣ, ನಾರಾಯಣ. ಜೈ ಗೋವಿಂದ ಹರಿ! ಜೈ ಗೋಪಾಲ ಹರಿ!" ಎಂಬ ಪ್ರಾರ್ಥನೆಯಲ್ಲಿ ಮಗ್ನನಾಗಿದ್ದನು. "ಇನ್ನೇನಾದರೂ ಹೇಳಲಿಕ್ಕಿದೆಯೆ?" ಎಂದು ಮತ್ತೊಮ್ಮೆ ಕೇಳಿದಾಗ—

"ಕಾಹೀ ಸಾಂಗಾಯಚೇ ನಾಹಿ"

ಎಂದು ನುಡಿದು ಮತ್ತೆ ದೇವರ ನಾಮೋಚ್ಚಾರಣೆಗೆ ತೊಡಗಿದನು.

ಅಲ್ಲಿಂದ ಅವನ ಕೈಗಳನ್ನು ಹಿಂದೆ ಕಟ್ಟಲಾಯಿತು. ಮುಖಕ್ಕೆ ಬಟ್ಟೆ ಹೊದಿಸಲಾಯಿತು. ಯಾರ ಸಹಾಯವಿಲ್ಲದೆ ನೇಣಿನ ಬಳಿಯ ಮೆಟ್ಟಲನ್ನು ಏರಿ ನಿಂತನು. ಕುತ್ತಿಗೆಗೆ ನೇಣು ಬಿದ್ದರೂ ಮಂತ್ರದ ಧ್ವನಿ ಕೇಳಿಸುತ್ತಿತ್ತು. ಹಗ್ಗದ ಉರುಲು ಬಿಗಿಯಾಗಿ ಕೊನೆಗೊಮ್ಮೆ ಕೆಳಗಿನ ತಗ್ಗಿನಲ್ಲಿ ಬಿದ್ದನು. ಕೈಯಲ್ಲಿ ಹಿಡಿದಿದ್ದ ಭಗವದ್ಗೀತೆ ಹಾಗೆಯೇ ಇತ್ತು. ಅದನ್ನು ಕಿತ್ತು ತೆಗೆಯಬೇಕಾಯಿತು! ಅವನ ಅಪೇಕ್ಷೆಯಂತೆ 'ಬಂಡ್ ಗಾರ್ಡನ್ನಿ'ನ ಸ್ಮಶಾನದಲ್ಲಿ ದಹನ ಕ್ರಿಯೆಯನ್ನು ನಡೆಸಲಾಯಿತು.

ಆದರೆ ಈ ಪ್ರಕರಣ ಇಲ್ಲಿಗೇ ಮುಗಿಯಲಿಲ್ಲ. ದಾಮೋದರನ ಜೊತೆಯಲ್ಲೇ ಹೆಜ್ಜೆಯಿಟ್ಟು ನಡೆದಿದ್ದ ಬಾಳಕೃಷ್ಣ ಇನ್ನೂ ಇದ್ದ. ವಾಸು

ದೇವ ಮತ್ತು ರಾನಡೆ ಇವರೂ ಇದ್ದರು. ಅವರ ಅಂತ್ಯವೂ ಅಷ್ಟೇ ಮನೋವೇಧಕವಾಗಿದೆ.

ಸರಕಾರಕ್ಕೆ ದಾಮೋದರನನ್ನು ಹಿಡಿದು ಕೊಡಲು ಕಾರಣನಾದ ದ್ರವಿಡನನ್ನು ಬಿಡುಗಡೆ ಮಾಡಿ, ಅವನಿಗೆ ಬಹುಮಾನದ ಹಣವನ್ನು ಕೊಡುವ ಇಷ್ಟವಿರಲಿಲ್ಲವೇನೋ. ಆದರೆ ಬ್ರೂವಿನ್ನನು ತಾನು ದ್ರವಿಡನಿಗೆ ಕೊಟ್ಟ ವಚನವನ್ನು ಸರಕಾರವು ಪೂರೈಸಲೇಬೇಕು, ಇಲ್ಲವಾದರೆ ಸರಕಾರದ ಮರ್ಯಾದೆ ಹೋಗುವುದಲ್ಲದೆ ಇನ್ನೊಮ್ಮೆ ಇಂಥ ಪ್ರಸಂಗಗಳು ಬಂದರೆ ಮಾಫೀ ಸಾಕ್ಷಿದಾರರು ಮುಂದೆ ಬರಲಿಕ್ಕಿಲ್ಲವೆಂದು ಜೋರಿನಿಂದ ಪತ್ರ ಬರೆದನು. ಪರಿಣಾಮವಾಗಿ ಗಣೇಶ ದ್ರವಿಡನನ್ನು ಬಿಡುಗಡೆ ಮಾಡಲಾಯಿತು. ಆದರೆ ಕೊಡಬೇಕಿದ್ದ ೨೦ ಸಾವಿರದಲ್ಲಿ ಅರ್ಧದಷ್ಟು ಮಾತ್ರ ಹಣವನ್ನು ಅವನಿಗೆ ಕೊಡಲಾಯಿತು. ಈ ಕೊಲೆಗಳಿಗೆ ಕಾರಣನಾದ ಇನ್ನೊಬ್ಬ ವ್ಯಕ್ತಿ ಬಾಳಕೃಷ್ಣ ಇನ್ನೂ ಕೈಗೆ ಸಿಕ್ಕಿರಲಿಲ್ಲವಷ್ಟೆ! ದ್ರವಿಡನು ಎಷ್ಟು ಪ್ರತಿಭಟಿಸಿದರೂ ಪ್ರಯೋಜನವಾಗಲಿಲ್ಲ.

ತಲೆ ಮರೆಸಿಕೊಂಡ ಬಾಳಕೃಷ್ಣನು ನಾಸಿಕ, ಗದಗ ಮುಂತಾದ ಊರುಗಳಲ್ಲೆಲ್ಲ ಅಲೆದಾಡಿದ. ಲುಂಗಿ, ಫೇಟಾಗಳನ್ನು ಸುತ್ತಿಕೊಂಡು ಗಡ್ಡ ಬಿಟ್ಟದ್ದರಿಂದ ಪಂಜಾಬಿಯಂತೆ ಕಾಣುತ್ತಿದ್ದ. ಎಲ್ಲಿಯೂ ಸುರಕ್ಷಿತವೆನಿಸದೆ ಆನೆಗೊಂದಿಗೆ ಬಂದನು. ಅಲ್ಲಿಯ ಅಡವಿಗಳ ಮೂಲಕ ಹಾಯ್ದು ಕೊನೆಗೆ ನಿಜಾಮನ ಗಡಿಯನ್ನು ಸೇರಿದನು. ಅಲ್ಲಿಯೂ ಪೋಲೀಸರು ಅವನ ಪಾಳತಿಯ ಮೇಲೆಯೆ ಇದ್ದರು. ಕೊನೆಗೆ ಸಾತಪುಡಾ ಬೆಟ್ಟಗಳಲ್ಲಿ ವಾಸಿಸುತ್ತಿದ್ದ ಯರ್ಕಳಿ ಜನರೊಂದಿಗೆ ಕೂಡಿಕೊಂಡನು. ಅಲ್ಲಿ ಅವನನ್ನು ಹಿಡಿಯುವುದು ಕಠಿಣವೆಂದು ತಿಳಿದ ಪೋಲೀಸ್ ಅಧಿಕಾರಿಗಳು ಯರ್ಕಳಿ ಜನರ ಮುಂದಾಳುಗಳನ್ನೇ ಒಡೆದುಕೊಂಡು ಬಾಳಕೃಷ್ಣನನ್ನು ತಮಗೆ ಒಪ್ಪಿಸಬೇಕೆಂದು ಕೇಳಿ, ೬೦೦ ರೂ. ಯ ಹಣದಾಸೆಯನ್ನು ತೋರಿಸಿದರು. ಕೊನೆಗೆ ಆ ಮುಂದಾಳುಗಳು ಬಾಳಕೃಷ್ಣನನ್ನು ಕರೆತಂದು, ಪೋಲೀಸರು ಅವನ ಬೆನ್ನ ಹಿಂದೆಯೇ ಇದ್ದಾರೆಂದೂ ಗೋದಕ ರೇಲ್ವೆ ಸ್ಟೇಶನ್ನಿನಲ್ಲಿ ಗಾಡಿ ಹತ್ತಿ ಗೋವಾಕ್ಕೆ ಹೋಗಿ ಅಲ್ಲಿ ತಲೆಮರೆಸಿಕೊಳ್ಳುವುದು ಒಳ್ಳೆಯದೆಂದೂ ಸ್ಟೇಶನ್ನಿನ ವರೆಗೆ ಅವನನ್ನು ಹೇಗೂ ಪಾರು ಮಾಡುವೆವೆಂದೂ ಹೇಳಿದರು. ಅವರ ಮೋಸವನ್ನು ತಿಳಿಯದ ಬಾಳಕೃಷ್ಣನು ಅತಿ ಸುಲಭವಾಗಿ ಪೋಲೀಸರ ವಶಕ್ಕೆ ಬೀಳಬೇಕಾಯಿತು. ಮುಂದಿನ ಎರಡು ದಿನಗಳಲ್ಲಿಯೇ ಎಂದರೆ ೧೮೯೮ ರ ಡಿಸೆಂಬರ್ ೧೮ ರಂದು ಅವನನ್ನು ಪುಣೆಗೆ ತರಲಾಯಿತು. ನಿಜಾಮನ ಪೋಲೀಸರು ಉಳಿದ ಹತ್ತು ಸಾವಿರದ ಬಹುಮಾನವನ್ನು ಗಿಟ್ಟಿಸಿಕೊಂಡರು.

ಇತ್ತ ವಾಸುದೇವನು ಈ ಮುಂಚೆಯೇ ಪುಣೆಗೆ ಮರಳಿಬಂದಿದ್ದನು. ದಾಮೋದರ ಬಾಳಕೃಷ್ಣರ ಮೇಲೆ ಇದ್ದಷ್ಟು ಪುರಾವೆಗಳು ಅವನ ಬಗ್ಗೆ ಇರಲಿಲ್ಲವಾದ್ದರಿಂದ ಪೋಲೀಸರು ಅವನನ್ನು ಬಂಧಿಸುವ ಗೋಜಿಗೆ ಹೋಗಿರಲಿಲ್ಲ. ರಾನಡೆಯೂ ಅದೇ ರೀತಿ ಹೊರಗುಳಿದಿದ್ದನು.

ಅವರಿಬ್ಬರ ಮುಂದೆ ಈಗ ಒಂದೇ ಒಂದು ಗುರಿ ಕಾಣುತ್ತಿದ್ದಿತು. ಅದೆಂದರೆ ವಂಚಕಶಿರೋಮಣಿದಳಾದ ದ್ರವಿಡ ಬಂಧುಗಳ ಪ್ರಾಣಹರಣ. ಅಲ್ಲದೆ ದಾಮೋದರ, ಬಾಳಕೃಷ್ಣರ ಸದ್ಯದ ಸ್ಥಿತಿಗೆ ಕಾರಣನಾದ ರಾಮಜಿ ಪಾಂಡೆ ಎಂಬ ಮುಖ್ಯ ಸಿಪಾಯಿಯನ್ನೂ ಸಾಧ್ಯವಾದರೆ ಬ್ರೂವಿನ್‌ನನ್ನೂ ಮುಗಿಸುವ ವಿಚಾರವಿದ್ದಿತು. ವಿಶೇಷತಃ ರಾಮಜಿ ಪಾಂಡೇ ಮೇಲೆ ಅವರ ಸಿಟ್ಟು ಬಹಳವಿದ್ದಿತು. ಒಮ್ಮೆ ಅವನಿಗಾಗಿ ಜೋಗೇಶ್ವರೀ ಲೇನಿನಲ್ಲಿ ಕಾಯ್ದರು. ಆ ದಿನ ಅವನು ಬರಲಿಲ್ಲ. ಮತ್ತೊಮ್ಮೆ ಒಂದು ರಾತ್ರಿ ಹತ್ತಾರು ಪೋಲೀಸರೊಂದಿಗೆ ಪಾಂಡೇ ಹೊರಟಿದ್ದಾಗ ವಾಸು ಪಿಸ್ತೂಲ್ ಹಾರಿಸಿದನು. ಆದರೆ ಅದರ ಗುರಿ ತಪ್ಪಿತು. ಆಗ ವಾಸು ಮತ್ತು ರಾನಡೆ ಪೋಲೀಸರ ಕೈಗೆ ಸಿಗದೇ ಓಡಿ ಪಾರಾದರು. [illegible] ಅವರಲ್ಲಿ ಧಗಧಗಿಸುತ್ತಿರುವಾಗ ಕೊನೆಗೆ ದ್ರವಿಡರನ್ನು ಸರಕಾರ [illegible] ಗಡೆ ಮಾಡಿದರು.

ಒಂದು ರಾತ್ರಿ ೮-೩೦ ರ ಸುಮಾರಿಗೆ ವಾಸು, ಸಾಠೆ ಮತ್ತು ರಾನಡೆ ಪಂಜಾಬಿಗಳಂತೆ ವೇಷ ಧರಿಸಿ, ದ್ರವಿಡರ ಮನೆಗೆ ಬಂದರು ಅವರ ಬಣ್ಣದ ಲುಂಗಿ, ಕೆಂಪು ಜಾಕೀಟು, ದೊಡ್ಡ

ಪೇಶಾ ಇವುಗಳಿಂದ ಅವರ ಗುರುತು ದ್ರವಿಡ ಬಂಧುಗಳಿಗೆ ಸಿಕ್ಕಲೇ ಇಲ್ಲ. ತಾವು ಬ್ರೆವಿನ್ನನ ಕೈಕೆಳಗೆ ಕೆಲಸ ಮಾಡುವವರೆಂದೂ ತಮ್ಮಿಬ್ಬ ರನ್ನು ಕರೆತರಲು ಆತ ಹೇಳಿದ್ದಾನೆಂದೂ ನುಡಿದು ಅವರಿಬ್ಬರನ್ನೂ ಹೊರ ಹೊರಡಿಸಿದರು. ನಡುದಾರಿಯಲ್ಲಿ ಬರುತ್ತಲೂ ದಡದಡನೆ ಆ ಮೋಸಗಾರರ ಮೇಲೆ ಗುಂಡಿನ ಮಳೆಗರೆದವರೇ ತಮ್ಮ ಸ್ಥಳಗಳಿಗೆ ಹಿಂತಿರುಗಿದರು. ಗುಂಡಿನ ಸಪ್ಪಳ ಬಹುದೂರದ ವರೆಗೆ ಕೇಳಿತು. ಆಗಿನ್ನೂ ಒಂಬತ್ತು ಗಂಟೆಯಾಗಿರಲಿಲ್ಲ. ಸರಿಯಾಗಿ ಒಂ ಬತ್ತು ಗಂಟೆ ಬಡಿಯಿತೆಂದು ತಿಳಿಸಲು ತೋಫನ್ನು ಹಾರಿಸುವ ವಾಡಿಕೆಯಿತ್ತು. ಈಗ ಸಪ್ಪಳದಿಂದ ಸಮೀಪದ ಜನ ಒಂಬತ್ತು ಗಂಟೆಯಾಯಿತೆಂದೇ ತಿಳಿದರು. ಆದರೆ ಪುನಃ ತೋಫಿನ ದಿನದ ಸಪ್ಪ ಳವಾದಾಗ ಹತ್ತಿರದಲ್ಲಿದ್ದ ಜನ ಹೊರಗೆ ಬಂದು ರಕ್ತದ ಮಡುವಿನಲ್ಲಿ ಬಿದ್ದಿದ್ದ ದ್ರವಿಡ ಬಂಧು ಗಳನ್ನು ಎತ್ತಿ ಹೊರತೆಗೆದರು.

ಪೋಲೀಸರಿಗೆ ದ್ರವಿಡ ಬಂಧುಗಳ ಕೊಲೆ ಗಾರರಾರೆಂಬುದು ಸ್ಪಷ್ಟವೇ ಆಗಿ ಗೊತ್ತಿತ್ತು. ವಿಚಾರಣೆ ಮಾಡುವಾಗ ದ್ರವಿಡರ ಮನೆಯ ಎದುರಿಗೆ ಇರುವ ಲೋಂಡೆ ಎಂಬವನು ಕೊಲೆ ಯಾದ ರಾತ್ರಿಯ ವೇಳೆಗೆ ಖಂಡೋ ವಿಷ್ಣು ಸಾಠೆ ದ್ರವಿಡರ ಮನೆಯ ಮುಂದೆ ನಿಂತದ್ದನ್ನು ನೋಡಿದುದಾಗಿ ಪೋಲೀಸರಿಗೆ ಹೇಳಿದನು. ಆ ಮೂಲಕ ಸಾಠೆಗೂ ವಾಸುದೇವ ಮತ್ತು ರಾನಡೆಗೂ ಫರಾಸಖಾನಾದ ಪೋಲೀಸ್ ಕಚೇರಿಗೆ ಬರಬೇಕೆಂದು ಕರೆ ಹೋಯಿತು. ಅದರಂತೆ ಮೂವರೂ ಕಚೇರಿಗೆ ಹೋದಾಗ ಅಲ್ಲಿ ಬ್ರೆವಿನ್, ರಾಮುಜಿ ಪಾಂಡೆ ಇನ್ನೂ ಹಲವು ಪೋಲೀಸ್ ಅಧಿಕಾರಿಗಳು ಕುಳಿತಿದ್ದರು. ಪ್ರಶ್ನೋತ್ತರ ಮುಂದುವರಿಯಿತು. ತನ್ನ ದಿಮಾಕಿನಲ್ಲಿಯೇ ಇದ್ದ ರಾಮುಜಿ ಪಾಂಡೆ "ಚಾಫೇಕರ ಬಂಧುಗಳೆಲ್ಲರೂ ಬದ್ಮಾಷ್ ಜನರು!" ಎಂದು ಹೇಳುತ್ತಲೂ ವಾಸುದೇವನಿಗೆ ಪಿತ್ತವೇರಿತು. ತಾನು ಅಡಗಿಸಿ ತಂದಿದ್ದ ಪಿಸ್ತೂ ಲನ್ನು ರಾಮುಜಿ ಪಾಂಡೇ ಎದೆಗೆ ಹಿಡಿದನು. ಆದರೆ ಅಷ್ಟರಲ್ಲಿಯೆ ಬ್ರೆವಿನ್ ಸಾಗರ ಬಿದ್ದು ವಾಸುದೇವನ ಕೈಯನ್ನು ಹಿಡಿಯುತ್ತಲೂ ಅದರ ಗುರಿ ತಪ್ಪಿ ಬೇರೆಡೆಗೆ ಹಾರಿತು! ಇಲ್ಲವಾದರೆ ಪೋಲೀಸ್ ಪಡೆಯ ಮಧ್ಯದಲ್ಲಿಯೆ ರಾಮುಜಿಯ ಅಂತ್ಯವಾಗುತ್ತಿತ್ತು.

ಆ ಗಳಿಗೆಗೆ ವಾಸುದೇವ ಮತ್ತು ರಾನಡೆ ತಾವು ದ್ರವಿಡರನ್ನು ಕೊಂದದ್ದನ್ನೂ ಅದರ ಎಲ್ಲ ವಿವರಗಳನ್ನೂ ತಾವಾಗಿ ವಿವರಿಸಿದರು. ಹಿಂದಿನ ದಿನ ದ್ರವಿಡ ಬಂಧುಗಳು ಕೈಗೆ ಸಿಕ್ಕದಿ ದ್ದರೆ ತುಂಬಿದ ಕೋರ್ಟಿನಲ್ಲಿಯಾದರೂ ಅವ ರನ್ನು ತೀರಿಸದೇ ಬಿಡುತ್ತಿದ್ದಿಲ್ಲ, ಎಂದು ರಾನಡೆ ಸ್ಪಷ್ಟವಾಗಿ ಸಾರಿದನು!

ಫರಾಸಖಾನಾದಲ್ಲಿ ಇದು ನಡೆದಿದ್ದಾಗ ಅದೇ ದಿನ ಸೆಶನ್ಸ್ ಕೋರ್ಟಿನಲ್ಲಿ ರ್‍ಯಾಂಡ್, ಆಯರ್ಸ್ಟರ ಕೊಲೆಯ ಬಗ್ಗೆ, ಬಾಳಕೃಷ್ಣನ ವಿಚಾರಣೆ ನಡೆಯಲಿತ್ತು. ಅದನ್ನೀಗ ಮುಂದೆ ಹಾಕಿದರು. ವಾಸುದೇವ, ರಾನಡೆಯವರು ಜೀವದ ಹಂಗನ್ನೇ ತೊರೆದವರಾದ್ದರಿಂದ ತಾವು ದ್ರವಿಡರ ಕೊಲೆ ಯನ್ನಲ್ಲದೇ ರ್‍ಯಾಂಡ್, ಆಯರ್‌ಸ್ಟರ ಕೊಲೆ ಯನ್ನು ಮಾಡುವಲ್ಲಿಯೂ ತಾವೇ ಇದ್ದೆವೆಂದು ಹೇಳಿಕೆ ಕೊಟ್ಟರು. ಖಂಡೋ ಸಾಠೇ ಕೂಡ ತನ್ನ ಅಂಗವೇನಿತ್ತೆಂಬುದನ್ನು ಒಪ್ಪಿಕೊಂಡನು.

ತನಗಾಗಿ ತನ್ನ ತಮ್ಮ ಹಾಗೂ ಆತ್ಮೀಯ ಸಂಗಾತಿಗಳು ಅಪಾದನೆಯನ್ನೆಲ್ಲ ತಮ್ಮ ಮೇಲೆ ಹೊತ್ತುಕೊಂಡದ್ದನ್ನು ಕೇಳಿ ಬಾಳಕೃಷ್ಣನ ಹೃದಯ ಕಳವಳಿಸಿತು. ಅವರ ಹೇಳಿಕೆಗೆ ಪ್ರತಿಯಾಗಿ "ಅವರು ಹೇಳಿದ್ದೆಲ್ಲ ಸುಳ್ಳೆಂದೂ ರ್‍ಯಾಂಡ್ ಮತ್ತು ಆಯರ್ಸ್ಟರನ್ನು ಕೊಲ್ಲುವಲ್ಲಿ ದಾಮೋದರನೊಂದಿಗೆ ತಾನೇ ಇದ್ದವನೆಂದೂ ಇನ್ನೊಂದು ಹೇಳಿಕೆಯಿತ್ತನು.

ಪರಿಣಾಮವೆಂದರೆ, ನಾಲ್ವರ ಅಪಾದನೆಗಳೂ ಸಿದ್ಧವಾದಂತಾದುವು!

ಸೆಶನ್ಸ್ ಕೋರ್ಟಿನಲ್ಲಿ ಮೊದಲಿಗೆ ದ್ರವಿಡರ ಕೊಲೆಯ ವಿಚಾರಣೆ ನಡೆಯಿತು ಆಪಾದಿತರು ಒಪ್ಪಿಕೊಂಡೇ ಬಿಟ್ಟದ್ದರಿಂದ ಜ್ಯೂರಿಗಳು ಬಹು ಸುಲಭವಾಗಿ ಮತ್ತು ಬೇಗ ತಮ್ಮ ನಿರ್ಣಯ ವನ್ನು ಕೊಟ್ಟರು. (ದಿ. ೨-೩-೧೮೯೯). ಆ ಪ್ರಕಾರ ವಾಸುದೇವ ಚಾಫೇಕರ ಮತ್ತು ಮಹಾ ದೇವರಾನಡೆ ಇವರಿಗೆ ಮರಣದಂಡನೆ ವಿಧಿಸಲ್ಪ ಟ್ಟಿತು. ಆದರೆ ಖಂಡೋ ವಿಷ್ಣು ಸಾಠೆ ಸ್ವಯಂ

ಕೊಲೆಯನ್ನು ಮಾಡದೇ ಅದಕ್ಕೆ ಬರಿಯೆ ಸಹಾಯಕನಾಗಿದ್ದುದರಿಂದಲೂ ತಾರುಣ್ಯದ ಪರಿಕೆಯಲ್ಲಿ ಇಂಥ ಮೂರ್ಖತನದ ಕೆಲಸ ಮಾಡಿದನೆಂದೂ ತೀರ್ಮಾನಿಸಿ ಅವನಿಗೆ ಬರಿಯೆ ಹತ್ತು ವರ್ಷದ ಸಶ್ರಮ ಶಿಕ್ಷೆಯನ್ನು ವಿಧಿಸಲಾಯಿತು.

ಅಲ್ಲಿಂದ ರ್ಯಾಂಡ್, ಆಯರ್ಸ್ಟ್‌ರ ಕೊಲೆಯ ವಿಚಾರಣೆಗೆ ಆರಂಭ! ಇದರಲ್ಲಿ ಬಾಳಕೃಷ್ಣನ ಜೊತೆಗೆ, ಈಗಾಗಲೇ ಮರಣದಂಡನೆಯನ್ನು ವಿಧಿಸಲಾದ ವಾಸುದೇವ, ಮಹಾದೇವರು ಕೂಡ ಅಪಾದಿತರಾಗಿದ್ದರು. ಆಯರ್ಸ್ಟ್, ರ್ಯಾಂಡರನ್ನು ಕೊಂದವನು "ನಾನು" "ನಾನು" ಎಂದು ಮೂವರೂ ಹೇಳುತ್ತಿದ್ದರಷ್ಟೆ. ನಿಜವಾಗಿ ಅವನನ್ನು ಕೊಂದವನೇ ಇರಲಿ, ಇಲ್ಲದಿರಲಿ ಉಳಿದ ಇಬ್ಬರೂ ಈ ಕಾರ್ಯದಲ್ಲಿ ಸಂಪೂರ್ಣ ಸಹಾಯಕರಾಗಿದ್ದುದರಿಂದ ಮೂವರಿಗೂ ಮರಣ ದಂಡನೆಯನ್ನು ವಿಧಿಸಲಾಯಿತು.

ತೀರ್ಪನ್ನು ಓದಿದ ಕೂಡಲೇ ರಾನಡೆ ಸೆಶನ್ಸ್ ನ್ಯಾಯಾಧೀಶರಾದ ಕ್ರೋ ಅವರನ್ನು ಕೇಳಿದ:

"ನಮಗೆ ಈಗಾಗಲೇ ಬೇರೊಂದು ಕೊಲೆಯ ಸಂದರ್ಭದಲ್ಲಿ ನೇಣು ಹಾಕಲು ಗೊತ್ತುಮಾಡಿದ್ದೀರಿ. ಈಗ ನಮ್ಮನ್ನು ಎರಡೆರಡು ಸಲ ಗಲ್ಲಿಗೆ ಹಾಕುವಿರೇನು ?"

ವಾಸುದೇವ ಕೇಳಿದ:

"ಈ ಎರಡು ತೀರ್ಪುಗಳಲ್ಲಿ ಯಾವುದು ಮೊದಲಿಗೆ ಜಾರಿಯಲ್ಲಿ ಬರಲಿದೆ ?"

ಅವರ ಈ ಮನೋಧೈರ್ಯಕ್ಕೆ ನೆರೆದವರೆಲ್ಲ ಬೆರಗಾದುದರಲ್ಲಿ ಆಶ್ಚರ್ಯ !

ಮುಂದೆ ಯಥಾಪ್ರಕಾರ ಎರಡೂ ತೀರ್ಪುಗಳ ವಿರುದ್ಧ ಹೈಕೋರ್ಟಿಗೆ ಅಪೀಲ್ ಮಾಡಲಾಯಿತು. ದ್ರವಿಡ ಕೊಲೆ ಖಟ್ಲೆಯ ಅಪೀಲಿನಲ್ಲಿ ಆಗಿನ ಕಾಲದ ಪ್ರಸಿದ್ಧ ಬ್ಯಾರಿಸ್ಟರರಾದ ದಾವರ ಮತ್ತು ಕಾಯದೆ ಅಜಂ ಜಿನ್ನಾರು ರಾನಡೆ ಹಾಗೂ ಸಾಠೆಯವರ ಪರವಾಗಿ ವಾದಿಸಿದರು. ವಾಸುದೇವನು ಮಾತ್ರ ತನಗಾವ ವಕೀಲರೂ ಬೇಡವೆಂದ. ಅಣ್ಣಂದಿರಿಬ್ಬರು ಹಿಡಿದ ದಾರಿಯೇ ತನ್ನದಾಗಿರುವಾಗ ತನ್ನನ್ನು ರಕ್ಷಿಸಿಕೊಳ್ಳುವ ಈ ಯತ್ನವೇಕೆ ಎಂಬುದು ಅವನ ವಿಚಾರವಾಗಿತ್ತು. ಹೈಕೋರ್ಟಿನಲ್ಲಿ ಅದೇ

ಪಾರ್ಸನ್ಸ್ ಮತ್ತು ರಾನಡೆ ನ್ಯಾಯಾಧೀಶರಾಗಿದ್ದರು.

ಈ ಹೈಕೋರ್ಟ್ ವಿಚಾರಣೆಯ ಒಂದು ಮೋಜಿನ ಸಂಗತಿಯೆಂದರೆ, ಆ ನ್ಯಾಯಾಧೀಶರಿಬ್ಬರೂ ಸೆಶನ್ಸ್ ಕೋರ್ಟು ವಿಧಿಸಿದ ಶಿಕ್ಷೆಯನ್ನು ಸ್ಥಿರಗೊಳಿಸಿದರೂ ಬಿಳಿಯರಾದ ಪಾರ್ಸನ್ಸ್ ಅವರು " ಬಾಳಕೃಷ್ಣನು ರ್ಯಾಂಡ್‌ನ ಕೊಲೆಗೆ ಸಹಾಯಕನಾದದ್ದು ನಿಜ. ಅವನಿಗೆ ಶಿಕ್ಷೆ ವಿಧಿಸಬೇಕಾದದ್ದೂ ನ್ಯಾಯವೇ. ಆದರೆ ಅವನು ಸ್ವತಃ ಕೊಲೆಗೈದನೆಂಬುದಕ್ಕೆ ಸಾಕಷ್ಟು ಪುರಾವೆಗಳಿಲ್ಲವಾದುದರಿಂದ ಸರಕಾರವು ಅವನಿಗೆ 'ದಯೆ' (clemency) ಅಥವಾ ಅವನ ಶಿಕ್ಷೆಯಲ್ಲಿ ರಿಯಾಯ್ತಿಯನ್ನು ತೋರುವ 'ಅಪೇಕ್ಷೆ ಇದ್ದರೆ ಹಾಗೆ ಮಾಡಬಹುದು" ಎಂದು ಸೂಚಿಸಿದರು. ಅದೇ ಇನ್ನೊಬ್ಬ ನ್ಯಾಯಾಧೀಶ ರಾನಡೆಯವರು ಇದಕ್ಕೆ ಒಪ್ಪಲಿಲ್ಲ ಮತ್ತು ಬಾಳಕೃಷ್ಣನು ಖಂಡಿತವಾಗಿ ಮರಣದಂಡನೆಗೆ ಅರ್ಹನಾಗಿದ್ದಾನೆ ಎಂದು ತಮ್ಮ ತೀರ್ಪಿನಲ್ಲಿ ಹೇಳಿದರು !

ಎರಡೆರಡು ದಿನಗಳ ಅಂತರದಲ್ಲಿ ಮೂವರನ್ನೂ ಗಲ್ಲಿಗೇರಿಸಲು ಆಜ್ಞೆಯಾಗಿತ್ತು.

ಪಾರ್ಸನ್ಸರ ಈ ವಿಶೇಷ ಅಭಿಪ್ರಾಯವನ್ನು ಕೈಗೆತ್ತಿಕೊಂಡು, ಬಾಳಕೃಷ್ಣನ ವಕೀಲರು ಮುಂಬೈ ಸರಕಾರಕ್ಕೆ ಮತ್ತೊಮ್ಮೆ ಮನವಿ ಸಲ್ಲಿಸಿ ಅವನ ಶಿಕ್ಷೆಯನ್ನು ಕಡಿಮೆಮಾಡಬೇಕೆಂದು ಕೇಳಿಕೊಂಡರು. ಮರಣದಂಡನೆಗೆ ಗುರಿಯಾದ ಇನ್ನಿಬ್ಬರ ಪರವಾಗಿಯೂ ಅರ್ಜಿಗಳನ್ನು ಸಲ್ಲಿಸಲಾಗಿತ್ತು. ಆದರೆ ಈಗ ಬಿಡುಗಡೆ ಹೊಂದಿದರೆ ಮೊದಲು ರಾಮಜ ಪಾಂಡೆಯನ್ನು ತೀರಿಸುವುದಾಗಿ ಆರೋಪಿಗಳು ಬಹಿರಂಗವಾಗಿ ಹೇಳುತ್ತಿರುವಾಗ ಅವರಿಗೆ ದಯೆ ತೋರಿಸುವುದು ತನ್ನಿಂದಾಗದೆಂದು ಹೇಳಿ ಗವರ್ನರ್ ಅದನ್ನು ನಿರಾಕರಿಸಿದನು.

ಬಾಳಕೃಷ್ಣನಿಗೆ ಕ್ಷಮೆತೋರುವ ವಿಷಯದಲ್ಲಿ ಗವರ್ನರನು— "ನ್ಯಾಯಮೂರ್ತಿ ರಾನಡೆಯವರ 'ಯೋಗ್ಯ, ವಿಚಾರಿತ ಮತ್ತು ಧೀರ' ತೀರ್ಪನ್ನೇ ನಾನು ಪೂರ್ತಿ ಎತ್ತಿಹಿಡಿಯುತ್ತೇನೆ" ಎಂದು ರಾನಡೆಯವರನ್ನು ತೋರಿಸಿ ತಾನು ಜಾರಿಕೊಂಡನು.

ಗವರ್ನರನ ನಿರ್ಣಯದ ವಿರುದ್ಧ ಭಾರತ ಸರಕಾರಕ್ಕೆ ಬಾಳಕೃಷ್ಣ ಅಪೀಲು ಮಾಡಿದ. ಆದರೆ ತನ್ನ ಅರ್ಜಿಯ ಕೊನೆಯಲ್ಲಿ "ತಾವಂದರವರು ನನ್ನ ಶಿಕ್ಷೆಯನ್ನು ಕಡಿಮೆ ಮಾಡುವುದಿಲ್ಲವೆಂದಾದರೆ ಇದೊಂದು ದಯೆಯನ್ನಾದರೂ ಕರುಣಿಸಬೇಕು: ಅದೇನೆಂದರೆ ನನ್ನ ತಮ್ಮ ವಾಸುದೇವನನ್ನು ಗಲ್ಲಿಗೆ ಹಾಕುವ ದಿನವೇ ನನ್ನನ್ನೂ ಗಲ್ಲಿಗೇರಿಸಬೇಕು. ಅವನೊಟ್ಟಿಗೇ ನಾನೂ ಸಾಯುವೆನೆಂಬ ಅಲ್ಪ ಸಮಾಧಾನವನ್ನಾದರೂ ನನಗೆ ತಂದುಕೊಟ್ಟಂತಾಗುತ್ತದೆ" ಎಂದು ಸೇರಿಸಿದನು.

ರಾನಡೆಯ ಮನವಿಯ ಕೊನೆಯ ವಾಕ್ಯವು ಕೂಡ ಇದೇ ಧರತಿಯದಾಗಿತ್ತು:

"ನಮ್ಮ ಮೂವರ ಮರಣದಂಡನೆಯು ಸ್ಥಿರವೆಂದೇ ಆದರೆ, ಆ ದಂಡನೆಗೆಂದು ಒಂದೇ ದಿನವನ್ನು ಗೊತ್ತುಮಾಡಬೇಕಾಗಿ ತಮ್ಮಲ್ಲಿ ವಿಜ್ಞಾಪನೆ. ಅದರಿಂದ ನಮಗಂತೂ ಸಮಾಧಾನ ಸಿಗುವುದು. ಪೋಲೀಸರಿಗೂ ಅದರಿಂದ ತುಂಬ ಅನುಕೂಲವಾಗುವುದು. ನಮ್ಮ ವಧಸ್ಥಾನದಲ್ಲಿ ಮೂರು ಕೊಂಡಿಗಳು ಹೇಗೂ ಇದ್ದು, ಅಧಿಕಾರಿಗಳಿಗೆ ಮೂರು ಮೂರು ಸಲ ಪ್ರತ್ಯೇಕವಾಗಿ ವ್ಯವಸ್ಥೆ ಮಾಡುವ ತೊಂದರೆ ತಪ್ಪುತ್ತದೆ!"

ಭಾರತ ಸರಕಾರವು ಈ ವಿಷಯದಲ್ಲಿ ಒಟ್ಟೇ ಯಾವ ತೊಂದರೆಯನ್ನೂ ತೆಗೆದುಕೊಳ್ಳಲಿಲ್ಲ.

೧೮೯೯ ರ ಮೇ ೮ ರಂದು ವಾಸುದೇವನ ಇಹಲೋಕದ ಕೊನೆಯ ದಿನ. ಹಿಂದಿನ ದಿನ ಅವನೂ ಉಪವಾಸವನ್ನು ಮಾಡಿದನು. ರಾತ್ರಿ ೧ ಗಂಟೆಗೆ ಎಚ್ಚರವಾಯಿತು. ಎದ್ದು ಕುಳಿತು ದೇವರ ಪ್ರಾರ್ಥನೆಯಲ್ಲಿ ತೊಡಗಿದನು. ಅವನ ಕೈಯಲ್ಲಿಯೂ ಭಗವದ್ಗೀತೆಯಿದ್ದಿತು. ಬೆಳಗಿನ ೭ ಗಂಟೆಗೆ ಕೆಲವು ನಿಮಿಷ ಮುಂಚೆ ಅವನನ್ನು ಜೇಲಿನ ಕೋಣೆಯಿಂದ ಹೊರಗೆ ಕರೆದುಕೊಂಡು ಬಂದರು. ದಾರಿಯಲ್ಲಿಯೇ ಬಾಳಕೃಷ್ಣನ ಕೋಣೆ. "ಬಾಪೂ, ನಾನು ಹೋಗುತ್ತೇನೆ" ಎಂದು ವಾಸುದೇವನು ಸ್ಫುಟವಾದ ಧ್ವನಿಯಿಂದ ನುಡಿದಾಗ "ಹೋಗಿ ಬಾ" ಎಂದು ಬಾಳಕೃಷ್ಣನು ಬಾಯ್ತುಂಬ ಹರಸಿದ ಪ್ರಸಂಗ

# ನಿರಂತರ ಸಂಶೋಧನೆಯ ಫಲ – ಹಮ್‌ದರ್ದ್

## ತಯಾರಿಕೆಗಳ ಗುಣಕಾರಕ ಪ್ರಭಾವ

ದೀರ್ಘಕಾಲದ ಉಪಯೋಗದಿಂದ ಗುಣಕಾರಕವೆಂದು ಪ್ರಮಾಣಿತವಾದ ಯುನಾನೀ ತಯಾರಿಕೆಗಳನ್ನು ಹಮ್‌ದರ್ದ್ ಪ್ರಯೋಗಶಾಲೆಗಳಲ್ಲಿ ನಿರಂತರವಾಗಿ ನಡೆಯುವ ಸಂಶೋಧನೆಯು ಇನ್ನಷ್ಟು ಸುಧಾರಿಸಿದೆ. ಚಿಕಿತ್ಸಾ ಸಂಬಂಧದ ವ್ಯಾಪಕ ಪ್ರಯೋಗಗಳು, ಪುನಃಪುನಃ ಮಾಡುವ ಶೋಧನೆ ಮತ್ತು ರಾಸಾಯನಿಕವಾಗಿ ಪೃಥಕ್ಕರಣಮಾಡಿ ನಡೆಯಿಸುವ ಪರೀಕ್ಷೆಗಳು—ಇವು ಎಲ್ಲಾ ಹಮ್‌ದರ್ದ್ ಉತ್ಪಾದನಗಳ ಶುದ್ಧತೆಯನ್ನೂ, ಪ್ರಭಾವವನ್ನೂ ಖಚಿತಗೊಳಿಸುತ್ತವೆ.

ಪ್ರಕೃತಿಯು ಸಸ್ಯ ಹಾಗೂ ಪ್ರಾಣಿಜನ್ಯ ಸಾಧನ-ಸಂಪತ್ತಿಗಳ ಕ್ರಿಯೆಗಳನ್ನು ತಿಳಿದುಕೊಳ್ಳುವುದಕ್ಕೂ, ಪಕ್ವತೆಯು ಸರಿಯಾದ ಮಟ್ಟದಲ್ಲಿ ಹೊಸ ಮಿಶ್ರಣಗಳಾಗುವಂತೆ ಅವನ್ನು ಒಟ್ಟು ಸೇರಿಸುವುದಕ್ಕೂ ಮತ್ತು ಆ ಮೂಲಕ ಜನತೆಗೆ ಪರಮಾವಧಿ ಹಿತವನ್ನು ಉಂಟುಮಾಡುವುದಕ್ಕೂ ಹಮ್‌ದರ್ದ್ ಪ್ರಯೋಗಶಾಲೆಗಳು ಸಂಶೋಧನೆಯನ್ನು ಮುಂದುವರಿಸುತ್ತಿವೆ.




### ಮೌಲ್ಲಮ್ :

ಇದರಲ್ಲಿ ಸುಲಭವಾಗಿ ಪಚನವಾಗುವ ಪ್ರೊಟೀನ್ ಅಧಿಕ ಪ್ರಮಾಣದಲ್ಲಿ ಇದೆ. ಇದು ಹಸಿವನ್ನೂ ರಕ್ತದ ರಚನೆಯನ್ನೂ ಸುಧಾರಿಸುತ್ತದೆ, ಮತ್ತು ಹೊಸ ಶಕ್ತಿ ಹಾಗೂ ಉತ್ಸಾಹವನ್ನು ಉಂಟುಮಾಡಿ ಇಡೀ ಶರೀರ ಪದ್ಧತಿಯನ್ನು ಚುರುಕುಗೊಳಿಸುತ್ತದೆ.



### ನೌನಿಹಾಲ್ :

ಗ್ರೈಪ್ ಸಿರಪ್ ಮತ್ತು ಬೇಬಿ ಟಾನಿಕ್–ಇದರಲ್ಲಿ ಮಕ್ಕಳ ಮಲಬದ್ಧತೆ, ಅಜೀರ್ಣ, ವಾಯುವಿಕಾರ, ವಾಂತಿ, ಭೇದಿ, ಯಕೃತ್‌ನ (ಲಿವರ್) ತೊಂದರೆಗಳು, ನಿದ್ದೆಬಾರದಿರುವುದು, ವಿಪರೀತ ಜೊಲ್ಲು ಬರುವುದು ಮತ್ತು ವಿಪರೀತ ಬಾಯಾರಿಕೆ ಇತ್ಯಾದಿ ಅಸ್ವಸ್ಥತೆಗಳನ್ನು ಸರಿಪಡಿಸುವ ಸತ್ವಗಳಿವೆ. ಈ ಟಾನಿಕ್ ಶಿಶುಗಳಿಗೆ ಶಕ್ತಿದಾಯಕವಾಗಿದೆ.



### ರೂಹ್ ಆಫ್ಜಾ :

ಇದು ಯಾವಾಗಲೂ, ವಿಶೇಷವಾಗಿ ಸೆಕೆಗಾಲದಲ್ಲಿ ಬಹಳ ಉಲ್ಲಾಸದಾಯಕ ಪೇಯವಾಗುತ್ತದೆ. ವಿಪರೀತ ಸೆಕೆಯಲ್ಲಿಯೂ ಇದು ಶಕ್ತಿಯನ್ನು ಉಳಿಸುತ್ತದೆ, ಬಾಯಾರಿಕೆಯನ್ನು ನಿವಾರಿಸುತ್ತದೆ, ಮತ್ತು ಉಷ್ಣದ ಆಘಾತದಿಂದ (ಹೀಟ್ - ಸ್ಟ್ರೋಕ್) ಉಂಟಾಗುವ ಪರಿಣಾಮಗಳನ್ನು ಎದುರಿಸುತ್ತದೆ. ಅದರ ಹತ್ತೊಂಬತ್ತು ಪ್ರಾಕೃತಿಕ ಘಟಕಗಳು ಒಳ್ಳೆಯ ಆರೋಗ್ಯದಿಂದಿರಲು ಸಹಾಯ ಮಾಡುತ್ತವೆ.




### ಸಫಿ

ರಕ್ತವನ್ನು ಶುದ್ಧಗೊಳಿಸುತ್ತದೆ ಮತ್ತು ಕರುಳು, ಮೂತ್ರಪಿಂಡ ಮತ್ತು ಚರ್ಮ, ಇವುಗಳ ಮೂಲಕ ಶರೀರದ ಕಶ್ಮಲಗಳನ್ನು ಹೊರಗೆಡಹುವಂತೆ ಶಾರೀರಕ ಪದ್ಧತಿಗೆ ಸ್ಫೂರ್ತಿಯನ್ನೀಯುತ್ತದೆ.




### ಜೋಶಿನಾ :

'ಕಟಾರ್', ನೆಗಡಿ, ಮೂಗಿನಿಂದ ನೀರು ಸುರಿದುಕೊಂಡಿರುವುದು–ಇವುಗಳ ಚಿಕಿತ್ಸೆಗೆ ಬಹಳ ಉಪಯುಕ್ತವಾಗಿದೆ. ನೆಗಡಿಯು ಅಥವಾ ತಲೆಯಲ್ಲಿ ನೆಗಡಿ ತುಂಬಿರುವುದರ ಲಕ್ಷಣ ಕಂಡುಬಂದಾಗಲೇ ಜೋಶಿನಾವನ್ನು ಸ್ವಲ್ಪ ಬಿಸಿನೀರಿಗೆ ಸೇರಿಸಿ ತೆಗೆದುಕೊಳ್ಳಿರಿ.




### ಸಿಂಕಾರಾ :

ಇದು ವೈದ್ಯರಿಗೆ ದೀರ್ಘಕಾಲದಿಂದ ಪರಿಚಿತವಾದ, ಔಷಧೀಯ ಗುಣಗಳಿರುವ, ನಾನಾ ಗಿಡಮೂಲಿಕೆಗಳಿಂದ ಕೂಡಿರುವ ಪೌಷ್ಟಿಕ ಹಾಗೂ 'ವಿಟಮಿನ್' ಯುಕ್ತ ಟಾನಿಕ್ಕಾಗಿದೆ.




**ದೆಹಲಿ • ಕಾನ್‌ಪುರ್ • ಪಾಟ್ನ**

ಇನ್ನು ಹುತಾತ್ಮರಾದವರನ್ನು ಬಿಟ್ಟು ಉಳಿದವರ ಸ್ಥಿತಿ ಏನಾಯಿತೆಂಬುದನ್ನು ಸ್ವಲ್ಪ ನೋಡೋಣ. ಚಾಫೇಕರ ಬಂಧುಗಳ ತಾಯಿಯು ತನ್ನ ಹಿರಿಯ ಮಗನ ಸಾವಿನ ಆಘಾತವನ್ನು ತಾಳಲಾರದೆ ಆ ಮುಂಚೆಯೇ ತೀರಿಕೊಂಡಳು. ತಂದೆ ಇತರ ಮಕ್ಕಳ ಸಾವನ್ನೂ ಕಂಡು ಮರುವರ್ಷ ಕಣ್ಣುಮುಚ್ಚಿದನು. ಮೂವರೂ ಬಂಧುಗಳಿಗೂ ಮದುವೆಯಾಗಿತ್ತು. ಬಾಳಕೃಷ್ಣನ ಹೆಂಡತಿ— ಯಮುನಾ ೧೯೦೧ ರಲ್ಲಿ ವಾಸುದೇವನ ಹೆಂಡತಿ—ಸೀತಾಬಾಯಿ ೧೯೨೦ರಲ್ಲಿ ತೀರಿಕೊಂಡರು. ಹಿರಿಯವನಾದ ದಾಮೋದರನ ಹೆಂಡತಿ ಮಾತ್ರ ೮೦ ವರ್ಷದ ವರೆಗೂ ಬದುಕಿ ಇದ್ದು, ತನ್ನ ಗಂಡನ ಜೀವಿತದ ಧ್ಯೇಯವಾಗಿದ್ದ ಭಾರತ ಸ್ವಾತಂತ್ರ್ಯವನ್ನು ಕಂಡಳು.

ಸಾಠೆಗೆ ಹತ್ತು ವರ್ಷದ ಪೂರ್ಣ ಶಿಕ್ಷೆಯನ್ನು ಅನುಭವಿಸುವ ಅಗತ್ಯ ಬೀಳಲಿಲ್ಲ. ೧೯೦೪ರಲ್ಲಿಯೇ ಅವನು ಹೊರಬಂದನು. ಅವನಂಥ ಧೈರ್ಯದ, ಸಾಹಸಪ್ರವೃತ್ತಿಯ ತರುಣರು ಪೋಲೀಸ್ ಖಾತೆಯಲ್ಲಿರಲು ಯೋಗ್ಯರೆಂದು ಬ್ರುವಿನ್ ಅವನನ್ನು ತನ್ನ ಖಾತೆಯಲ್ಲಿ ಸೇರಿಸಿಕೊಂಡನು.

ಅವರ್ಣನೀಯವಾಗಿತ್ತು. ಅಲ್ಲಿಂದ ಅನತಿ ದೂರದಲ್ಲಿ ಸಾಠೆಯನ್ನು ಇಟ್ಟಿದ್ದ ಕೋಣೆ. ಸಾಠೆ ಬಾಗಿಲ ಸಳಿಗಳತ್ತ ಧಾವಿಸಿ ಬಂದಾಗ ವಾಸುದೇವನು, "ಖಂಡೂ, ನಾವೆಲ್ಲ ಹೊರಟವರೇ, ಇಲ್ಲಿಯೇ ಉಳಿಯುವ ನೀನೊಬ್ಬನೇ ನಿಜವಾಗಿ ದುರ್ದೈವಿ" ಎಂದನು.

ಅಲ್ಲಿಂದ ವಧಸ್ಥಾನದತ್ತ ಧೀರಗತಿಯಿಂದ ಹೆಜ್ಜೆ ಹಾಕಿದ ವಾಸುದೇವನ ಉಸಿರನ್ನು ಕೊನೆಗೊಮ್ಮೆ ನಿಲ್ಲಿಸಿದಾಗ ದಾಮೋದರನ ಮರಣಶಿಕ್ಷೆಯ ದೃಶ್ಯವೇ ಮರುಕಳಿಸಿದಂತಾಗಿತ್ತು.

ದಿ. ೧೦-೫-೧೮೯೯ ರಾನಡೆಯ ಸರತಿ. ಅವನೂ ಉಪವಾಸವಿದ್ದ. ಬಾಳಕೃಷ್ಣನ ಕೋಣೆಯ ಹತ್ತಿರ "ಬಾಳಾ, ನಾನು ಹೊರಟೆ" ಎಂದಾಗ ಬಾಳಕೃಷ್ಣನು "ಇನ್ನೆರಡು ದಿನಕ್ಕೆ ನಾನೂ ಬರುತ್ತೇನೆ" ಎಂದು ಉದ್ಗಾರವೆತ್ತಿದನು

ಎರಡು ದಿನಗಳ ನಂತರ ಸಾವೆ ಬಾಳಕೃಷ್ಣನನ್ನೂ ಬೀಳ್ಕೊಂಡನು. ಯಾವ ಗಲಾಟೆಯಿಲ್ಲದೆ, ಅತ್ಯಂತ ನಿರ್ವಿಘ್ನವಾಗಿ ಚಾಫೇಕರ ಬಂಧುಗಳ ಹಾಗೂ ಮಹಾದೇವ ರಾನಡೆಯ ಅವಸಾನವಾಯಿತು. ಬಂಡ್ ಗಾರ್ಡನ್‌ನಲ್ಲಿಯೆ ಆ ಮೂವರ ದಹನಕ್ರಿಯೆ ಜರುಗಿತು.

ಚಾಫೇಕರರ ಬಲಿದಾನವು ಹುಸಿ ಹೋಗಲಿಲ್ಲ. ದೇಶದಲ್ಲೆಲ್ಲ ಜನ ಕಣ್ಣು ತಿಕ್ಕಿಕೊಂಡು ಎದ್ದು ಕೂಡ್ರುವಂತೆ ಮಾಡಿತದು. ಅವರು ಕೈಕೊಂಡ ಕಾರ್ಯ ಬೇರೆ ಬೇರೆ ರೂಪಗಳಲ್ಲಿ ಮುಂದುವರಿಯಿತು. ಅರ್ಧ ಶತಮಾನದೊಳಗೇ ಭಾರತ ಸ್ವತಂತ್ರವಾಯಿತು. *

ಸಹಾಯ ಸಾಮಗ್ರಿ:

೧. ಮುಂಬಯಿ ಸರಕಾರ ಪ್ರಕಟಿಸಿದ Source Material for a History of the Freedom, Movement in India.

೨. "ಭಾರತ ಜ್ಯೋತಿ" ಯಲ್ಲಿ ೧೯೫೫ ರಲ್ಲಿ ಪ್ರಕಟವಾದ ಶ್ರೀ. ವಿ. ಎಸ್. ಜೋಶಿಯವರ ಲೇಖನಮಾಲೆ.



This Magazine owned by the Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.

